ವಾಸುದೇವ ಸಾಹಿತ್ಯರತ್ನಮಾಲೆ— ೨

ಭ್ರಾತೃಘಾತಕನಾದ

# ಔರಂಗಜೇಬ

(ಐತಿಹಾಸಿಕ ಸ್ವತಂತ್ರ ರೋಮಾಂಚಕಾರಿ ಕಾದಂಬರಿ)

ಬರೆದವರು :

ಕೆರೂರ ವಾಸುದೇವಾಚಾರ್ಯರು

೧೯೪೬

ವಾಸುದೇವ ಸಾಹಿತ್ಯರತ್ನಮಾಲೆ
ಬಾಗಿಲಕೋಟೆ

ಪ್ರಕಾಶಕರು :
ಸ್ವಾಮಿ ರಾ. ಕೆರೂರ
ಜಿ. ಬಿ. ಜೋಶಿ
ವಾಸುದೇವ ಸಾಹಿತ್ಯರತ್ನಮಾಲೆ
ಬಾಗಿಲಕೋಟೆ



ಪುಸ್ತಕಮಾರಾಟಗಾರರು :

ಜೀವನ ಪುಸ್ತಕಾಲಯ

ಧಾರವಾಡ — ಗದಗ — ಬಾಗಿಲಕೋಟೆ

ಬೆಲೆ : ೩—೦—೦

ಮುದ್ರಕರು:
ವಿ. ಯು. ಜಠಾರ
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್
ಧಾರವಾಡ

# ಮೊದಲ ಮಾತು

ಇದು ವಾಸುದೇವ ಸಾಹಿತ್ಯರತ್ನಮಾಲೆಯ ಎರಡನೆಯ ರತ್ನ.

ದಿವಂಗತ ಕೆರೂರ ವಾಸುದೇವಾಚಾರ್ಯರು ಬರೆದ ಸಾಹಿತ್ಯವನ್ನು ಪ್ರಕಟಗೊಳಿಸುವ ಕಾರ್ಯದಲ್ಲಿ ನನಗೆ ಬೆಂಬಲಿಗರಾಗಿ ನಿಂತು ಎಲ್ಲ ರೀತಿಯಿಂದಲೂ ಸಹಾಯ ಮಾಡುತ್ತಿರುವ ಶ್ರೀಮಾನ್ ಜಿ. ಬಿ. ಜೋಶಿ ಯವರಿಗೆ ನಾನು ಕೃತಜ್ಞನಾಗಿದ್ದೇನೆ.

'ಸಚಿತ್ರ ಭಾರತ'ದ ಸಂಚಿಕೆಗಳನ್ನು ಕೊಟ್ಟು ಗ್ರಂಥಪ್ರಕಟನೆಗೆ ಸಹಾಯ ಮಾಡಿದ ಹುಬ್ಬಳ್ಳಿಯ ಶ್ರೀಸರಸ್ವತಿ ವಿದ್ಯಾರಣ್ಯ ವಾಚನಾಲ ಯದ ಸಂಚಾಲಕರಿಗೂ, ಶ್ರೀ. ಮಂಗಳವೇಢೆ ಶ್ರೀನಿವಾಸರಾಯರಿಗೂ ಅಲ್ಲದೆ ಇನ್ನೂ ಅನೇಕ ಸಹೃದಯರಿಗೂ ನಾನು ಉಪಕೃತನಾಗಿದ್ದೇನೆ

ಹೊದಿಕೆ ಚಿತ್ರಕ್ಕಾಗಿ ಶ್ರೀಮಾನ್ ರಾಘವೇಂದ್ರರಿಗೆ ನನ್ನ ವಂದನೆಗಳು.

— ಸ್ವಾಮಿ ರಾ. ಕೆರೂರ

## ಮುಂದಿನ ರತ್ನಗಳು

# ತೊಳೆದ ಮುತ್ತು

ಮತ್ತು

## ಇತರ ಕಥೆಗಳು

( ೨೫ ಸಂಪೂರ್ಣ ಕತೆಗಳ ಸಂಗ್ರಹ )

**ಸುಮಾರು ೪೦೦ ಪುಟಗಳು !**



# ಯವನ ಸೈರಂಧ್ರಿ

( ಐತಿಹಾಸಿಕ ರಮ್ಯ ಕಾದಂಬರಿ )



# ವಾಲ್ಮೀಕಿ ವಿಜಯ

( ಪೌರಾಣಿಕ ಕಾದಂಬರಿ )

# ಔರಂಗಜೇಬ

## ೧

ಎರಡು ನೂರು ವರುಷಗಳಾಚೆಗೆ ದಿಲ್ಲಿಯ ಸಾಮ್ರಾಜ್ಯವೆಂದರೆ ಸಕಲಾರ್ಥಗಳನ್ನೀಯುವ ಕಲ್ಪವೃಕ್ಷವೇ ಆಗಿತ್ತು. ಫಲದ್ರೂಪವಾಗಿರುವ ನಮ್ಮ ಹಿಂದುಸ್ಥಾನ ದೇಶದಲ್ಲಿ ಯಾವ ಮಹಾತ್ಮರ ಪುಣ್ಯಬಲದಿಂದಲೋ ಏನೋ, ಕಾಲಕಾಲಕ್ಕೆ ಬೇಕಾದಷ್ಟು ಮಳೆಯಾಗಿ, ಎಲ್ಲಿ ನೋಡಿದಲ್ಲಿ ಹೊಲಗಳೆಲ್ಲ ಬೆಳೆಯಿಂದ ತುಂಬಿದ್ದವು. ಪ್ರಜರು ನಿಸ್ಸೀಮವಾದ ರಾಜಭಕ್ತಿಯುಳ್ಳವರಾಗಿ, ದಿಲ್ಲಿಯ ಸಾರ್ವಭೌಮನ ಆಜ್ಞಾನುವರ್ತಿಗಳಾಗಿ ನಡ-ಕೊಳ್ಳುತ್ತಿರುವದರಿಂದ, ಪಾರ್ಥಿವಜನಪದಗಳಲ್ಲಿ ವಿರೋಧವಿಲ್ಲದೆ ದೇಶದ ತುಂಬ ಸುಖಶಾಂತಿಗಳು ನೆಲೆಗೊಂಡಿದ್ದವು. ಸುವರ್ಣಭೂಮಿಯೆಂದೆ-ನ್ನಿಸಿಕೊಳ್ಳುವ ನಮ್ಮ ಹಿಂದುಸ್ಥಾನ ದೇಶವು, ಕಂದಾಯದ ರೂಪದಿಂದ ಬಾದಶಹನ ಮೇಲೆ ಬಂಗಾರದ ಮಳೆಗರೆಯುತ್ತಿತ್ತೆಂದು ಹೇಳಿದರೆ ನಮ್ಮ ವಾಚಕರಿಗೆ ವಿಪರೀತವಾಗಿ ಕಾಣಲಿಕ್ಕಿಲ್ಲ. ಸಾಹಸಿಗಳಾದ ಮುಸಿಗಾರರು ಭೂಗರ್ಭವನ್ನು ಬಗೆದು ಬೆಳ್ಳಿ, ಬಂಗಾರ, ತಾಮ್ರ ಮುಂತಾದ ಧಾತುಗಳ ರಾಶಿಯನ್ನು ಪ್ರತಿವರ್ಷ ಅಕಬರನ ವಂಶಜರ ಮುಂದೆ ತಂದು ಒಟ್ಟು-ತ್ತಿದ್ದರು. ಗೋವಳಕೊಂಡವೇ ಮುಂತಾದ ಸ್ಥಳಗಳಲ್ಲಿರುವ ಈ ಗಣಿಗಳಲ್ಲಿ ಸಿಕ್ಕುವ ಅನರ್ಘ್ಯವಾದ ರತ್ನರಾಶಿಗಳೆಲ್ಲ ದಿಲ್ಲೀಶ್ವರನ ಸ್ವಾಧೀನವಾಗು-ತ್ತಿದ್ದವು. ಈ ದೇಶದಲ್ಲಿ ಸಮೃದ್ಧಿಯಾಗಿ ಹುಟ್ಟುವ ಉತ್ತಮೋತ್ತಮ-ವಾದ ಸರಕುಗಳ ಆಶೆಗಾಗಿ ದ್ವೀಪಾಂತರದ ವ್ಯಾಪಾರಸ್ಥರು ಹಿಂಡು ಹಿಂಡಾಗಿ ಬಂದು, ತಮ್ಮ ದೇಶಗಳಲ್ಲಿ ಹುಟ್ಟುತ್ತಿರುವ ಸುಖೋಪಭೋಗದ ವಸ್ತುಗಳನ್ನು ತಂದು ನಮ್ಮ ಮುಂದೆ ಸುರಿಯುತ್ತಿದ್ದರು.

ರತ್ನಖಚಿತವಾದ ಹರಿವಾಣದಲ್ಲಿ ಆಯತ್ತವಾಗಿ ಬಡಿಸಿಟ್ಟ ಸುಭೋಜ್ಯ-ಗಳಾದ ಪಕ್ವಾನ್ನಗಳನ್ನು ಸೇವಿಸಬೇಕಾದರೆ, ವಿಪತ್ತಿಗೆ ಎದೆಗೊಟ್ಟು ನಿಲ್ಲುವಂಥ ಬಾಬರನು ಬೇಕಾಗಿದ್ದಿಲ್ಲ; ಸಾಮ್ರಾಜ್ಯವನ್ನು ಹಬ್ಬಿಸಿ ಅಲ್ಲಿ ಸುಖಶಾಂತಿಗಳನ್ನು ನೆಲೆಗೊಳಿಸಲು ಜಾಣ್ಮೆಯುಳ್ಳವನಾದ ಅಕಬರನೂ

ಬೇಕಾಗಿದ್ದಿಲ್ಲ. ಭೋಗಿಯಾದವನೊಬ್ಬ ರಾಜನಾದರೆ ಸಾಕೆಂದು ನೆನಿಸಿ ಸರ್ವತಂತ್ರಸ್ವತಂತ್ರನಾದ ಪರಮಾತ್ಮನು ಮಧ್ಯಮ ಗುಣದವನಾದ ಶಹಾಜಹಾನನನ್ನು ಹಿಂದುಸ್ಥಾನದ ಚಕ್ರವರ್ತಿಯನ್ನಾಗಿ ನಿರ್ಮಿಸಿದ ನೆಂದು ನಾವು ಊಹಿಸುತ್ತೇವೆ

ಶಹಾಜಹಾನನು ಸುಖೋಪಭೋಗಪ್ರಿಯನಾಗಿದ್ದರೂ ಅವನು ಹಿರಿಯರ ಪುಣ್ಯದಿಂದಲೇ ರಾಜ್ಯಶಕಟವನ್ನು ಹಾಗೂ ಹೀಗೂ ಮಾಡಿ ನೂಕಿಕೊಂಡು ಹೋದನು. ಆ ದೈವಶಾಲಿಯ ಆಡಳಿತದಲ್ಲಿ ಮಂತ್ರಿಗಳು ಚತುರರೂ, ಸೇನಾನಾಯಕರು ಚಂಡವಿಕ್ರಮರೂ, ವೈಶ್ಯರು ಸಾಹಸಿಗಳೂ ಆಗಿದ್ದರು. ಅವನ ಕಾಲದಲ್ಲಿ ಪ್ರವೀಣರಾದ ಶಿಲ್ಪಿಗಳು ತಾಜಮಹಾಲಿ ನಂಥ ಅತಿ ಪ್ರೇಕ್ಷಣೀಯವಾದ ಮಂದಿರಗಳನ್ನು ಕಟ್ಟಿ ವಿಶ್ವಕರ್ಮನ ತಲೆಯ ಮೇಲೆ ಕೈಯಿಟ್ಟರು ; ಶೋಧಕರು ಎಷ್ಟೋ ಹೊಸ ಶೋಧಗಳನ್ನು ಮಾಡಿದರು ; ವರಕವಿಗಳು ನವರಸಾಲಂಕಾರಗಳಿಂದ ಪೂರಿತವಾದ ಸುರು-ಚಿರವಾದ ಕಾವ್ಯಗಳನ್ನು ರಚಿಸಿದರು.

ಅನುಗಾಲ ವಾಸಮಾಡಿಕೊಂಡಿದ್ದರೆ ಲೋಕವು ತನ್ನನ್ನು ಆದರಿಸ ಲಿಕ್ಕಿಲ್ಲವೆಂದು ಚಿಂತಿಸಿ ವಸಂತರಾಜನು ವರುಷಕ್ಕೊಂದಾವರ್ತಿ ಮಾತ್ರ ಬಂದು ಹೋಗುತ್ತಿರುವಂತೆ, ನಮ್ಮ ಕಥೆಯು ಪ್ರಾರಂಭವಾಗುವ ಕಾಲಕ್ಕೆ ಜನಮನೋರಮನಾದ ಆ ಮಹಾತ್ಮನು, ಸೊಬಗಿನಿಂದ ಬಂದು ತನ್ನ ದರ್ಶನವನ್ನು ಆಗ್ರಾ ನಿವಾಸಿಗಳಿಗೆ ಕೊಡುವವನಾದನು. ಅದೃಷ್ಟಪೂರ್ವ ವಾದ ಸೃಷ್ಟಿಸೌಂದರ್ಯವು ವಿಲಾಸಿಗಳ ಅಭಿಲಾಷೆಗಳನ್ನು ಪೂರೈಸುವಂತೆ ತೋರಿತು. ತರುಲತೆಗಳೆಲ್ಲ ಚಿತ್ರಮಯವಾದ ಪುಷ್ಪಮಂಜರಿಗಳನ್ನಾಂತು ವಾತಾವರಣದಲ್ಲೆಲ್ಲ ಮಕರಂದವನ್ನು ತುಂಬಿದವು. ಮಾಮರದ ಕೋಮಲ ವಾದ ಪಲ್ಲವದಲ್ಲಿ ಕುಳಿತು ಕೋಗಿಲೆಗಳು ಭೋಗಿಗಳ ಮನಸ್ಸು ಕರಗು ವಂತೆ ಕೂಗಿದವು. ಲತಾಮಂಟಪದಲ್ಲಿ ಕುಳಿತು ಉಸುರ್ಗರೆಯುವ ವಿರಹಿಯನ್ನು ಕುರಿತು 'ಇನ್ನು ಚಿಂತಿಸಬೇಡ, ನಿನ್ನಿನಿಯಳು ನಿನಗನುಕೂಲ ಳಾಗುವಳೆಂ'ದು ಭ್ರಮರಗಳು ಮೆಲ್ಲನೆ ಝೇಂಕರಿಸಿ ಹೇಳುವವು. ಅರವಿಂದ ಜಾಲದಿಂದ ಮೆರೆಯುವ ಸರೋವರಗಳಲ್ಲಿ ಸುಳಿದಾಡಿ ಬಂದ ಮಲಯ ಮಾರುತನು ಘರ್ಮಪೀಡಿತರನ್ನು ಕೂರ್ಮೆಯಿಂದ ಸಂಭಾವಿಸುವನು.

ಹೀಗೆ ಆಲ್ಹಾದಕರವಾದ ವಸಂತಕಾಲದಲ್ಲಿ ಒಂದು ದಿನ ಪ್ರಾತಃ ಕಾಲದಲ್ಲಿಯೇ ಶಹಾಜಹಾನ್ ಬಾದಶಹನು ದರಬಾರವನ್ನು ಕೂಡಿಸುವವನಾಗಿದ್ದನು. ಮಂಗಲವಾದ್ಯಗಳ ಸುಸ್ವರವಾದ ನಿನಾದವು ದಿಲ್ಲಿಯ ಪಟ್ಟಣದಲ್ಲೆಲ್ಲ ತುಂಬಿಕೊಂಡಿತು. ರಾಜಸಭೆಗೆ ಹೋಗತಕ್ಕವರಾದ ಮಹನೀಯರ ನೇಪಥ್ಯವಿಧಾನಗಳು ಒಳ್ಳೇ ಮನೋರಂಜಕವಾಗಿ ನಡೆದಿದ್ದವು. ಒಬ್ಬನು ತನ್ನ ಬಿಳಿದಾದ ಗಡ್ಡಕ್ಕೆ ಪೂರ್ವರಾತ್ರಿಯಲ್ಲಿ ಮದರಂಗಿಯನ್ನು ಹಚ್ಚಿ ಅದಕ್ಕೆ ಒಂದು ಪ್ರಕಾರದ ಕೆಂಪು ಬಣ್ಣವನ್ನು ತಂದುಕೊಂಡಿದ್ದನು. ಮತ್ತೊಬ್ಬನು ನಿಲವುಗನ್ನಡಿಯ ಮುಂದೆ ನಿಂತು ಕಲಪು ಹಚ್ಚಿದ ತನ್ನ ಮೀಸೆಯನ್ನು ತೀಡಿ ತೀಡಿ ಹುರಿಮಾಡುತ್ತಿದ್ದನು. ತನ್ನ ಅಂದವಾಗಿರುವ ಅಂಗಿಗೆ ಒಪ್ಪುವಂಥ ಹೊಸ 'ಮಂದೀಲ'ವನ್ನು ತರಬೇಕಾಗಿ ಬೇರೊಬ್ಬನು ಗುಮಾಸ್ತನನ್ನು ಜಾಗ್ರತೆಯಾಗಿ ಪೇಟೆಗೆ ಅಟ್ಟುತ್ತಿದ್ದನು. ಅನ್ಯನೋರ್ವನು ತನ್ನ ಮುತ್ತಿನ ಕಂಠಿಯನ್ನು ಅಕ್ಕಸಾಲಿಗನು ಇನ್ನೂ ನೆಟ್ಟಗೆ ಮಾಡಿ ತರಲಿಲ್ಲವೇಕೆಂದು ಸಿಟ್ಟಾಗಿ ಕುಳಿತಿದ್ದನು. ರಥವನ್ನು ಹೂಡಲಿಕ್ಕೆ ತಡವೇಕೆಂದು ಶೀಘ್ರಕೋಪಿಯಾದ ವ್ಯಾಘ್ರನೋರ್ವನು ಸಾರಥಿಯನ್ನು ಚಬಕದಿಂದ ಒಳಿತಾಗಿ ತಳಿಸುತ್ತಿದ್ದನು.

ಹಿಂದುಸ್ಥಾನದ ಸಾರ್ವಭೌಮನಾದ ಶಹಾಜಹಾನ್ ಬಾದಶಹನ ಸಭಾಮಂದಿರವದು! ಎಷ್ಟು ಬಣ್ಣಿಸಿ ಹೇಳಿದರೂ ನೋಡದ ಹೊರತು ಅದರ ಕಲ್ಪನೆಯೇ ಆಗದು. ಚಿತ್ರಮಯವಾಗಿ ಕಟ್ಟಿದ ಆ ಮಣಿಹರ್ಮ್ಯದಲ್ಲಿ ಪ್ರವೇಶ ಮಾಡಿದವರ ಕಣ್ಣುಗಳು ಕುಕ್ಕುತ್ತಿದ್ದವು. ಪುನಗು ಕಸ್ತೂರಿಗಳಿಂದ ಮಾಡಿದ ಕಡ್ಡಿಗಳ ಅಪರೂಪವಾದ ಹೊಗೆಯೂ, ಸುಗಂಧ ತೈಲಗಳ ಮಕರಂದವೂ ಆ ಮಂದಿರದಲ್ಲೆಲ್ಲ ಇಡುಗಿರುವದರಿಂದ, ಸಭಾಸದರ ಚಿತ್ತಕ್ಕೆ ಬಹು ಸಂಭ್ರಮವಾಗುತ್ತಿತ್ತು. ಅಲಂಕೃತರಾದ ಅಮೀರ್ ಉಮ್ರಾವ್, ರಾಜಬಹದ್ದೂರ, ನವಾಬಸಾಹೇಬ, ಸರದಾರ ಮುಂತಾದವರ ಸಮಾಜವನ್ನು ನೋಡಲಾಗಿ, ಸುರಲೋಕದ ವೈಭವವು ಇದಕ್ಕೂ ಹೆಚ್ಚಿಗಿರುವದೆಂದರೆ ಹೇಗೆಂದು ಯಾರಾದರೂ ಕೇಳಬಹುದಾಗಿತ್ತು.

ಸಭಾಮಂದಿರದ ಮೇಲ್ಭಾಗದಲ್ಲಿ ಜಗತ್ಪ್ರಸಿದ್ಧವಾದ ಮಯೂರಾಸನದ ಅಗಣಿತವಾದ ಮಹಾಮಣಿಗಳ ನಯನೋತ್ಸವವಾದ ಪ್ರಭಾರಾಶಿಯು

ಚಿತ್ರಮಯವಾಗಿರುವ ಆ ಸಭಾಮಂದಿರವನ್ನು ಮತ್ತಿಷ್ಟು ರಂಜಿಸಿತ್ತು. ಹೀಗೆ ಲೋಕೋತ್ತರವಾದ ಶೋಭೆಯನ್ನಾಂತಿರುವ ಆ ಮಹಾಪೀಠದಲ್ಲಿ ಶಹಾಜಹಾನ್ ಬಾದಶಹನು ವಿರಾಜಮಾನನಾದನು. ರಾಜಾಸನದ ಎಡ ಬಲದಲ್ಲಿ ದಾರಾ, ಸುಜಾ, ಮುರಾದ, ಔರಂಗಜೇಬರೇ ಮುಂತಾದ ರಾಜಪುತ್ರರೂ, ರಾಜಾ ಜಯಸಿಂಗ, ಶಾಇಸ್ತೇಖಾನ, ಮೀರಖಾಲಿಲ, ಸಾದುಲ್ಲಾಖಾನ ಮುಂತಾದ ಮಂತ್ರಿಶ್ರೇಷ್ಠರೂ ಮರ್ಯಾದೆಯಿಂದ ನಿಂತುಕೊಂಡಿದ್ದರೂ ಉಳಿದ ಸರದಾರರು ದೂರದಲ್ಲಿ ಕೈಕಟ್ಟಿಕೊಂಡು ನಿಂತಿದ್ದರು. ಸಭೆಯ ಶಿಷ್ಟಾಚಾರದ ವಿಧಾನಗಳೆಲ್ಲ ತೀರಿದ ಬಳಿಕ, ಶಹಾಜಹಾನನು ವಜೀರನಾದ ಸಾದುಲ್ಲಾಖಾನನನ್ನು ಕುರಿತು "ವಜೀರ್, ಈ ದಿವಸ ಮಹತ್ವವಾದ ರಾಜಕಾರಣಗಳನ್ನು ಕುರಿತು ಆಲೋಚಿಸುವದಿಲ್ಲದಿದ್ದರೆ ನಿನ್ನೆಯೇ ದಿಲ್ಲಿಯಿಂದ ಬಂದಿರುವ ನೃತ್ಯಕಲಾಪ್ರವೀಣಳಾದ ಪ್ಯಾರಾಜಾನ್ ಕಲಾವಂತಿನಿಯ ಕೌಶಲ್ಯದ ನೃತ್ಯವನ್ನು ಅವಲೋಕಿಸಬೇಕೆಂಬ ಇಚ್ಛೆ ನಮಗಾಗಿದೆ" ಎಂದು ಮುಗುಳುನಗೆ ನಕ್ಕು ಹೇಳಿದನು.

ಚತುರನಾದ ಆ ವಜೀರನು ರಾಜ್ಯದ ಎಲ್ಲ ಕಾರ್ಯಭಾಗಗಳನ್ನು ತನ್ನ ಚಾಣಾಕ್ಷ್ಮೆಯಿಂದ ಕಾಲಕಾಲಕ್ಕೆ ನಿರ್ವಹಿಸುತ್ತಿದ್ದನು. ಬಾದಶಹನಿಗಾದರೂ ಅವುಗಳ ತೊಂದರೆ ಬೇಕಾಗಿದ್ದಿಲ್ಲ. ವಿಲಾಸಿಯಾದ ದಿಲ್ಲೀಶ್ವರನ ಛಂದಾನುಸಾರವಾಗಿ ವಜೀರನು "ಹುಜೂರ್, ಈ ದಿವಸ ವಿಚಾರಾರ್ಹವಾದ ವಿಷಯಗಳೇನೂ ಇಲ್ಲ. ಪ್ರಭುಗಳ ಇಚ್ಛೆಗೆ ಬಂದ ಕಾರ್ಯಕ್ರಮವೇ ನಡೆಯಲಿ" ಎಂದು ಹೇಳಿ ನೆಲಮುಟ್ಟಿ ಮೂರಾವರ್ತಿ ಪ್ರಣಾಮ ಮಾಡಿದನು.

ಆಗ ಯುವರಾಜನಾದ ದರಾಯಸನು (ದಾರಾ) ಪರಿಹಾಸಮಾಡಿ "ವಾಃ ವಜೀರಸಾಹೇಬರೆ, ಬಾದಶಹರ ಇಚ್ಛೆಯನ್ನರಿತು ನೀವು ನಿಮ್ಮ ಹಿಂದೂಧರ್ಮವನ್ನೇ ಕಟ್ಟಿಟ್ಟಿರಿ! ನೀವು ನಿಮ್ಮ ಕಾಗದಗಳ ಗಂಟನ್ನು ಕಟ್ಟಿಡದಿರುವಿರಾ?" ಎಂದು ನುಡಿದವನೇ ತಂದೆಯ ಮುಖವನ್ನು ನೋಡಿ ನಕ್ಕನು.

"ಬಾದಶಹರ ಇಚ್ಛೆಯನ್ನು ಮೀರಿ, ಬಂಡುಗಾರರಂತೆ ನಡೆದು, ಮೇಲೆ ಪವಿತ್ರವಾದ ಇಸ್ಲಾಮ ಧರ್ಮವನ್ನು ಧಿಕ್ಕರಿಸುವ ರಾಜಪುತ್ರರಿಗಿಂ-

ತಲೂ ನಮ್ಮ ವಜೀರರು ಶ್ರೇಷ್ಠರೆಂದು ನಾನು ನಂಬುತ್ತೇನೆ" ಎಂದು ಕಪಟಿಯಾದ ಔರಂಗಜೇಬನು ದಾರಾನ ಅಪ್ರತಿಷ್ಠೆ ಮಾಡಬೇಕೆಂದು ನುಡಿದನು.

"ಖಬರದಾರ್ ಮಹಮುದಮುಹಿಯುದ್ದೀನ!!! ಮೃತಸಮುದ್ರದಲ್ಲಿಯ ವಿಷಮಯವಾದ ಮಲಿನ ನೀರಿನಂತೆ ನಿನ್ನ ಹೃದಯದಲ್ಲಿ ಕಪಟವೂ, ನೀಚತನವೂ, ತುಂಬಿರುವದನ್ನು ಬಾದಶಹರು ಚೆನ್ನಾಗಿ ಅರಿತಿರುವರು. ಅನ್ಯರ ಮೇಲೆ ವೃಥಾ ದೋಷಾರೋಪಣವನ್ನು ಮಾಡುವದರಿಂದ ನಿನ್ನ ಪಾಪಗಳು ತೊಳೆಯುವದಿಲ್ಲ!" ಎಂದು ದರಾಯಸನು ಔರಂಗಜೇಬನಿಗೆ ಪ್ರತಿಯಾಗಿ ನುಡಿದನು.

ಆಗ ಬಾದಶಹನು ತನ್ನ ಎರಡೂ ಕೈಗಳನ್ನು ಚಾಚಿ ಹಿಡಿದು "ಸುಲ್ತಾನ್ ದಾರಾಶಹಾ, ನೀವು ಮುಂದೆ ಇದೇ ಸಾಮ್ರಾಜ್ಯದ ಅಧಿಪತಿಗಳಾಗತಕ್ಕವರು. ಸಾದುಲ್ಲಾಖಾನರಂಥ ರಾಜನಿಷ್ಠರಾದ ವಜೀರರ ಅವಹೇಲನವನ್ನು ಮಾಡತಕ್ಕದ್ದಲ್ಲ. ಔರಂಗಜೇಬ, ನೀನಾದರೂ ನಿನಗೆ ಹಿರಿಯನಾದ ದಾರಾಶಹನ ವಿರುದ್ಧವಾಗಿ ಮಾತಾಡುವದು ಅಕ್ಷಮ್ಯವೇ!" ಎಂದು ನುಡಿದು ಯುವರಾಜನ ಮುಖವನ್ನು ನೋಡಿ ಮಂದಹಾಸಗೈದನು.

ಬಾದಶಹರಾಡಿದ ನುಡಿಯ ಓಘವನ್ನರಿತು ಔರಂಗಜೇಬನಿಗೆ ತಾನು ಆಡಿದ ಮಾತಿನ ಬಗ್ಗೆ ಅತಿಶಯವಾದ ವಿಷಾದವಾಗಿ, ಅವನು ಅಧೋಮುಖನಾಗಿ ನಿಂತುಕೊಂಡನು. ದರಾಯಸನು ಸಿಂಹಾಸನಕ್ಕೆ ಪ್ರಣಾಮ ಮಾಡಿ "ಹುಜೂರ್, ನಾನು ವಜೀರರ ವಿಷಯವಾಗಿ ಹಾಗೆ ಮಾತಾಡಿದ್ದಕ್ಕೆ ಬಾದಶಹರ ಕ್ಷಮೆಯನ್ನೂ ವಜೀರರ ಕ್ಷಮೆಯನ್ನೂ ಬೇಡಿಕೊಳ್ಳುತ್ತೇನೆ" ಎಂದು ವಿನಯೋಕ್ತಿಯಿಂದ ನುಡಿದನು.

ಈ ಮಾತಿಗೆ ಸಂತುಷ್ಟನಾಗಿ ಬಾದಶಹನು ಶಾಇಸ್ತೇಖಾನನನ್ನು ಕುರಿತು "ನೋಡಿದಿರಾ ನಮ್ಮ ದಾರಾಶಹನು ಎಷ್ಟು ವಿನೀತನಂತೆ ಮಾತಾಡಿದನು!!" ಎಂದು ಅಭಿಮಾನದಿಂದ ನುಡಿದನು.

"ಅಲಂಪನಾ: ನನ್ನ ಸೋದರಳಿಯರಾದ ಔರಂಗಜೇಬಸುಲ್ತಾನರೂ ತಾವಾಡಿದ ಅಚಾತುರ್ಯದ ನುಡಿಗೆ ವಿಷಾದಗೊಂಡಿರುವರು.

ಅವರಿಗೆ ನಿಜವಾದ ಪಶ್ಚಾತ್ತಾಪವೇ ಆಗಿರುವದು." ಎಂದು ಶಾಇಸ್ತೇ ಖಾನನು ಔರಂಗಜೇಬನನ್ನು ಮೇಲುಕಟ್ಟಬೇಕಾಗಿ ನುಡಿದನು.

"ಭಗವಂತನ ಪ್ರತಿನಿಧಿಗಳಾದ ನನ್ನ ಪ್ರಿಯ ತಾತರೆ, ಕಾಮ-ಕ್ರೋಧಾದಿ ಷಡ್ರಿಪುಗಳನ್ನು ನಿಗ್ರಹಿಸಲು ನಾನು ಅಹರ್ನಿಶವಾಗಿ ಪ್ರಯತ್ನ ಮಾಡುತ್ತಿದ್ದಾಗಲೂ ಆ ಕೆಟ್ಟ ವಿಕಾರಗಳು ಈ ಪಾಪಿಯ ಬೆನ್ನುಬಿಡಲೊಲ್ಲವು. ಆದರೂ ಅವುಗಳನ್ನು ಜಯಿಸದಲೆ ಈ ಔರಂಗಜೇಬನು ಎಂದಿಗೂ ಬಿಡನು. ದೇವರು ನನಗೆ ಸಹಾಯವನ್ನು ಮಾತ್ರ ನೀಡಲಿ! ಹಮ್‌ದುಲಿಲ್ಲಾ!! ಹಮ್‌ದುಲಿಲ್ಲಾ !!!"

"ಮಹಿಯುದ್ದೀನ ಮಹಮುದ, ( ಇದು ಔರಂಗಜೇಬನ ತೊಟ್ಟಿಲದಲ್ಲಿಯ ಹೆಸರು ) ನೀನು ಧರ್ಮಪರಾಯಣನೂ, ಮನೋನಿಗ್ರಹಿಯೂ ಆಗಿರುವದನ್ನು ನಾನು ಬಲ್ಲೆನು ಆದರೆ ಸ್ವಭಾವತಃ ನೀನು ದೀರ್ಘಸೂತ್ರಿಯಾಗಿರುವಿ. ದರಾಯಸನಂತೆ ನೀನಾದರೂ ಉದಾರವೃತ್ತಿಯವನಾದರೆ ನನಗೆ ಸಂತೋಷವಾಗುವದು" ಎಂದು ನುಡಿದು, ಬಾದಶಹನು ದರಬಾರದ ವ್ಯವಸ್ಥಾಪಕನನ್ನು ಕುರಿತು "ಜೇನುಲ್ಲಾಬ್‌ದೀನ, ಪ್ಯಾರಾಜಾನಳ ನೃತ್ಯಗಾಯನಗಳಿಗೆ ಆರಂಭವಾಗಲಿ" ಎಂದು ಆಜ್ಞಾಪಿಸಿದನು.

ಸನ್ನದ್ಧಳಾಗಿಯೇ ಇದ್ದ ಆ ವಿಶ್ವಯೋಷಿತೆಯು ಒಯ್ಯಾರದಿಂದ ಮುಂದೆ ಬಂದು, ಮಂದಹಾಸಗೈಯುತ್ತ ಬಾದಶಹನಿಗೆ ಮೂರಾವರ್ತಿ ನೆಲಮುಟ್ಟಿ ಪ್ರಣಾಮ ಮಾಡಿದಳು. ರೂಪಸಂಪನ್ನೆಯಾದ ಆ ನವತರುಣಿಯು ಮಂಜುಲವಾದ ಸ್ವರ ತೆಗೆದು आयेरी सब गोपियन बनबन ಎಂದು ಹಾಡುತ್ತ ಬಹು ಲಲಿತವಾದ ಪದವಿನ್ಯಾಸದೊಂದಿಗೆ ಮನೋಹರವಾಗಿ ನರ್ತನ ಮಾಡಿದಳು. ಆ ಆಯತೇಕ್ಷಣೆಯು ಭಾವವನ್ನು ವ್ಯಕ್ತಪಡಿಸುವಾಗ ಕಟಾಕ್ಷಕ್ಷೇಪದಿಂದ ಸುತ್ತಲೂ ನೋಡುತ್ತಿರುವ ಸಮಯದಲ್ಲಿ, ನೆರೆದವರಲ್ಲಿ ಪ್ರತಿಯೊಬ್ಬನು ಆ ಮೋಹಿನಿಯು ತನ್ನನ್ನೇ ಉದ್ದೇಶಿಸಿ ನೋಡುತ್ತಿರುವಳೆಂದು ನಂಬಿ, ಹುಚ್ಚು ಹಿಡಿದವನಂತೆ ಅವಳ ಮುಖವನ್ನು ಹುಳುಹುಳು ನೋಡುತ್ತಿದ್ದನು. ಹೀಗೆ ಎರಡು ಗಳಿಗೆಯ ವರೆಗೆ ಸಮಾರಂಭವು ನಡೆದ ಬಳಿಕ ಬಾದಶಹನು ಅರಮನೆಯ ಉಗ್ರಾಣಾಧಿಪತಿಯನ್ನು ಕುರಿತು

"ನಾಸರಖಾನ್, ಈ 'ಬಿದಾಗಿಯು' ತಬಕವನ್ನು ಆ ಕಲಾವಂತಿನಿಗೆ ಸಮರ್ಪಿಸು" ಎಂದು ಆಜ್ಞೆಗೈದನು.

"ನಾಸರಖಾನ್" ಎಂದು ಬಾದಶಹನು ಕರೆದ ಕೂಡಲೆ ಸೊಬಗಿನ ಉಡುಗೆ-ತೊಡಿಗೆಗಳನ್ನು ಮಾಡಿಕೊಂಡಿರುವ ಸುಂದರನಾದ ಇರಾಣೀ ತರುಣನೊರ್ವನು ಮುಂದರಿದು ಬಂದು, ಇಂದು ಬಾದಶಹರ ಪ್ರೇಮವು ನನ್ನ ಮೇಲೆ ನೆಲಿಸಿತೆಂದು ಹಿಗ್ಗಿ ಸಿಂಹಾಸನದ ಸಮೀಪಕ್ಕೆ ಬಂದು, ಬಾದ ಶಹನಿಗೆ ಅನೇಕಾವರ್ತಿ ಪ್ರಣಾಮಮಾಡಿ 'ಬಿದಾಗಿಯು' ತಬಕವನ್ನು ತೆಗೆದುಕೊಂಡು ಹೋಗಿ, ಅದನ್ನು ಪ್ಯಾರಾಜಾನಳ ಮುಂದಿರಿಸಿದನು.

ನಾಸರಖಾನನು ಮೊದಲು ಶಾಇಸ್ತೇಖಾನನ ಕೈಕೆಳಗಿನ ಸೈನ್ಯಾಧಿ ಕಾರಿಯಾಗಿದ್ದನು. ಅವನ ಜಾಣತನವನ್ನೂ ಪರಾಕ್ರಮವನ್ನೂ ಕಂಡವ ನಾದ ಶಾಇಸ್ತೇಖಾನನು, ತನ್ನ ಸೋದರಸೊಸೆಯೂ ಬಾದಶಹರ ಪ್ರೀತಿಯ ಮಗಳೂ ಆಗಿರುವ ಬೇಗಮ್ ಸಾಹೇಬಳಿಗೆ ನಾಸರಖಾನನು ಯೋಗ್ಯನಾದ ವರನೆಂದು ತನ್ನ ಮನಸ್ಸಿನಲ್ಲಿ ಸಂಕಲ್ಪ ಮಾಡಿಕೊಂಡಿದ್ದನು. ಅದಕ್ಕಾಗಿ ಶಾಇಸ್ತೇಖಾನನು ಆ ತರುಣನನ್ನು ಅರಮನೆಯಲ್ಲಿ ಉಗ್ರಾಣದ ಮೇಲೆ ನಿಯಮಿಸುವಂತೆ ಮಾಡಿದ್ದನು. ಇಂದು ಬಾದಶಹನು ತನ್ನ ಶಿಷ್ಯನ ಮೇಲೆ ಪರಮಪ್ರೀತನಾಗಿರುವನೆಂದು ನಂಬಿ ಶಾಇಸ್ತೇಖಾನನು ಸಂತುಷ್ಟನಾದನು. ಅವನು ಬಾದಶಹನನ್ನು ಕುರಿತು "ಹುಜೂರ್, ಈ ತರುಣನು ಇರಾಣದ ರಾಜವಂಶಕ್ಕೆ ಸಂಬಂಧಿಸಿದವನು. ಇವನು ವಿದ್ಯಾಕಲಾಕೌಶಲ್ಯಗಳಲ್ಲಿ ನಿಪುಣನೂ ಯುದ್ಧದಲ್ಲಿ ಧುರೀಣನೂ ಆಗಿರುವದಲ್ಲದೆ ವಿಶ್ವಾಸಕ್ಕೆ ಸಂಪೂರ್ಣವಾಗಿ ಪಾತ್ರನಾಗಿರುವನು. ಬಾದಶಹರ ಕೃಪಾಕಟಾಕ್ಷವು ಅವನ ಮೇಲಾಗಿರುವದನ್ನು ಕಂಡು ನನಗೆ ಆನಂದವಾಗಿರುವದು" ಎಂದು ಶಹಾಜಹಾನನ ಹೆಂಡತಿಯಾದ ತಾಜಮಹಾಲ ಬೇಗಮ್ಮಳ ತಮ್ಮನಾದ ಶಾಇಸ್ತೇಖಾನನು ಅಭಿಮಾನದಿಂದ ನುಡಿದನು.

ಆಗ ಔರಂಗಜೇಬನು ಮೆಲ್ಲನೆ ನಕ್ಕು ಶಾಇಸ್ತೇಖಾನನನ್ನು ಕುರಿತು "ಮಾವನವರೆ, ನೀವು ಯಥಾರ್ಥವನ್ನಾಡಿದಿರಿ. ನಾಸರಖಾನನ ಗುಣಗಳು ಈ ಮೊದಲೇ ನಮ್ಮ ಅರಮನೆಯಲ್ಲಿ ಪ್ರಕಟವಾಗಿವೆ" ಎಂದು ಕುಚೋ ದ್ಯತೆಯಿಂದ ನುಡಿದನು.

" ಔರಂಗಜೇಬ, ಶಾಇಸ್ತೇಖಾನರಿಗೆ ಬಹುಮತನಾದ ಈ ಇರಾಣೀ ತರುಣನು ಉತ್ತರೋತ್ತರವನ್ನು ಹೊಂದಲಿಕ್ಕೆ ಪಾತ್ರನೇ ಇರುವನು. ಯಾಕೆ ದಾನಿಶ್ ಮಂದಖಾನರೇ, ನಾನು ಹೇಳುವದು ಯಥಾರ್ಥವಷ್ಟೆ? " ಎಂದು ಬಾದಶಹನು ವಿಷಮಯವಾದ ತನ್ನ ಅಂತರಂಗವನ್ನು ಅವ್ಯತೋಷವಾದ ನುಡಿಗಳಲ್ಲಿ ಅಡಗಿಸಿಬಿಟ್ಟನು.

ಬಾದಶಹರಾಡಿದ್ದು ಯಥಾರ್ಥವೆಂದು ದಾನಿಶ್ ಮಂದಖಾನನು ನುಡಿದನು. ಬಳಿಕ ಸಭಾವಿಸರ್ಜನವಾಗತಕ್ಕದೆಂದು ದರಬಾರದ ವ್ಯವಸ್ಥಾಪಕನು ಸೂಚಿಸಿದ ಕೂಡಲೆ, ಸಭಾಸದರೆಲ್ಲರಿಗೆ ತಾರತಮ್ಯಾನುಸಾರವಾಗಿ ತಾಂಬೂಲ ಗಂಧಪುಷ್ಪಗಳನ್ನು ಸಮರ್ಪಿಸುವ ವಿಧಿಯಾಯಿತು. ಆ ಸಮಯದಲ್ಲಿ ಬಾದಶಹನು ತಾನೇ ತನ್ನ ಕೈಯಿಂದ ಒಂದು ವೀಳ್ಯವನ್ನೆತ್ತಿ ನಾಸರಖಾನನಿಗೆ ಕೊಟ್ಟನು. ವೀಳ್ಯವನ್ನು ಕೊಡುವಾಗ ಬಾದಶಹನು ಔರಂಗಜೇಬನ ಮುಖವನ್ನು ನೋಡಿ ಮಂದಹಾಸವನ್ನು ಗೈದನು.

ತಂದೆ ಮಕ್ಕಳ ನಡುವೆ ನಡೆದಿರುವ ಈ ಪ್ರಕಾರದ ಸಂಕೇತಗಳನ್ನು ಕಂಡು, ಇದೇನೋ ವಿಪರೀತವಾಯಿತೆಂದು ಶಂಕಿಸಿ ಶಾಇಸ್ತೇಖಾನನು ಚಿಂತಾಕುಲನಾದನು.

ಬಾದಶಹನು ಆದರದಿಂದ ಕೊಟ್ಟ ತಾಂಬೂಲವನ್ನು ಆ ಅನುಗ್ರಹಕ್ಕೆ ಪಾತ್ರನಾದವನು ಸಂಗಡಲೇ ಸೇವಿಸತಕ್ಕ ಶಿಷ್ಟಾಚಾರವಿದ್ದ ಮೂಲಕ ನಾಸರಖಾನನು ಆ ಸುಗಂಧಮಯವಾದ ವೀಳ್ಯವನ್ನು ಬಾಯಿಯಲ್ಲಿ ಹಾಕಿಕೊಂಡು ಸವಿದನು.

ಸಭಾವಿಸರ್ಜನವಾದ ಬಳಿಕ ಸರದಾರರೆಲ್ಲರೂ ತಮ್ಮ ತಮ್ಮ ಪಲ್ಲಕ್ಕಿ ಮೇಣೆಗಳನ್ನೇರಿಕೊಂಡು ಮನೆಗೆ ನಡೆದರು. " ದಮ್‌ಸೇ ಭಾಯಿ, ಕದಮ್‌ಸೇ ಭಾಯಿ " ಎಂದು ಬೋಯಿಗಳು ತಮ್ಮ ಶ್ರಮನಿವಾರಣಾರ್ಥವಾಗಿ ಕೂಗುತ್ತ ನಾಸರಖಾನನ ಮೇಣೆಯನ್ನು ಹೊತ್ತುಕೊಂಡು ನಡೆದಿರಲು, ಒಳಗೆ ಕುಳಿತಿರುವ ಯಜಮಾನನ ಹೊಟ್ಟೆಯಲ್ಲಿ ಏಕೋ ಬೆಂಕಿ ಬಿದ್ದಂತಾಗಿ ಅವನು ವ್ಯಥೆಯಿಂದ ನರಳಲಾರಂಭಿಸಿದ್ದನು. ಬೋಯಿಗಳ ಕೂಗಾಟದಲ್ಲಿ ಅವನಿಗುಂಟಾದ ದುರವಸ್ಥೆಯನ್ನು ಯಾರೂ ಲಕ್ಷಿಸಲಿಲ್ಲ. ಮೇಣೆಯನ್ನು ಬೋಯಿಗಳು ನಾಸರಖಾನನ ಅಂಗಳದಲ್ಲಿ ಇರಿಸಿದರು.

ಆದರೆ ನಾಸರಖಾನನು ಹೊರಬೀಳಲೊಲ್ಲನು! ಇದೇನು ಚಮತ್ಕಾರ ವೆಂದು ನೆನೆದು ಸೇವಕರೆಲ್ಲರೂ ಮೋಣೆಯ ಬಾಗಿಲ ತೆರೆದು ನೋಡಿದರು. ಪಾಪ! ನಾಸರಖಾನನ ಪ್ರೇತವು ಅಸ್ತವ್ಯಸ್ತವಾಗಿ ಉರುಳಿಕೊಂಡಿತ್ತು. ಹಾಃ! ಹಾಃ!! ಹಾಃ!! ಏನನರ್ಥವಿದು!

## ೨

## ಕಲಹದ ಬೀಜಾರೋಪಣವು.

ಆಗ್ರಾ ಪಟ್ಟಣದಲ್ಲಿದ್ದ ರಾಜಮಂದಿರಗಳೇ ಅತಿ ರಮಣೀಯ ವಾದವುಗಳು. ಅವುಗಳಲ್ಲಿ ಅಂತಃಪುರಗಳಂತೂ ಅತಿತರವಾಗಿ ಸುಶೋಭಿತ ವಾದವುಗಳು. ಅಂತಃಪುರಗಳ ಹಿಂಭಾಗದಲ್ಲಿ ಗೋಡೆಗಳಿಗೆ ತಗಲಿಯೇ ಯಮುನಾ ನದಿಯು ಹರಿಯುತ್ತಿತ್ತು. ಮುಂಭಾಗದಲ್ಲಿ ಪರಮ ರಮಣೀಯ ವಾದ ಪುಷ್ಪವನಗಳಿದ್ದವು. ಈ ಅಂತಃಪುರಗಳ ಮಧ್ಯದಲ್ಲಿ ಅತಿ ಮನೋ ಹರವಾಗಿ ಕಟ್ಟಿದ್ದೊಂದು ವಿಲಾಸಮಂದಿರವಿತ್ತು. ನುಣುಪಾಗಿ ಸವರಿರುವ ಅನೇಕ ವರ್ಣದ ಶಿಲೆಗಳಿಂದ ಕಟ್ಟಿದ ಆ ಸುರಮ್ಯವಾದ ಮಂದಿರವನ್ನು ವಿಶೇಷವಾಗಿ ಅಲಂಕರಿಸುವ ಕಾರಣವೇ ಇದ್ದಿಲ್ಲ. ಆದರೂ ಸುವರ್ಣಕ್ಕೆ ರತ್ನಗಳನ್ನು ಕೆಚ್ಚಿಸುವದೂ, ಭುವನೈಕ ಸುಂದರಿಯ ರೂಪಕ್ಕೆ ನೇಪಥ್ಯ ವಿಧಾನದಿಂದ ಹೆಚ್ಚಿನ ಮೋಹಕತೆಯನ್ನುಂಟುಮಾಡಲು ಯತ್ನಿಸುವದೂ, ಇವೇ ಮುಂತಾದ ಹುಚ್ಚುತನದ ವಿಚಾರಗಳು ಐಶ್ವರ್ಯವಂತರಲ್ಲಿ ಬಹಳ. ಮೇಲೆ ಹೇಳಿದ ವಿಲಾಸಮಂದಿರದ ಉಪ್ಪರಿಗೆಯ ಚಿತ್ರಮಯವಾದ ಗೋಡೆಗಳನ್ನು ಅನೇಕ ಪ್ರಕಾರವಾಗಿ ಚಿತ್ರಿಸಿದ್ದರು. ಬಗೆಬಗೆಯ ಬಣ್ಣದ ಸಂಗಮರವರದ ನುಣುಪಾದ ಕಲ್ಲುಗಳಿಂದ ರಚಿಸಿದ ನೆಲಗಟ್ಟಿನ ಮೇಲೆ ಹೂವಿಗಿಂತ ಮೆತ್ತಗಾಗಿರುವ ರತ್ನಗಂಬಳಿಗಳನ್ನು ಹಾಸಿದ್ದರು. ಶಿಲ್ಪಿಯು ಕೌಶಲ್ಯದಿಂದ ರಚಿಸಿದ ಮೇಲ್ಕಟ್ಟಿನ ಆಶ್ಚರ್ಯಕಾರಕವಾದ ಶೋಭೆಯನ್ನು ಅಡಗಿಸಿ ಮುತ್ತು ರತ್ನಗಳಿಂದ ಸೊಗಯಿಸುವ ರೇಸಿಮೆಯ ವಿತಾನವನ್ನು ಮಾಡಿದ್ದರು. ಅಲ್ಲಲ್ಲಿ ಇರಿಸಿದ ಮೃದುವಾದ ತಿವಾಸಿಗೆಗಳ ಮೇಲೆ

ರೇಸಿಮೆಯ ಸೂಕ್ಷ್ಮವಾದ ಮೇಲುಹಾಸಿಗೆಗಳನ್ನು ಹಾಸಿದ್ದರು. ಪುಷ್ಪವನದ ಮಕರಂದವನ್ನು ತಂದಿರುವ ಮಾರುತನು ವಾತಾಯನ ತೆರೆಗಳಲ್ಲಿ ಹಾಯ್ದು ಬಹು ಜೋಕೆಯಿಂದ ಒಳಕ್ಕೆ ಬರುತ್ತಿದ್ದನು.

ಈ ಪರಮ ರಮಣೀಯವಾದ ಮಂದಿರದಲ್ಲಿ ನಿಂತು ನದಿಯ ಶೋಭೆಯನ್ನು ನೋಡುವದಕ್ಕಾಗಿ ಮಾಡಿದ ವಾತಾಯನದ ಬಳಿಯಲ್ಲಿ ಓರ್ವ ರೂಪವತಿಯಾದ ತರುಣಿಯು ಅಂತರಂಗದ ಮನೋಜ್ಞವಾದ ವ್ಯಾಪಾರದಲ್ಲಿ ತಲ್ಲೀನಳಾಗಿ ನಿಂತುಕೊಂಡಿದ್ದಳು. ಗೌರವರ್ಣದವಳಾದ ಆ ಸುಂದರಿಯ ದೀರ್ಘವರ್ತುಲಾಕಾರದ ಮುಖದಲ್ಲಿ ಕಮನೀಯತೆಯು ಕಂಗೊಳಿಸುತ್ತಿತ್ತು. ಆ ಪ್ರೌಢೆಯ ಪರಿಸ್ಫುಟವಾದ ಅವಯವಗಳ ಸೌಷ್ಠವವನ್ನು ನೋಡಲಾಗಿ ಇವಳೇನು ಪ್ರತ್ಯಕ್ಷ ರತಿಯೋ ಎಂಬಂತೆ ಕಾಣುತ್ತಿದ್ದಳು. ಮುಗಿಲು ಬಣ್ಣದ ಲುಂಗಿಯನ್ನುಟ್ಟು ತನ್ನ ದಿವ್ಯಾಂಗಕ್ಕೆ ಒಪ್ಪುವಂಥ ಜರತಾರಿಯ ಶುಭ್ರವಾದ ರೌಕೆಯನ್ನು ತೊಟ್ಟು ಮೇಲೆ ಅನರ್ಘವಾದ ಉತ್ತರೀಯವನ್ನು ಹೊದ್ದುಕೊಂಡು ನಿಂತಿರುವ ಆ ಸುರಾಂ-ಗನಾಸಮಳಾದ ಯುವತಿಯ ಒನಪು ಒಯ್ಯಾರಗಳನ್ನು ಕಂಡು ಸಾಧು ಸಂತರು ಕೂಡ ಮರುಳಾಗಬಹುದಾಗಿತ್ತು. ಅನರ್ಘವಾದ ಆಭರಣಗಳಿಂದ ಅಲಂಕೃತಳಾದ ಆ ಮೋಹದ ಬೊಂಬೆಯನ್ನು, ಆ ಸುರಮ್ಯವಾದ ಮಂದಿರವನ್ನು ಅಲಂಕರಿಸುವದಕ್ಕಾಗಿಯೇ ನಿಲ್ಲಿಸಿರುವರೋ ಎಂಬಂತೆ ತೋರುತ್ತಿತ್ತು. ಅಂತರ್ಗತವಾದ ಪ್ರೇಮಲಹರಿಯಿಂದ ಚಂಚಲವಾದ ವೃತ್ತಿಯುಳ್ಳ ಆ ಕಾಮಿನಿಯು ಕಿಟಕಿಯಲ್ಲಿ ನಿಂತು ಯಮುನಾತೀರದ ಸೌಂದರ್ಯವನ್ನು ಅವಲೋಕಿಸುತ್ತ ತನ್ನ ಗಂಟಲಿನಲ್ಲಿಯೇ ಬಹು ಮಂಜುಲವಾಗಿ सखि जानीरे मै ಎಂದು ಕೇದಾರ ರಾಗದಲ್ಲಿ ಹಾಡುತ್ತಿದ್ದಳು. ಅಷ್ಟರಲ್ಲಿ ಅವಳು ಏನೋ ನೆನಪಾದಂತೆ ಮಾಡಿ, "ಗುಲ್ನೆರ್!" ಎಂದು ತನ್ನ ದಾಸಿಯನ್ನು ಕರೆದಳು.

ಗುಲ್ನೇರಳು ಬಂದು ಬೇಗಮ್ ಸಾಹೇಬರ ಆಜ್ಞೆ ಏನಿರುವದೆಂದು ಕೇಳಿದಳು.

"ಏನಾಜ್ಞೆ.... ! ಏನೋ ಹೇಳಬೇಕೆಂದು ಮಾಡಿದ್ದೆನು. ಮರೆತೇ ಹೋಯಿತಲ್ಲ!" ಎಂದು ಆ ವಿಲಾಸಿನಿಯು ನುಡಿದು ನಕ್ಕಳು.

" ನಾನು ನೆನಪು ಕೊಡಲೇನು ? " ಎಂದು ಕುಚೋದ್ಯಗಾರಳಾದ ಆ ಗರ್ಭದಾಸಿಯು ನುಡಿದು ಪರಿಹಾಸ ಮಾಡಿ ನಕ್ಕಳು.

" ಕುಟಿಲೇ, ನಾನು ಮರೆತಿರುವ ಮಾತಿನ ನೆನಪು ನೀನು ಹೇಗೆ ಕೊಡಬಲ್ಲಿ ? "ಎಂದು ಕಿಂಚಿತ್ ರೋಷದಿಂದಲೂ, ಕಿಂಚಿತ್ ಮಂದಹಾಸದಿಂದಲೂ ಬೇಗಮ್ ಸಾಹೇಬಳು ಕೇಳಿದಳು.

" ಶೃಂಗಾರ ಮಂಜರಿಯಾದ ರಾಜನಂದಿನಿಯೇ, ಭಕ್ತಿ ಬಂಧನದಿಂದ ನಮ್ಮಿರ್ವರ ಜೀವಗಳು ಒಂದಾದ ಬಳಿಕ. ತಮ್ಮ ಮನಸ್ಸಿನಲ್ಲಿ ಸುಳಿಯುತ್ತಿರುವ ವಿಚಾರಗಳು ನನಗೆ ತಿಳಿಯದೆ ಇರುವದುಂಟೆ ? " ಎಂದು ಗುಲ್ನೇರಳು ನುಡಿದು ಮತ್ತೆ ನಕ್ಕಳು

" ಕೊರವಂಜಿಯು ಹಾಗೆ ಉಪೋದ್ಘಾತದಲ್ಲಿ ಕಾಲ ಕಳೆದರೇನಾಯಿತು. ಏನು ಹೇಳುವಿ ಹೇಳು ನೋಡೋಣ. ನಿನ್ನ ಜಾಣತನದ ಬೆಳಕು ಬೀಳಲಿ ! "

" ಈ ಸಮಯದಲ್ಲಿ ಖಾನಸಾಮಾನರು ( ಉಗ್ರಾಣಾಧಿಪತಿಯಾದ ನಾಸರಖಾನನು ) ಬೇಗಮ್ ಸಾಹೇಬರಿಗಾಗಿ ಏನಾದರೊಂದು ಪದಾರ್ಥವನ್ನು ತಂದುಕೊಡಬೇಕಾಗಿತ್ತೇನು ? "

ಈ ಮಾತು ಕೇಳಿದ ಕೂಡಲೆ ಸಲಜ್ಜಸ್ಮಿತವಾದ ಆ ಗೌರಾಂಗಿಯ ಸುಂದರವಾದ ಮುಖವು ಆರಕ್ತವರ್ಣವನ್ನು ತಳೆದು ಅಧಿಕವಾದ ಮನೋಜ್ಞತೆಯನ್ನು ಹೊಂದಿತು. ವಿನೋದದಿಂದವಳು ಬಳಿಯಲ್ಲಿರುವ ಗುಲಾಬದಾನಿಯನ್ನು ತೆಗೆದುಕೊಂಡು ಅದರಲ್ಲಿಯ ಪನ್ನೀರನ್ನು ಆ ಚೇಟಿಯ ಮುಖಕ್ಕೆ ಉಗ್ಗಿದಳು. ಗುಲ್ನೇರಳು ತುಸು ವ್ಯಥೆಯಿಂದ ತನ್ನ ಕಣ್ಣುಗಳಲ್ಲಿ ಸೇರಿರುವ ಪನ್ನೀರ ಹನಿಗಳನ್ನು ಒರಿಸಿಕೊಳ್ಳುತ್ತಿರುವಾಗ, ಬೇಗಮ್ ಸಾಹೇಬಳು ಒಳಿತಾಗಿ ನಕ್ಕು " ಗಯ್ಯಾಳಿ ! ನಾಡಗಯ್ಯಾಳಿ !! ಹೇಗಾಯಿತೀಗ " ಎಂದು ನುಡಿದಳು.

ಅಷ್ಟರಲ್ಲಿ ಮತ್ತೊಬ್ಬ ದಾಸಿಯು ಸೋಪಾನದಲ್ಲಿ ನಿಂತುಕೊಂಡು ಗದ್ಗದಕಂಠೆಯಾಗಿ " ಗುಲ್ನೇರ ! ಗುಲ್ನೇರ !! " ಎಂದು ದೀರ್ಘಶ್ವಾಸ ಬಿಡುತ್ತ ಗುಲ್ನೇರಳನ್ನು ಕರೆದಳು.

" ಯಾರು ? ಸೂಜನ್ ! "

" ಅಹುದು ನಾನೇ ! ಗುಲ್ನೇರ, ತುಸು ಹೀಗೆ ಬಾ ! "

ಗುಲ್ನೇರಳು ಸೋಪಾನದಲ್ಲಿ ಬಂದ ಕೂಡಲೆ ಸೂಜನ್ನಳು ಅವಳ ಕಿವಿಯಲ್ಲಿ ಏನೇನೋ ಹೇಳಿದಳು. ಆ ಮಾತು ಕೇಳಿ ಗುಲ್ನೇರಳು ಧಕ್ಕನೆ ತನ್ನ ಎದೆಗೆ ಕೈಬಡುಕೊಂಡು "ಅಯ್ಯೋ ! ಘಾತವೆ !!" ಎಂದು ದುಃಖೋದ್ಗಾರವನ್ನು ತೆಗೆದಳು.

ಆ ಹೃದಯವಿದಾರಕವಾದ ಉದ್ಗಾರವನ್ನು ಕೇಳಿ ಬೇಗಮ್ ಸಾಹೇಬಳು ಕಳವಳಗೊಂಡು " ಗುಲ್ನೇರ ! ಏನು ಸಮಾಚಾರವದು ? " ಎಂದು ಕಷ್ಟದೊಂದಿಗೆ ಕೇಳಿದಳು.

ಗುಲ್ನೇರಳು ಬೇಗನೆ ಒಳಗೆ ಬರಲೊಲ್ಲಳು. ಇದೇನೋ ಅನರ್ಥವಿರುವದೆಂದು ಶಂಕಿಸಿ ಬೇಗಮ್ ಸಾಹೇಬಳು, ತನ್ನ ಪಾದರಕ್ಷೆಗಳನ್ನು ಮೆಟ್ಟಲವಸರವರಿಯದೆ ದಾಸಿಯರಿದ್ದೆಡೆಗೆ ಧಾವಿಸಿ ಬಂದಳು. "ಸೂಜನ್, ಗುಲ್ನೇರ, ಏನು ಸಮಾಚಾರವದು ? ನಿಮ್ಮ ಮುಖದಲ್ಲಿ ದ್ರವವೇ ಇಲ್ಲ ! ಕಣ್ಣೀರು ಸುರಿಸುತ್ತಿರುವಿರಿ ! ಏನಾಗಿದೆ ಬೇಗನೆ ಹೇಳಿರಿ ? ಈಗಲೆ ನನ್ನ ಎದೆಯೊಡೆದು ನೀರಾಗಿದೆ" ಎಂದು ರಾಜನಂದಿನಿಯು ಕಣ್ಣೀರು ಸುರಿಸುತ್ತ ಕೇಳಿದಳು.

ಸೂಜನ್ನಳು ಎರಡೂ ಕೈಗಳಿಂದ ತನ್ನ ಮುಖವನ್ನು ಗಟ್ಟಿಯಾಗಿ ಮುಚ್ಚಿಕೊಂಡಳು. ಗುಲ್ನೇರಳಾದರೂ ಕಣ್ಣೊರಿಸಿಕೊಳ್ಳುವ ನೆವದಿಂದ ಸೆರಗಿನಿಂದ ತನ್ನ ಮೋರೆಯನ್ನು ಮರೆಮಾಡಿಕೊಂಡು ದುಃಖಿಸಿ ದುಃಖಿಸಿ ಅಳಲಾರಂಭಿಸಿದಳು. ಬೇಗಮ್ಮಳು ಅವರೀರ್ವರನ್ನು ಒಳಕ್ಕೆ ಕರಕೊಂಡು ಹೋಗಿ " ನನ್ನಾಣೆಯಾಗಿದೆ. ಬೇಗನೆ ಏನಿದ್ದ ಸಂಗತಿಯನ್ನು ಹೇಳಿರಿ ಕಂಡಿರಾ " ಎಂದು ಆರ್ತೆಯಾಗಿ ಕೇಳಿದಳು.

ಸೂಜನ್ನಳು ಎದೆ ಎದೆ ಬಡಕೊಂಡು " ಏನೆಂದು ಹೇಳಲಿ !!! ಅಯ್ಯೋ ನಾಸರಖಾನರೆ, ನಿಮಗಿಂಥ ಅಕಾಲ ಮರಣವು ಪ್ರಾಪ್ತವಾಯಿತೆ!" ಎಂದು ಅತ್ತಳು.

ಮಯೂರಿಯು ವ್ಯಾಧನ ಶರದಿಂದ ಪೀಡಿತಳಾಗಿ ಚೀರುವಂತೆ ಬೇಗಮ್ ಸಾಹೇಬಳು ವಿಲಕ್ಷಣವಾಗಿ ಕೂಗಿದವಳೇ ನಿಶ್ಚೇತನಳಾಗಿ ನೆಲಕ್ಕುರುಳಿದಳು. ಅವಳ ಕೈಕಾಲುಗಳು ಥರಥರನೆ ನಡುಗುತ್ತಿದ್ದವು.

ಪ್ರಫುಲ್ಲಿತವಾದ ಕಮಲದಂತಿರುವ ಅವಳ ನಗೆಮುಖವು ಪ್ರೇತಕಳೆಯು ಳ್ಳಂತಿತು. ಲಗುಬಗೆಯಿಂದ ದಾಸಿಯರು ಅವಳ ಮುಖಕ್ಕೆ ಪನ್ನೀರು ಚಿಮ್ಮಿಡಿಸಿ, ತಾಲವೃಂತಗಳಿಂದ ಗಾಳಿ ಹಾಕಿದರೂ ಆ ದುಃಖಾರ್ತೆಯಾದ ರಾಜನಂದಿನಿಗೆ ಎಚ್ಚರ ಬರಲೊಲ್ಲದು. ದಾಸಿಯರು ಅನೇಕವಾದ ಶೀತೋಪಚಾರಗಳನ್ನು ಮಾಡಿದರು. ತುಸು ಹೊತ್ತಿನ ಮೇಲೆ ಬೇಗಮ್ಮಳು ಕಣ್ದೆರೆದು "ಏನಾಯಿತು?" ಎಂದು ಕೇಳಿದಳು. ದಾಸಿಯರು ಮಾತಾಡದೆ ಬೀಸಣಿಕೆಗಳನ್ನು ಹಾಕುತ್ತಿದ್ದರು.

ಬೇಗಮ್ಮಳು ಕಡೆಗೆ ನಿಟ್ಟುಸಿರು ಬಿಟ್ಟು "ಗುಲ್ನೇರ, ಎಂಥ ಕೇಡಾಯಿತಮ್ಮಾ! ಹೇಗೆ ಮಾಡಲಿ ನಾನು!" ಎಂದು ನುಡಿದು ಕಂಬನಿಗಳನ್ನು ಕರೆದಳು.

"ಅಷ್ಟಿಷ್ಟು ಕೇಡಾಯಿತೆಂದು ಹೇಳಲೆ!" ಎಂದು ಗುಲ್ನೇರಳು ಉಸುರ್ಗರೆದು ನುಡಿದಳು.

"ಅಯ್ಯೋ! ನನ್ನ ಪ್ರೇಮದ ನಿಧಿಯೇ! ಅಯ್ಯೋ! ನನ್ನ ಮೋಹನಾಂಗಾ! ನೀನೆಲ್ಲಿ ಹೋದಿ? ಗುಲ್ನೇರ, ಸೂಜನ್, ಸಖಿಯರೆ, ನಾನಿನ್ನು ಹೇಗೆ ಬದುಕಿರಲಿ?" ಎಂದು ಹತಭಾಗ್ಯಳಾದ ಆ ರಾಜನಂದಿನಿಯು ಕೊರಗಿ ಮರುಗಿದಳು.

"ಏನು ಮಾಡುವದಿದೆ ಬೇಗಮ್ ಸಾಹೇಬರೆ, ಯತ್ನವಿಲ್ಲದ ಮಾತಾಯಿತು! ನೀವು ಈ ಸ್ಥಿತಿಯಲ್ಲಿ ಇರುವದನ್ನು ಕಂಡು ಅಂತಃಪುರದಲ್ಲಿರುವ ಬೇರೆ ಜನರು ಕುಚೇಷ್ಟೆ ಮಾಡುವರು. ಹೇಗಾದರೂ ಮಾಡಿ ದುಃಖವನ್ನು ನುಂಗಿಕೊಳ್ಳಿರಿ. ಏಳಿರಿನ್ನು!" ಎಂದು ಹೇಳಿ ಗುಲ್ನೇರಳು, ದುಃಖಾರ್ತೆಯಾದ ಆ ರಾಜಕುಮಾರಿಯು ಗದ್ದ ತುಟಿ ಹಿಡಿದು ಸಮಾಧಾನಗೊಳಿಸಿ ಎಬ್ಬಿಸಿ ಕುಳ್ಳಿರಿಸಿದಳು.

"ಏನಾಯಿತವರಿಗೆ ಸೂಜನ್?" ಎಂದು ಕಣ್ಣಲ್ಲಿ ನೀರು ತಳೆದು ಬೇಗಮ್ಮಳು ದೀನೆಯಾಗಿ ಕೇಳಿದಳು.

"ಇದೆಲ್ಲ ನಿಮ್ಮ ರೋಶನಾರಾ ಬೇಗಮ್ಮರವರ ಪ್ರತಾಪವು! ಕಠೋರ ಹೃದಯರಾದ ಔರಂಗಜೇಬ ಸುಲ್ತಾನರ ಘಾತಕತನದ ಪರಿಣಾಮವು!"

"ಏನೆಂದಿ ಸೂಜನ್ ? ಅವರೇನು ಮಾಡಿದರು ? "

" ಈ ಮಂದಿರಕ್ಕೆ ನಾಸರಖಾನರು ಬರಹೋಗುತ್ತಿರುವದನ್ನು ರೋಶನಾರೆಯು ಪಾಳತಿ ಇಟ್ಟು ನೋಡಿ, ವೃದ್ಧೆಯಾದ ಖತೀಜಾ ದಾಸಿಯ ಮುಖಾಂತರವಾಗಿ ನಿಮ್ಮ ಪ್ರೇಮದ ಗುಟ್ಟನ್ನು ಅರಿತುಕೊಂಡು, ಅದನ್ನೆಲ್ಲ ಔರಂಗಜೇಬನ ಮುಂದೆ ಹೇಳಿದರಂತೆ! ಆ ನಿರ್ದಯನು ಇದನ್ನೆಲ್ಲ ಬಾದಶಹರ ಕಿವಿಯ ಮೇಲಿಟ್ಟನು. ಈ ಸಂಗತಿಯು ಬಾದಶಹರಿಗೆ ಸಹನ ವಾಗದೆ ಅವರು ವಿಷ ಕೂಡಿದ ವೀಳ್ಯವನ್ನು ನಾಸರಖಾನರಿಗೆ ಕೊಡಲು, ಅವರು ಅದನ್ನು ತಿಂದು ತಮ್ಮ ಸುಂದರವಾದ ದೇಹವನ್ನು ಯಮದೇವರ ಸ್ವಾಧೀನ ಮಾಡಿದರು " ಎಂದು ನುಡಿದ ಸೂಜನ್ನಳ ಕಣ್ಣುಗಳೊಳಗಿಂದ ಬಳಬಳನೆ ಅಶ್ರುಗಳುದುರಿದವು.

ಈ ಸಮಾಚಾರವನ್ನರಿತು ಬೇಗಮ್ ಸುಂದರಿಯು ಎದೆ ಎದೆ ಬಡುಕೊಂಡು ಆಕ್ರೋಶಿಸುತ್ತ " ಮಾರಿಯಾದ ರೋಶನಾರೆಯೆ, ಮಾನವ ರಾಕ್ಷಸನಾದ ಔರಂಗಜೇಬನೇ, ನೀವಿಬ್ಬರು ಕೂಡಿ ಇದನ್ನೇನು ಮಾಡಿ ದಿರಿ! ದುಷ್ಟೆ: ನಿನ್ನಿಷ್ಟಾರ್ಥಗಳೆಲ್ಲ ನಷ್ಟವಾಗಿ ಹೋಗಲಿ! ದುರಾತ್ಮನಾದ ಔರಂಗಜೇಬನೆ, ನಿನ್ನ ದುಷ್ಕರ್ಮದ ಫಲವನ್ನು ದೇವರು ನಿನಗೆ ಕೊಡದೆ ಇರನು!! ಅಪ್ಪಾ, ನೀವೇ ನಿಮ್ಮ ಕೈಯಿಂದೆ ನನ್ನ ಸುಖವೆಂಬ ಲತೆಯನ್ನು ಬೊಡ್ಡೆಯೊರಿಸಿ ಚಿವುಟಿಹಾಕಿದಿರಾ? ಶಹಾಜಹಾನ ಬಾದಶಹನೆಂದರೆ ಗುಣಮಣಿಯೆಂದು ಕವಿಗಳು ನಿನ್ನನ್ನು ವ್ಯರ್ಥವಾಗಿ ಹೊಗಳಿ ಬೊಗಳುವ ರಲ್ಲವೆ? ಅವರ ಬಾಯಿಯಲ್ಲಿ ಮೂರುಹಾದಿಯ ಮಣ್ಣು ತುಂಬಲಿ!!! " ಎಂದು ನೆಲ ಬಡಿದು ಬಡಿದು ಗೋಳಿಕ್ಕಿದಳು.

"ಶಹಾಜಾದಿ, ಇನ್ನು ಎಷ್ಟು ಪರಿಯಾಗಿ ಶೋಕಿಸಿದರೂ ಫಲವಿಲ್ಲ. ಎಷ್ಟು ಪರಿಯಾಗಿ ಶಾಪಿಸಿದರೂ ಪ್ರಯೋಜನವಿಲ್ಲ. ದುಃಖಸಂತಾಪ ದಿಂದ ನಿಮ್ಮ ಕೋಮಲವಾದ ತನುವು ಬಾಡಿ ಬಕ್ಕಲಾಗಿ ಹೋಗಿದೆ " ಎಂದು ಗುಲ್ನೇರಳು ಹೇಳಿದಳು.

" ಗುಲ್ನೇರ, ಮಾಡಿದವರಿಗೆ ಮಾಡಿದಂತೆ ಮಾಡದಿದ್ದರೆ ಕೋಡಗ ವಾಗಿ ಹುಟ್ಟುವರೆಂದು ನಾಣ್ಣುಡಿಯಿರುವದಷ್ಟೆ? ಈ ರೋಶನಾರೆಯು ನನ್ನ ಸುಖದಲ್ಲಿ ಮಣ್ಣು ಕಲಸಿದರೆ ಅವಳ ಸುಖದಲ್ಲಿ ನಾನು ಮಣ್ಣು

ಕಲಸದಿದ್ದರೆ ನನ್ನ ಹೆಸರೇ ಬೇಗಮ್ ಸಾಹೇಬಳಲ್ಲ! ಪ್ರಸಂಗವು ಬರದೆ ಇರಲಿಕ್ಕಿಲ್ಲ!! ”

ಮುಂದೆ ಕೆಲವು ದಿವಸಗಳಾದ ಬಳಿಕ ರೋಶನಾರೆಯಿದ್ದ ಮಂದಿರದ ಗೋಡೆಯನ್ನು ಅವಳ ಪ್ರೀತ್ಯಾಸ್ಪದನಾದ ವಿಟನೋರ್ವನು ಏರಿ ಬಂದಿರುವ ಸುದ್ದಿಯನ್ನು ಶಹಾಜಹಾನನಿಗೆ ಯಾರೋ ತಿಳಿಸಲಾಗಿ, ಅಂತಃಪುರದ ಮರ್ಯಾದೆಯನ್ನು ಕಾಯಲು ದಕ್ಷನಾಗಿದ್ದ ಸಿದ್ದಿಯು ಬಾದಶಹನ ಆಜ್ಞೆಯ ಮೇರೆಗೆ ಆ ವಿಟನನ್ನು ಅದೇ ಉನ್ನತವಾದ ಗೋಡೆಯ ಮೇಲಿಂದ ಕೆಳಕ್ಕೆ ನೂಕಿದನು. ಹತ್ತುಮಾರಿನ ಮೇಲಿಂದ ಬಿದ್ದವನು ಪ್ರಾಣದಿಂದುಳಿಯುವನೆ? ಛಿನ್ನವಿಚ್ಛಿನ್ನವಾಗಿದ್ದ ಆ ಕಾಮಾತುರನ ದೇಹವು ಯಮುನಾ ಪ್ರವಾಹದ ಗುಂಟ ತೇಲುತ್ತ ಬೆಳಗಾಗುವದರೊಳಗಾಗಿ ಎಲ್ಲಿಗೆ ಹೋಗಿ ಮುಟ್ಟಿತೋ ಏನೋ! ಮುಯ್ಯಿಗೆ ಮುಯ್ಯಿ ತೀರಿತೇನು?

ದಿಲ್ಲಿಯ ಬಾದಶಹರು ತಮ್ಮ ಹೆಣ್ಣುಮಕ್ಕಳನ್ನು ತಮಗಿಂತ ಕಡಮೆ ತರಗತಿಯವರಿಗೆ ಕೊಟ್ಟು ಮದುವೆ ಮಾಡಿಕೊಡುವದೆಂದರೆ ಗೌಣವೆಂದು ತಿಳಿಯುತ್ತಿದ್ದರು. ಬಾದಶಹರಿಗೆ ಮಿಗಿಲಾದವರಾಗಲಿ, ಅವರಿಗೆ ಸಮಾನಸ್ಕಂದರಾಗಲಿ ಈ ಪೃಥ್ವೀತಲದಲ್ಲಿ ಇಲ್ಲವೇ ಇಲ್ಲವೆಂದು ಸ್ತುತಿಪಾಠಕರೂ ಕವಿಗಳೂ ಹೊಗಳುತ್ತಿದ್ದರು. ಅಂತಿಂತು ಕುಂತಿಯ ಮಕ್ಕಳಿಗೆ ರಾಜ್ಯವಿಲ್ಲವೆಂಬಂತೆ ದಿಲ್ಲೀಶ್ವರನ ಕನ್ನೆಯರಿಗೆ ವಲ್ಲಭರಿಲ್ಲ. ವಿಭವೈಶ್ವರ್ಯಗಳಲ್ಲಿ ಬೆಳೆದು ಸುಖದಿಂದಿರುವ ವಿಲಾಸಿನಿಯರಿಗೆ ಪತಿಯಿಲ್ಲದಿದ್ದರೆ ಅವರ ಗತಿ ಏನಾಗಬೇಕು? ಪರಮಾತ್ಮನು ಹೆಂಗಸಿಗಾಗಿ ಗಂಡಸನ್ನೂ ಗಂಡಸಿಗಾಗಿ ಹೆಂಗಸನ್ನೂ ಬೇಕಾಗಿ ನಿರ್ಮಿಸಿರಲು ಅನ್ಯೋನ್ಯರ ಸಮಾಗಮ ಸುಖವಿಲ್ಲದೆ ಅವರು ಜೀವಿಸುವದೆಂತು? ಔರಂಗಜೇಬನಂಥ ದಾಂಭಿಕನಾದ ಸಾಧುವಿಗೆ ಅನೇಕ ಜನ ಪತ್ನಿಯರೂ, ಉಪಪತ್ನಿಯರೂ ಬೇಕಾಗಿರಲು ಪಾಪ, ಕೆಲಸವಿಲ್ಲದೆ ಅಂತಃಪುರದಲ್ಲಿದ್ದುಕೊಂಡಿರುವ ಸುಕುಮಾರಿಯರಾದ ರಾಜಕನ್ನೆಯರಿಗೆ ಪತಿಸುಖವಿಲ್ಲದಿದ್ದರೆ ಅವರೇನು ಮಾಡಬೇಕು? ಉಕ್ಕುತ್ತಿರುವ ತಾರುಣ್ಯದ ಭರದಲ್ಲಿರುವಾಗ ಆ ಜನರ ಆಚರಣದಲ್ಲಿ ತುಸು ಹೆಚ್ಚುಕಡಿಮೆಯಾದರೆ ಅದು ಆಶ್ಚರ್ಯವಲ್ಲ. ಪ್ರೇಮಪರವಶರಾದ ಆ ಕಾಮಿನಿಯರ ಲೀಲಾವಿಲಾಸಗಳನ್ನು ಬೈಲಿಗಿಡುವದಾದರೂ ಅಕ್ಷಮ್ಯವೇ.

ಆದರೆ ಇಂಥ ಕ್ಷುಲ್ಲಕವಾದ ಕಾರಣಕ್ಕಾಗಿ ಹಿಂದುಸ್ಥಾನದ ದೇಶವೆಲ್ಲ ಸಮರ ಭೂಮಿಯಾಗಿ ಹೋಗಿ ಒಡಹುಟ್ಟಿದವರಾದ ಪ್ರಿಯಬಂಧುಗಳು ಪರಸ್ಪರರ ಕುತ್ತಿಗೆ ಹಿಚುಕಲಿಕ್ಕೆ ಯತ್ನಮಾಡಿದರೆಂಬದಕ್ಕಾಗಿ ನಾವು ಅನಿರ್ವಾಹ ವೆಂದು ಮೇಲ್ಕಂಡ ಸಂಗತಿಯನ್ನು ವಿವರಿಸಿದೆವು.

## ೩

## ಬಂಧುಭಗಿನಿಗಳ ಆಲೋಚನೆಯು.

ವೈಶಾಖ ಮಾಸದಲ್ಲಿ ಮಧ್ಯಾಹ್ನಗತನಾದ ಸೂರ್ಯನ ಕಿರಣಗಳು ಕಿಡಿಗಳನ್ನೇ ಕರೆಯುತ್ತಿರುವವೋ ಎಂಬಂತೆ ಬಿಸಿಲಿನ ಪ್ರಖರವಾದ ತಾಪವು ದುಃಸಹವಾಗಿತ್ತು. ಧರ್ಮಾರ್ಥಕ್ಕಾಗಿ ಅಲ್ಲ, ಲೋಕೋಪಕಾರಕ್ಕಾಗಿ ಅಲ್ಲ, ಆತ್ಮಸುಖಕ್ಕಾಗಿ ಅಲ್ಲ, ಕೇವಲ ಹಣಕ್ಕೆ ಹಣ ಕೂಡಿಸಿ ಅದರದೊಂದು ದೊಡ್ಡ ರಾಶಿಯನ್ನೊಟ್ಟಿ ನೋಡಿ ಸಂತೋಷ ಪಡುವದಕ್ಕಾಗಿಯೇ ವರ್ತ ಕರು ಅಂಥ ಉರಿಯುವ ಬಿಸಿಲಿನಲ್ಲಿ ಉಸುರಾಡಿಸಲು ಕೂಡ ಅವಕಾಶ ವನ್ನು ಕಾಣದೆ ಆ ಪೇಟೆಯಿಂದ ಈ ಪೇಟೆಗೆ ಈ ಪೇಟೆಯಿಂದ ಆ ಪೇಟೆಗೆ ತ್ವರೆಯಿಂದ ಹೋಗಿಬರುತ್ತಿದ್ದರು ವಂಚಕರೂ ಮೋಸಗಾರರೂ, ಪ್ರಿಯಾ-ನ್ವೇಷಿಗಳೂ ಮೈಮೇಲೆ ಎಚ್ಚರವಿಲ್ಲದೆ ಓಡಾಡುತ್ತಿದ್ದರು. ಮಧ್ಯಾಹ್ನ ಕ್ಕಿಲ್ಲದ ಬಡವರು, ಹೊಟ್ಟೆಗಾಗಿಯೂ ಗೇಣು ಬಟ್ಟೆಗಾಗಿಯೂ, ಬಿಸಿಲಿಗೆ ಕಾಲು ಸುಟ್ಟು ಅರಳಾಗುತ್ತಿದ್ದರೂ ತಲೆಯ ಮೇಲಿನ ಭಾರವನ್ನು ಹೊತ್ತು ಕೊಂಡು ಅತಿ ಕಷ್ಟದಿಂದ ನಡೆದಿದ್ದರು.

ಹೀಗೆ ಪ್ರಖರವಾಗಿ ಉಕ್ಕೇರಿ ಬರುತ್ತಿರುವ ಬಿಸಿಲಿನ ಸಮುದ್ರದ ಮಧ್ಯದಲ್ಲಿ ಸಂದಟಿತವಾದ ಉದ್ಯಾನಗಳಿಂದ ಪರಿವೃತವಾದ ರಾಜಮಂದಿರ ಗಳ ಸಮೂಹವು ಪರಮ ರಮಣೀಯವಾದ ನಡುಗಡ್ಡೆಯಂತೆ ಶೋಭಿಸು ತ್ತಿತ್ತು. ಅದರಲ್ಲಿ ಶಹಾಜಹಾನ್ ಬಾದಶಹನ ಕಡೆಹುಟ್ಟಿ ಮಗಳಾದ ರೋಶನಾರಾ ರಾಜಕುಮಾರಿಯ ಮಂದಿರದ ಉಪ್ಪರಿಗೆಯಂತೂ ಬೇಸಿಗೆಯ ಕಾಲದಲ್ಲಿ ಬಹು ಶೀತಲವಾಗಿದ್ದು ಸುಖಾಸ್ಪದವಾಗಿತ್ತು. ಆವು, ಅಶೋಕ,

ಚೆಂಪಕ, ಬಕುಲ ಮುಂತಾದ ದೊಡ್ಡ ದೊಡ್ಡ ಮರಗಳು ಸಂದಣಿತವಾದ ತಮ್ಮ ಪಲ್ಲವರಾಶಿಗಳನ್ನು ಮರೆಯಾಗಿ ಹಿಡಿದು ರೋಶನಾರೆಯ ಮಂದಿರದ ಮೇಲೆ ಸೂರ್ಯನ ಕಿರಣಗಳನ್ನು ಬರಗೊಡದಂತೆ ಕಾದುಕೊಂಡು ನಿಂತಿದ್ದವು. ಆ ಮಂದಿರದ ಗವಾಕ್ಷ ಗವಾಕ್ಷಗಳಲ್ಲಿ ದವನ, ಪಾಚ, ಗುಲಾಬ ಮುಂತಾದ ಸುವಾಸವುಳ್ಳ ಸಸಿಗಳುಳ್ಳ ರಂಜಣಿಗೆಗಳನ್ನು ಇರಿಸಿದ್ದರು. ವಾತಾಯನಗಳಿಗೆ ಬಾಳದ ಬೇರಿನ ತೆರೆಗಳನ್ನು ಹಾಕಿ ಅವುಗಳಿಗೆ ಗುಲಾಬದ ನೀರು ಹೊಡೆದಿದ್ದರು. ಗೂಟಗೂಟಗಳಿಗೆ ಗುಲಾಬ, ಬಕುಲ, ಜಾಜಿ ಮಲ್ಲಿಗೆ, ಪಾರಿಜಾತ ಮುಂತಾದ ಹೂಮಾಲೆಗಳನ್ನು ತೂಗುಹಾಕಿದ್ದರು.

ಹೀಗೆ ಶೀತೋಪಚಾರಗಳ ಸಮೃದ್ಧಿಯಿಂದ ಸುಖಮಯವಾಗಿರುವ ಆ ಮಂದಿರದಲ್ಲಿ ರೋಶನಾರೆಯು, ಅಲಂಕರಿಸಿದ ಒಂದು ಮಂಚದ ಮೇಲೆ ಹಂಸತೂಲಿಕೆಯ ದಿಂಬಕ್ಕೆ ಆತುಕೊಂಡು ಸ್ವೇಚ್ಛೆಯಿಂದ ಕುಳಿತಿದ್ದಳು. ಉಟ್ಟುಕೊಂಡಿರುವಳೊ ಇಲ್ಲವೊ ಎಂಬಷ್ಟು ಹಗುರಾಗಿರುವ ಡಾಕಾ ಮಲ ಮಲದಿಂದೆ ಮಾಡಿದ ಶುಭ್ರವಾದ ಲುಂಗಿಯನ್ನುಟ್ಟುಕೊಂಡು ಹಸುರು ಬಣ್ಣದ ತಿಳುವಾದ ರೇಸಿಮೆಯ ರಾಕೆಯನ್ನು ಅವಳು ತೊಟ್ಟುಕೊಂಡಿದ್ದಳು. ಅವಳ ಕಿವಿಗಳಲ್ಲಿ ಅಲ್ಲಾಡಿ ಮಿನುಗುವ ನೀಲಮಣಿಗಳ ಜುಳಜುಳಿಗಳೂ, ಬೆಳ್ಳಿಯ ಚಿಕ್ಕೆಯಂತೆ ಅವಳ ಮೂಗಿನಲ್ಲಿ ತಳತಳಿಸುವ ದೊಡ್ಡ ಮುತ್ತಿನ 'ಬುಲಾಕೂ' ತಿಳುವಾದ ಸುವರ್ಣಕಂಕಣಗಳೂ, ಅನಾಮಿಕೆಯಲ್ಲಿ ಮಿನುಗುತ್ತಿರುವ ಒಂದೇ ಒಂದಾಗಿದ್ದ ವಜ್ರದುಂಗುರವೂ, ಇಷ್ಟೇ ಅವಳ ಆಭರಣಗಳಾಗಿದ್ದವು. ರೋಶನಾರೆಯು ನಿಃಸಂದೇಹವಾಗಿ ಚಲುವೆಯೇ. ಆದರೂ ಅವಳ ಅಕ್ಕನಾದ ಜೇಗಮ್ ಸಾಹೇಬಳ ಲಾವಣ್ಯದ ಅರ್ಧದಷ್ಟು ಇವಳಿಗಿದ್ದಿಲ್ಲ.

"ಅಮಿರಾರಬೀ! ಔರಂಗಜೇಬ ಸುಲ್ತಾನರಿಗೆ ನನ್ನ ಮಂದಿರಕ್ಕೆ ಬರಹೇಳಿದಿಯಲ್ಲವೆ?" ಎಂದು ರೋಶನಾರೆಯು ತನಗೆ ಗಾಳಿಯನ್ನು ಹಾಕುತ್ತಿರುವ ಆ ಪರಿಚಾರಿಕೆಯನ್ನು ಕುರಿತು ಪ್ರಶ್ನೆಮಾಡಿದಳು.

"ಹೇಳಿದೆನು. ಜೇಗನೆ ಬರುವೆನೆಂದು ಸುಲ್ತಾನರು ಹೇಳಿದರು."

"ನೀನು ಹೋದಾಗ ಅವರೇನು ಮಾಡುತ್ತಿದ್ದರು?"

"ಮುಲ್ಲಾ ಸಾಲೆ, ಕಾದಿಲುಲ್ಲಾ ಖಾನ, ಹಕೀಮದಾವುದ, ಶಾಯಿಸ್ತೇ ಖಾನ ಮುಂತಾದ ಮಹಾತ್ಮರೊಡನೆ ಏನೋ ಆಲೋಚನೆಗೈಯುತ್ತಿದ್ದರು. ಸುಲ್ತಾನರು ಬೇಗನೆ ದಕ್ಷಿಣಕ್ಕೆ ಹೋಗುವವರಾಗಿರುವಂತೆ ತೋರುತ್ತದೆ." ಎಂದು ನಿಪುಣೆಯಾದ ಆ ದಾಸಿಯು ನುಡಿದಳು.

"ಒಳ್ಳೇದು, ಆ ಮಂಚದ ಮೇಲೆ ತಿವಾಸಿಗೆ ದಿಂಬಗಳನ್ನು ಸಮಮಾಡಿ ಇಡು. ಔರಂಗಜೇಬರಿಗೆ ಅಸ್ತವ್ಯಸ್ತತೆಯು ಎಷ್ಟುಮಾತ್ರವೂ ಸರಿಬರುವದಿಲ್ಲ" ಎಂದು ರೋಶನಾರೆಯು ಆವಿಾರೆಗೆ ಆಜ್ಞಾಪಿಸಿದಳು.

ತುಸು ಹೊತ್ತಿನಲ್ಲಿಯೇ ಔರಂಗಜೇಬನು ರೋಶನಾರೆಯ ಮಂದಿರಕ್ಕೆ ಬಂದನು. ಅವನು ಬಂದ ಕೂಡಲೆ ರೋಶನಾರೆಯು ಎದ್ದು ನಿಂತು ಪ್ರಣಾಮ ಮಾಡಿ "ಅಣ್ಣಾ, ಆ ಆಸನದಲ್ಲಿ ವಿಶ್ರಮಿಸು. ನಾನು ಕರಿಸಿದ್ದು ಯಾವಾಗ, ನೀನು ಬರುವದು ಯಾವಾಗ?" ಎಂದು ಮೃದುಹಾಸಗೈದು ಕೇಳಿದಳು.

"ಅಮ್ಮಾ, ನೀನು ಹೆಣ್ಣುಮಗಳಾಗಿ ಹುಟ್ಟಿ ರಾಜಕಾರಣಗಳ ತಾಪದಿಂದ ಮುಕ್ತಳಾಗಿರುವಿ."

"ನಾನು ದಿಲ್ಲಿಯ ಬಾದಶಹರ ಮಗಳಾಗಿ ಹುಟ್ಟುವದಕ್ಕಿಂತಲೂ ಒಂದು ಕ್ಷುದ್ರಜಂತುವಾಗಿ ಹುಟ್ಟಿದ್ದರೆ ಒಳಿತಾಗುತ್ತಿತ್ತು."

"ರೋಶನ್, ನಿನ್ನ ಅಭಿಪ್ರಾಯವು ನನಗೆ ವಿದಿತವಾಯಿತು. ಆದರೆ ಯೋಚಿಸಬೇಡ. ನಾನು ದಿಲ್ಲಿಯ ಬಾದಶಹನಾದರೆ ನಿನಗೆ ಮದುವೆಯಾಗಲು ಅಪ್ಪಣೆ ಕೊಡುವೆನೆಂದು ಮೊದಲೇ ಹೇಳಿಲ್ಲವೆ?"

"ಅಣ್ಣಾ, ನನ್ನ ಮದುವೆಯ ಮಾತು ಹಾಗಿರಲಿ, ನೀನು ಬಾದಶಹನಾದರೆ ಸಾಕು!" ಎಂದು ರೋಶನಾರೆಯು ಲಜ್ಜಾಯುತೆಯಾಗಿ ನುಡಿದಳು.

"ನಿನ್ನ ಸದಿಚ್ಛೆಯನ್ನು ಕಂಡೇ ನನಗೆ ಬಾದಶಹನಾದಷ್ಟು ಸಂತೋಷವಾಯಿತು. ಆದರೆ ರೋಶನ್, ನಿನ್ನ ಹಿರಿಯ ಅಣ್ಣನಾದ ದಾರಾಶಹನು ಈ ಅಂತಃಪುರದ ಗೋಡೆಯನ್ನೇರಿ ಬಂದ ರುಸ್ತುಮನನ್ನು ಕೊಲ್ಲಿಸಿದ್ದಲ್ಲದೆ ನಿನ್ನ ವಿಷಯವಾಗಿ ಅಪವಾದವನ್ನು ಹುಟ್ಟಿಸಿದ್ದು ಕೇಳಿ ನನಗೆ ಪರಮಾವಧಿಯ ದುಃಖವಾಗಿದೆ."

ಮೊದಲೇ ಸಂತಾಪದಿಂದ ಒಳಗಿಂದೊಳಗೆ ಕುದಿಯುತ್ತಿದ್ದ ರೋಶನಾರೆಯು ಔರಂಗಜೇಬನಾಡಿದ ಮಾತು ಕೇಳಿ ಕಡುಕೋಪದಿಂದ ಹಲ್ಲು ಕಡಿದು "ಔರಂಗಜೇಬ, ದುಷ್ಟನಾದ ಆ ದಾರಾನ ಹೆಸರನ್ನೇಕೆ ತೆಗೆದುಕೊಂಡಿ! ಅವನ ಹೆಣ ಚಂದಾಗಲಿ! ಅವನ ಹೆಂಡರು ರಂಡೆಯರಾಗಲಿ !! ಅವನ ವಂಶವು ನಿರ್ವಂಶವಾಗಲಿ !!! ರುಸ್ತುಮನಿಗಿಂತ ಕೆಟ್ಟ ಮರಣವು ದಾರಾನಿಗೆ ಒದಗಿದ್ದು ನೋಡದಲೆ ನಾನು ಪ್ರಾಣವನ್ನು ಬಿಡಲಿಕ್ಕಿಲ್ಲ. ಆವನ ಹೆಣವನ್ನು ನಾಯಿನರಿಗಳ ಪಾಲು ಮಾಡದಿದ್ದರೆ ನನ್ನ ಹೆಸರು ರೋಶನಾರೆಯೇ ಅಲ್ಲ!" ಎಂದು ಆವೇಶದಿಂದ ನುಡಿದ ರೋಶನಾರೆಯು ಮುಖದಲ್ಲಿ ಮಾರಿಗಿಂತಲೂ ಅಧಿಕವಾದ ನಿಷ್ಠುರತೆಯು ಕಂಡುಬಂದಿತು.

ರೋಶನಾರೆಯು ಹೃದಯದಲ್ಲಿ ವಿಷಾಗ್ನಿಯು ಹೊತ್ತಿಕೊಂಡಿರುವದನ್ನು ಕಂಡು ಔರಂಗಜೇಬನಿಗೆ ಪರಮಾವಧಿಯ ಸಂತೋಷವಾಯಿತು. ಸದ್ಯಕ್ಕೆ ಈ ವಿಷಯವನ್ನು ಬೆಳಿಸಕೂಡದೆಂದು ಆಲೋಚಿಸಿ, ಆ ಕಪಟಿಯು ವಿಷಯಾಂತರವನ್ನು ಮಾಡುವದಕ್ಕಾಗಿ "ವಾಃ ರೋಶನಾರಾ ಬೇಗಮ್! ಈ ನಿಮ್ಮ ಮಂದಿರವು ಪ್ರತ್ಯಕ್ಷ ಮಲಯಮಾರುತನ ವಿಶ್ರಾಂತಿಯ ಸ್ಥಾನದಂತೆ ಬಹು ರಮ್ಯವಾಗಿದೆ" ಎಂದು ನುಡಿದು ರೋಶನಾರೆಯು ಉದ್ವೇಗದ ನುಡಿಗಳನ್ನು ಕೇಳಿಯೂ ಕೇಳದಂತೆ ತನ್ನ ಮಂಚದ ಮೇಲೆ ಕಾಲು ಚಾಚಿಕೊಂಡು ಕುಳಿತನು.

ತನ್ನ ಮಾತಿಗೆ ಔರಂಗಜೇಬನು ಕಿವಿಗೊಡದಿರುವದನ್ನು ಅರಿತು ರೋಶನಾರೆಯು ತನ್ನ ಸಂತಾಪವನ್ನು ಕಷ್ಟದಿಂದ ನುಂಗಿಕೊಂಡು ಏನೂ ಮಾತಾಡಲರಿಯದೆ ಸುಮ್ಮನೆ ಔರಂಗಜೇಬನ ಮುಖವನ್ನು ನೋಡುತ್ತ ಕುಳಿತಳು.

ಔರಂಗಜೇಬನು ಉನ್ನತನಾಗಿಯೂ, ದೃಢಾಂಗನಾಗಿಯೂ, ವರ್ಚಸ್ವಿಯಾಗಿಯೂ ಇದ್ದನು. ಮೂವತ್ತು ಮೂವತ್ತೆರಡು ವರುಷದ ಪ್ರಾಯದವನಾದ ಆ ರಾಜಕುಮಾರನ ದೇಹದಲ್ಲಿ ಅಧಿಕವಾದ ಬಲವೂ, ಉತ್ಸಾಹವೂ, ತುಂಬಿಕೊಂಡಿತ್ತು. ಕೃಷ್ಣಸರ್ಪದಂಥ ತೀಕ್ಷ್ಣವಾದ ಕಣ್ಣುಗಳೂ, ಗರುಡನಂಥ ಇಳಿಮೂಗೂ, ತೆಳುವಾದ ತುಟಿಗಳೂ,

ವಿಲಕ್ಷಣವಾದ ನಗೆಯೂ ಅವನ ಹೃದಯದಲ್ಲಿದ್ದ ಕಪಟವನ್ನು ಸಹಜವಾಗಿ ಒಡಿಮುಕೊಡುವಂತೆ ಇದ್ದವು. ಆದರೂ ಆ ವಂಚಕನು ಸಮಯೋಚಿತ ವಾದ ಸವಿಮಾತುಗಳಿಂದಲೂ, ದಾಂಭಿಕತನಕ್ಕಾಗಿ ತೊಟ್ಟಿರುವ ಸಾಧುವೇಷದಿಂದಲೂ, ಮೇಲುಪಚಾರಗಳಿಂದಲೂ ವಂಚಕರನ್ನು ಕೂಡ ವಂಚಿಸಿ ತನ್ನ ಕಪಟವನ್ನು ಅಡಗಿಸಿಕೊಳ್ಳುತ್ತಿದ್ದನು.

ರೋಶನಾರೆಯು ಔರಂಗಜೇಬನ ಮುಖವನ್ನು ತುಸು ಹೊತ್ತು ನಿರೀಕ್ಷಿಸಿ ಅಂದದ್ದು : "ಔರಂಗಜೇಬ, ನೀನು ಈ ರಾಜ್ಯದಲ್ಲಿರುವವರನ್ನು ವಂಚಿಸಬಲ್ಲಿಯಾದರೂ ನನ್ನನ್ನು ಮಾತ್ರ ನೀನು ವಂಚಿಸಲಾರಿ! ದಾರಾನಿಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಡಿಸಲು ನಾನು ಪ್ರತಿಜ್ಞೆ ಮಾಡಿರು ವೆನು. ಆ ಕಾರ್ಯವು ನಿನ್ನಿಂದಲ್ಲದೆ ಅನ್ಯರಿಂದಾಗದೆಂದು ತಿಳಿದು ನಾನು ನಿನ್ನ ಬೆನ್ನುಬಿದ್ದಿರುವೆನು."

"ಏನೆಂದಿ ರೋಶನ್! ನಮ್ಮ ಒಡಹುಟ್ಟಿದವನೂ, ಅಣ್ಣನೂ, ಬಾದಶಹರ ಪ್ರೀತ್ಯಾಸ್ಪದನೂ ಆಗಿರುವ ದಾರಾಶಹನ ಮೇಲೆ ನಾವು ದ್ರೋಹವನ್ನೆಣಿಸಬಹುದೆ?" ಎಂದು ತುಸು ಕ್ರುದ್ಧನಾದಂತೆ ನಟಿಸಿ ಔರಂಗಜೇಬನು ನುಡಿದನು.

"ಔರಂಗಜೇಬ, ಇದು ರಂಗಭೂಮಿಯಲ್ಲ! ಇಲ್ಲಿ ನೀನು ಕೋಪ ವನ್ನು ನಟಿಸಿದರೆ ನಾಟದು. ತಂದೆಯವರ ಪಶ್ಚಾತ್ ನೀನು ದಿಲ್ಲಿಯ ಬಾದಶಹನಾಗಬೇಕೆಂದು ಹವಣಿಸುತ್ತಿರುವಿಯಲ್ಲವೆ?"

"ಮನಸಿನಲ್ಲಿ ಮಂಡಿಗೆ ತಿಂದರೆ ಗೋಧಿಯ ರೊಕ್ಕ ಕೊಡುವರಾರು? ದಾರಾಶಹನು ಹಿರಿಯ ಮಗನು; ಬಾದಶಹರ ಪ್ರೇಮವು ಅವನ ಮೇಲೆ ಬಹಳ. ಅವನೇ ಮುಂದಾಗತಕ್ಕ ಸಾರ್ವಭೌಮನೆಂದು ತಂದೆಯವರು ಈಗಿನಿಂದಲೇ ಸಾರುತ್ತಿರುವರು."

"ಅಣ್ಣಾ, ನಿನ್ನಂಥ ಸಾಹಸಿಯೂ, ಪರಾಕ್ರಮಿಯೂ, ದೀರ್ಘೋ- ದ್ಯೋಗಿಯೂ, ಸುವ್ಯವಸ್ಥಿತನೂ ಆಗಿರುವ ರಾಜಕುಮಾರನು ಹಿಂದು- ಸ್ಥಾನದ ಚಕ್ರವರ್ತಿಯಾಗಲಿಕ್ಕೆಯೇ ಹುಟ್ಟಿರುವನೆಂದು ನಾನು ದೃಢವಾಗಿ ನಂಬಿರುತ್ತೇನೆ."

"ರೋಶನಾರಾ ಬೇಗಮ್, ನೀನು ಹೇಳಿದ ಗುಣಗಳಲ್ಲಿ ಒಂದಾದರೂ ಗುಣವಿಲ್ಲದೆ ನಮ್ಮ ತಂದೆಯುವರು ದಿಲ್ಲಿಯ ಬಾದಶಹರಾಗಲಿಲ್ಲವೆ? ಮೇಲಾಗಿ ಸುಲ್ತಾನ ದಾರಾಶಹನು ಅಸಾಧಾರಣನಾದ ವೀರನೂ, ಅಗಾಧವಾದ ಪಾಂಡಿತ್ಯವುಳ್ಳವನೂ, ಆಗಿರುವದಲ್ಲದೆ ಅವನು ಕೇವಲ ಅಕಬರ ಬಾದಶಹರ ಅವತಾರನೇ ಎಂದು ಎಲ್ಲರೂ ತರ್ಕಿಸುತ್ತಿರುವರು. ಇಂಥವನನ್ನು ಹಿಂದಕ್ಕೆ ನೂಕಿ ನಾನು ಬಾದಶಹನಾಗುವೆನೆಂಬ ವಿಚಾರವೇ ಮೂರ್ಖತನದ್ದು!"

"ಔರಂಗಜೇಬನಹುದೊ!!! ಅಣ್ಣಯ್ಯಾ, ನಾನು ನಿನ್ನ ತಂಗಿಯೇ ಇರುವೆನು. ನನ್ನ ಅಂತರ್ಗತವನ್ನು ಅರಿತುಕೊಳ್ಳಬೇಕೆಂದು ನೀನು ಹೀಗೆ ಉಪಕ್ರಮಿಸುತ್ತಿರುವಿ!"

ಔರಂಗಜೇಬನು ಮೆಲ್ಲಗೆ ನಕ್ಕು ಅಂದದ್ದು "ರೋಶನ್, ನಿನ್ನ ಅಭಿಪ್ರಾಯವಾದರೂ ಏನಿರುವದು ನಿಜವಾಗಿ ಹೇಳುವಿಯಾ?"

"ದರಾಯಸನು ಬಾದಶಹರ ಹಿರಿಯ ಮಗನೆಂದೂ, ಅವನು ಗುಣಿಯೆಂದೂ, ಪಂಡಿತರ ಶಿರೋಮಣಿಯೆಂದೂ ನೀನು ಹೇಳುವಿ. ಮನುಷ್ಯನ ಪಾಂಡಿತ್ಯವನ್ನು ನೋಡಿ ಅವನಿಗೆ ಚಕ್ರವರ್ತಿಯ ಸಿಂಹಾಸನ ವನ್ನು ಕೊಡಬೇಕಾಗಿದ್ದರೆ, ದೇಶದಲ್ಲಿಯ ಕಾಜೀ ಮುಲ್ಲಾಗಳೇ ರಾಜರಾಗ ಬೇಕಾಗುವದು! ದಾರಾನು ಗುಣಿಯೇ? ಅವನಂಥ ಕ್ರೂರನೂ, ಕೊಲೆಗೆ ಹೇಸದವನೂ ಹುಡುಕಿದರೂ ಸಿಕ್ಕಲಿಕ್ಕಿಲ್ಲ."

"ಸಮರ್ಕಂದದಿಂದ ಬಂದವನಾದ ರುಸ್ತುಮನನ್ನು ದರಾಯಸನು ಕೊಲ್ಲಿಸಿದ ಸಂಗತಿಯನ್ನು ಕುರಿತು ನೀನು ಮಾತಾಡಿದಿಯಷ್ಟೆ? ರುಸ್ತುಮನು ಝನಾನಾದ ಗೋಡೆಯನ್ನೇರಿ ಬಂದದ್ದೇ ನಿಜವಾಗಿದ್ದರೆ, ಅವನಿಗಾದ ಶಿಕ್ಷೆಯು ಎಂಥಾ ಯೋಗ್ಯವಾದದ್ದೆಂದು ಹೇಳಬೇಕಾಗಿದೆ."

"ಅದಿರಲಿ, ಆ ಸಂಗತಿಯನ್ನು ಕುರಿತು ನನ್ನ ಮೇಲೆ ಅಪವಾದ ವನ್ನು ತರಲೆಸಗುವವನು ನನ್ನ ಅಣ್ಣನೆ? ನಿರಪರಾಧಿಯಾದ ನಾನು ಜನರಲ್ಲಿ ಮೋರೆ ತೋರಿಸದಂತಾಗಿ, ದಾರಾನು ನನ್ನ ಅಣ್ಣನಾದರೇನಾ-ಯಿತು. ಅವನ ಕುತ್ತಿಗೆಯನ್ನು ಕರಕರನೆ ಕೊಯ್ದದ್ದು ಯಾವಾಗ ನೋಡುವೆನೋ ಎಂಬಂತಾಗಿದೆ." ಎಂದು ಹಲ್ಲು ಕಡಿದು ತಾನೀಗ

ದಾರಾನ ಕುತ್ತಿಗೆಯನ್ನು ಕೊಯ್ಯುತ್ತಿರುವಳೋ ಎಂಬಂತೆ ಹಾವ-ಭಾವ ವನ್ನು ಮಾಡುತ್ತ ರೋಶನಾರೆಯು ನುಡಿದಳು.

ಪ್ರಿಯದರ್ಶನಿಯಾದ ಆ ಕಾಳಸರ್ಪಿಣಿಯು ಹೀಗೆ ನಿರ್ದಯಳಾಗಿ ನುಡಿದ ಮಾತು ಕೇಳಿ, ಕಠೋರಹೃದಯನಾದ ಔರಂಗಜೇಬನು ಕೂಡ ಭೀತಿಯಿಂದ ಒಳಗಿಂದೊಳಗೇ ಗದಗದನೆ ನಡುಗಿದನು. ಇಂಥ ಮಂಥರೆಯು ಪಂಥ ತೊಟ್ಟರೆ ಎಂಥ ಕಾರ್ಯವನ್ನಾದರೂ ಮಾಡುವಳೆಂದು ಅವನು ನಿಶ್ಚಯವಾಗಿ ನಂಬಿದನು. ರೋಶನಾರೆಯ ಮನಸ್ಸಿನಲ್ಲಿ ದಾರಾನ ವಿಷಯವಾಗಿ ದೀರ್ಘದ್ವೇಷವು ನೆಲಿಸಿರುವದು ನಿಶ್ಚಯವೆಂದು ತಿಳಿದು, ಈ ಸಮಯವನ್ನು ಹೋಗಗೊಡದಲೆ ಅವಳನ್ನು ತನ್ನ ಪಕ್ಷಕ್ಕೆ ತೆಗೆದುಕೊಳ್ಳಬೇಕೆಂದು ಚಿಂತಿಸಿ ಔರಂಗಜೇಬನೆಂದದ್ದು:

"ಪ್ರಿಯ ಭಗಿನಿ, ನಿನ್ನ ಮರ್ಯಾದೆಗೆ ಕಲಂಕವನ್ನು ತರಲಿಸಗಿದ ದರಾಯಸನು, ಅಂತಃಪುರದ ಮರ್ಯಾದೆಯನ್ನು ದಾಟಿ ಬಂದಿರುವ ರುಸ್ತುಮನಿಗಿಂತಲೂ ಹೆಚ್ಚಿನವನಾದ ದೋಷಿಯು. ಈ ಮಾತಿಗಾಗಿ ಅವನಿಗೆ ಪ್ರಾಯಶ್ಚಿತ್ತವಾಗಲೇಬೇಕು. ಆದರೆ ಬಾದಶಹರ ಪ್ರೀತ್ಯಾಸ್ಪದ ನಾದವನನ್ನು ನಾವು ಶಿಕ್ಷಿಸುವದು ಹೇಗೆ? ನಿಜವಾದ ಸಂಗತಿಯನ್ನು ಬಾದಶಹರಿಗೆ ಹೇಳಹೋದರೆ ಅವರಿಗೆ ನಂಬಿಗೆಯಾಗದು. ಇನ್ನು ಸುಳ್ಳೊಂದು ಸೊಟ್ಟೊಂದು ದೂರು ಹೇಳುತ್ತ ಅವನ ಮೇಲಿದ್ದ ಬಾದಶಹರ ಪ್ರೇಮವನ್ನು ಕಡಿಮೆ ಮಾಡತಕ್ಕದ್ದು. ಹೀಗೆ ಮಾಡುವದು ನಿನ್ನಿಂದ ಆಗುವದೇನು?"

ಕಾಮವಾಸನೆಯಲ್ಲಿ ಅತಿಶಯವಾಗಿ ಆಸಕ್ತಳಾಗಿರುವ ಕಾಮಿನಿಯ ಲೀಲಾವಿಲಾಸಕ್ಕೆ ಅಡ್ಡಾಗಿ ಬಂದವರನ್ನು ಆ ಮಾರಿಯು ಕೊಲ್ಲದೆ ಇರಳು. ಪ್ರೇಮದಿಂದ ಸಲಹುತ್ತಿರುವ ಪತಿಯನ್ನೂ, ಹೊಟ್ಟೆಯಲ್ಲಿ ಹುಟ್ಟಿದ ಮುದ್ದು ಮಗವನ್ನೂ ಕಾಮಾಂಧೆಯರಾದ ಕುಲಟೆಯರು ಕ್ರೂರತನದಿಂದ ಕೊಂದಿರುವ ಸಂಗತಿಗಳನ್ನು ನಮ್ಮ ವಾಚಕರು ಕೇಳಿರಬಹುದು. ಅದೇ ಮೇರೆಗೆ ರೋಶನಾರೆಯಾದರೂ ದಾರಾಶಹನ ಘಾತಕ್ಕಾಗಿ ಬೇಕಾದ ಕೃತ್ಯಗಳನ್ನು ಮಾಡಲು ಸಿದ್ಧಳಾಗಿರುವದು ಆಶ್ಚರ್ಯವಲ್ಲ.

"ಅಣ್ಣಾ, ಈ ಮಾತಿನ ಚಿಂತೆ ಬಿಡು. ಇಂದಿನಾರಭ್ಯ ನಾನು ನಿತ್ಯದಲ್ಲಿಯೂ ದಾರಾನ ವಿರುದ್ಧವಾಗಿ ಹೊಸ ಹೊಸ ಆರೋಪಗಳನ್ನು ಕಲ್ಪಿಸಿ, ಬಾದಶಹರ ಮುಂದೆ ನಂಬಿಗೆಯಾಗುವಂತೆ ಹೇಳುವೆನು. ಒಂದು ಕಲ್ಲು ತಪ್ಪಬಹುದು, ಎರಡು ಕಲ್ಲುಗಳಾದರೂ ತಪ್ಪಬಹುದು; ಆದರೆ ಎಡೆಬಿಡದೆ ಅಸಂಖ್ಯವಾದ ಕಲ್ಲುಗಳನ್ನು ಎಸೆಯಲಾರಂಭಿಸಿದರೆ, ಗಿಡದ ಮೇಲಿನ ಕಾಯಿಯು ಕತ್ತರಿಸಿ ಬೀಳದಲೆ ಇರುವದುಂಟೆ?" ರೋಶನಾರಾ ಎಂದಳು.

"ಶಾಬಾಸ್ ರೋಶನಾರಾ, ನಿನ್ನ ನಿಶ್ಚಯವನ್ನು ನೋಡಿ ನನಗೆ ಸಮಾಧಾನವಾಯಿತು. ರಾಜಕನ್ಯೆಯರಲ್ಲಿ ಇಂಥ ನಿಶ್ಚಯದ ಸ್ವಭಾವ ವಿರುವದು ಭೂಷಣವೇ!" ಎಂದು ನುಡಿದು ಔರಂಗಜೇಬನು ತಲೆದೂಗಿದನು

"ನಾವು ಹೆಣ್ಣುಮಕ್ಕಳು ನಿಶ್ಚಯಿಗಳಾಗಿರುವದಕ್ಕಿಂತಲೂ ಪುರುಷರಾದ ನೀವು ನಿಶ್ಚಯಿಗಳಾಗಿರುವದು ಶ್ರೇಯಸ್ಕರವಾದದ್ದಲ್ಲೆ?" ಎಂದು ರೋಶನಾರೆಯು ಸಂತೋಷದಿಂದ ಕೇಳಿದಳು.

"ಶಾಬಾಸ್ ಶಹಾಜಾದಿ! ಇಂದಿನಿಂದ ನೀನು ನನ್ನ ಗುರುವಾದಿ!! ನಿನ್ನ ಸಹಾಯದಿಂದಲೇ ನನ್ನ ಇಷ್ಟಾರ್ಥವು ಸಾಧಿಸತಕ್ಕದ್ದೆಂದು ಜಗತ್-ಕರ್ತನ ಇಚ್ಛೆಯಿರುವದಾಗಿ ಕಾಣುತ್ತದೆ. ಯಾ ರಹೀಮ್! ಯಾ ಸುಭಾನಲ್ಲಾ!!" ಎಂದು ಆ ದಾಂಭಿಕನು ತನ್ನ ಗಡ್ಡವನ್ನು ತೀಡಿ ಆಕಾಶದ ಕಡೆಗೆ ನೋಡಿದನು.

"ಅಣ್ಣಾ, ನೀನು ಯೋಚಿಸಬೇಡ. ಬಾದಶಹರ ಪ್ರೇಮವು ನಮ್ಮ ಶತ್ರುವಾದ ದಾರಾನ ಮೇಲೆ ಇಲ್ಲದಂತೆ ಮಾಡುವದು ನನಗೆ ಕೂಡಿತು. ಸಿಂಹಾಸನವನ್ನು ಆಕ್ರಮಿಸಿಕೊಳ್ಳುವ ಯೋಚನೆಯನ್ನು ನೀನು ಯಾವಾಗಲೂ ಮಾಡುತ್ತಲಿರು. ನೀನು ದಕ್ಷಿಣಕ್ಕೆ ಹೋದರೂ, ಇಲ್ಲಿಯ ಅರಮನೆಯಲ್ಲಾಗಲಿ, ರಾಜಸಭೆಯಲ್ಲಾಗಲಿ, ದಾರಾನ ಮನೆಯಲ್ಲಾಗಲಿ ನಡೆದಿರುವ ಸಂಗತಿಗಳನ್ನೆಲ್ಲ ನಿನಗೆ ನಾನು ಕಾಲಕಾಲಕ್ಕೆ ತಿಳಿಸುತ್ತಲೇ ಇರುವೆನು. ನಮ್ಮ ನಿಮ್ಮ ನಡುವಿನ ಸಂಕೇತವು ಗುಪ್ತವಾಗಿರುವಂತೆ ಯತ್ನಿಸುವೆನು. ಮತ್ತಿನ್ನೇನು ಬೇಕು?"

"ರೋಶನಾರಾ, ನನಗೆ ಸ್ವಹಿತವು ಇರುವದೋ ಇಲ್ಲವೋ ಪರಮೇಶ್ವರನೊಬ್ಬನಿಗೆ ಗೊತ್ತು! ನೀನು ದರಾಯುಸನನ್ನು ಬಗ್ಗುಬಡಿಯ ಬೇಕೆನ್ನುವಿ. ನನ್ನ ವಿಚಾರವಾದರೂ ಹಾಗೆಯೇ ಇರುವದು. ಆದರೆ ನನ್ನ ಉದ್ದೇಶ ಬೇರೆ, ನಿನ್ನ ಉದ್ದೇಶವು ಬೇರೆ. ಪಾಂಖಂಡಿಗಳೂ ಮೂರ್ತಿ ಪೂಜಕರೂ ಆಗಿರುವ ಹಿಂದೂ ಕಾಫರರ ಕೆಟ್ಟ ಧರ್ಮವನ್ನು ನಮ್ಮ ಅಣ್ಣನವರು ಒಳಗಿಂದೊಳಗೇ ಸ್ವೀಕರಿಸಿರುವರು. ಇಂಥ ಕಾಫರನಾದ ದಾರಾಶಹನು ಸತ್ಯಧರ್ಮಿಗಳಾದ ಮುಸಲ್ಮಾನರ ಮೇಲೆ ಬಾದಶಹನಾಗಿ ಆಳುವದನ್ನು ನೋಡುವದಕ್ಕಿಂತಲೂ ಈಗಲೆ ಲೋಕವು ಮುಳುಗಿ ಹೋಗುವದೇನು ಕೆಟ್ಟದ್ದು? ತಿಳಿದು ನೋಡಿದರೆ ದರಾಯುಸನನ್ನು ಸಂಹರಿಸುವದು ಪಾಪವಾಗಿರದೆ ಪುಣ್ಯವೇ ಎಂದು ನಾನು ತಿಳುಕೊಂಡಿದ್ದೇನೆ."

"ಹೀಗೆ ಮಾತಾಡಬಾರದೆ ಬಹದ್ದರನೆ!" ಎಂದು ರೋಶನಾರೆಯು ಕುಲುಕುಲನೆ ನಗುತ್ತ ಉದ್ಗಾರ ತೆಗೆದಳು.

"ಚತುರೆಯಾದ ನನ್ನ ತಂಗಿಯೇ, ನನಗಿನ್ನು ಅಪ್ಪಣೆ ಕೊಡು. ನಿಮಾಜದ ಸಮಯವಾಗಿದೆ."

"ಅಣ್ಣಾ, ಬಿಸಿಲು ಬಹಳಾಗಿದೆ. ಈ 'ಶರಬತ್ತು' ತುಸು ತೆಗೆದುಕೋ" ಎಂದು ಹೇಳಿ ರೋಶನಾರೆಯು ರತ್ನಖಚಿತವಾದ ಸುವರ್ಣದ ಪಾತ್ರದಲ್ಲಿ ಸುಗಂಧವನ್ನು ಸೂಸುತ್ತಿರುವ ಅಮೃತೋಪಮವಾದ ಪೇಯ ವನ್ನು ಹಾಕಿ ಕೊಟ್ಟಳು.

ಔರಂಗಜೇಬನು ಆಕ್ಲಮನಿವಾರಕವಾದ ಪೇಯವನ್ನು ಕುಡಿದು ಆನಂದಭರಿತನಾಗಿ "ರೋಶನ್, ಒಳ್ಳೇ ಸಮಯಕ್ಕೆ ಈ ಪೇಯವನ್ನು ನನಗೆ ಕೊಟ್ಟೆ. ಬಿಸಿಲಿನ ತಾಪದಿಂದ ನಾನೊಳಿತಾಗಿ ಬಳಲುತಿದ್ದೆನು. ನಿನಗೆ ಕಲ್ಯಾಣವಾಗಲಿ!" ಎಂದು ಹೇಳಿ ಹೋಗುವದಕ್ಕೆ ಸಿದ್ಧನಾಗಿ ನಿಂತನು.

"ಸುಲ್ತಾನ್, ನೀನು ದಕ್ಷಿಣಕ್ಕೆ ಹೋಗುವದಕ್ಕೆ ಮುಂಚಿತವಾಗಿ ಇನ್ನೊಮ್ಮೆ ನನ್ನನ್ನು ಕಂಡು ಹೋಗುವಿಯಷ್ಟೆ?"

"ಅವಶ್ಯ ! ಅವಶ್ಯ !!" ಎಂದು ಹೇಳುತ್ತ ಔರಂಗಜೇಬನು ತನ್ನ ಮಂದಿರದ ಕಡೆಗೆ ನಡೆದನು. ಮಾರ್ಗದಲ್ಲಿ ಅವನು ಚಿಂತಿಸಿದ್ದೇನೆಂದರೆ:—

"ಒಂದು ಮಾರ್ಗವಂತೂ ಸಾಧಿಸಿದಂತಾಯಿತು. ಬಾದಶಹರ ಪ್ರೇಮವು ಬೇಗಮ್ ಸಾಹೇಬಳ ಮೇಲೆ ಇರುವಷ್ಟೆಯೇ ರೋಶನಾರೆಯ ಮೇಲೆ ಇರುವದು. ಮನೋರಂಜನಾರ್ಥವಾಗಿ ಅವರು ಸರಲಸ್ವಭಾವದವಳಾದ ಬೇಗಮ್ಮಳೊಡನೆ ಮಾತಾಡುವರು. ವಿಚಾರಾರ್ಹವಾದ ವಿಷಯಗಳನ್ನು ಕುರಿತು ಅವರು ಚತುರೆಯಾದ ರೋಶನಾರೆಯೊಡನೆ ಆಲೋಚಿಸುವರು. ದಾರಾಶಹನ ವಿರುದ್ಧವಾಗಲಿ, ತನಗೆ ಅನುಕೂಲವಾಗಿಯಾಗಲಿ, ಬಾದಶಹರ ಕಿವಿಯೂದಬೇಕಾದರೆ ರೋಶನಾರೆಯೇ ಬಲ್ಲವಳು ಈ ಸಹಾಯ್ಯಕರ್ತ್ರಿಯು ನನಗೆ ಆಯತ್ತವಾಗಿ ಅನುಕೂಲಳಾದಳು. ಕಾರ್ಯಾರಂಭದಲ್ಲಿ ಇದೊಂದು ಶುಭಸೂಚನೆಯೇ ಸರಿ! ಶಾಯಿಸ್ತೇಖಾನ, ದಾನಿಶ್‌ಮಂದಖಾನ, ಕಾದಿಲುಲ್ಲಾಖಾನ ಮುಂತಾದ ಪ್ರಭೃತಿಗಳ ಮನಸ್ಸಿನಲ್ಲಿ ನಾನೇ ಬಾದಶಹನಾಗಬೇಕೆಂದು ಇದೆ ಶಾಬಸ್ ದಂಭವೇ, ನಿನ್ನ ಮಹಿಮೆ ಅಗಾಧವಾದದ್ದು. ಸಂಪತ್ತನ್ನು ಇಚ್ಛಿಸುವ ಮೂಢರೆ, ನೀವು ಅದರ ಬೆನ್ನುಹತ್ತಿ ದಣುಕೊಳ್ಳಬೇಡಿರಿ! ಹಸುರಿಗೆ ಮೆಚ್ಚಿ ಗದ್ದೆಯಲ್ಲಿ ಮೇಯುತ್ತ ತಿರುಗುವ ಕುದುರೆಯಂತೆ ಅದು ನಿಮ್ಮನ್ನು ಕಂಡು ದೂರ ಓಡಿಹೋಗುವದು. ನೀವು ನಿಸ್ಪೃಹರಂತೆ ದಂಭ ತೊಟ್ಟು ಸಂಪತ್ತು ನಮಗೇಕೆಂದು ಅದಕ್ಕೆ ಪರಾಙ್ಮುಖರಾಗಿ ನಿಂತಂತೆ ವರ್ತಿಸಿ ನೋಡಿರಿ! ಅದೇ ಸಂಪತ್ತು ನಿಮ್ಮ ಮುಂದೆ ಕೈ ಜೋಡಿಸಿಕೊಂಡು ಬಂದು ನಿಲ್ಲುವದು. ನಾನು ಧರ್ಮಪರಾಯಣನಂತೆ ಆಚರಿಸಿ ಜಪಮಾಲೆಯನ್ನು ತೆಗೆದುಕೊಂಡು 'ಅಲ್ಲಾ! ಅಲ್ಲಾ!!' ಎಂದು ಕೂಗಿಕೊಂಡರೆ, ಮಹಾಪಂಡಿತನೆನಿಸಿಕೊಳ್ಳುವ ದಾನಿಶ್‌ಮಂದಖಾನನು ನಿನ್ನೆಯೇ ನನ್ನ ಪಕ್ಷಕ್ಕೆ ಸೇರಿದನು. ಮಿಕ್ಕುಳಿದವರನ್ನು ನನ್ನ ವಶಕ್ಕೆ ತೆಗೆದುಕೊಳ್ಳುವದೇನು ತಡ?"

೪

## ವಿಷಯವನ್ನೊದುವಿಕೆ

ಶುಕ್ರವಾರವೆಂದರೆ ಧರ್ಮಾಸಕ್ತಿಯುಳ್ಳ ಮುಸಲ್ಮಾನರಿಗೆ ಪವಿತ್ರ ವಾದ ದಿವಸವು. ಜುಮ್ಮಾ (ಶುಕ್ರವಾರದ) ಮಶೀದವೆಂದರೆ ಪವಿತ್ರವಾದ ಮಶೀದೆಯು. ಮುಸಲ್ಮಾನರು ಪ್ರಹರ ಪ್ರಹರಕ್ಕೊಮ್ಮೆ ನಿತ್ಯದಲ್ಲಿಯೂ ನಮಾಜ (ಪ್ರಾರ್ಥನೆ) ಮಾಡತಕ್ಕ ಸಾಂಪ್ರದಾಯವು. ಆದರೆ ನಿತ್ಯ-ದಲ್ಲಿಯೂ ನಮಾಜ ಮಾಡಲಿಕ್ಕೆ ಅನುಕೂಲವಿಲ್ಲದವರು ಶುಕ್ರವಾರದ ದಿವಸ ಜುಮ್ಮಾಮಶೀದೆಯಲ್ಲಿ ಮೂರಾವರ್ತಿ ನಮಾಜ ಮಾಡಲೇ ಬೇಕೆಂಬದು ಇಸ್ಲಾಮೀ ಧರ್ಮದ ಕಟ್ಟಳೆಯು. ಆ ದಿವಸ ಎಲ್ಲರಿಗೂ ನಮಾಜನ್ನು ಸಾಧಿಸಲು ಅನುವಾಗಬೇಕೆಂದು, ರಾಜಾಜ್ಞೆಯ ಮೇರೆಗೆ ಕಚೇರಿ ದರಬಾರುಗಳ ಕೆಲಸಗಳು ನಿಲ್ಲಿಸಲ್ಪಡುವವು. ಆ ದಿವಸ ವಿದ್ಯಾರ್ಥಿ ಗಳಿಗೆ ಶಾಲೆಯಿಲ್ಲ. ಕೂಲಿಕಾರರಿಗೆ ಒತ್ತಾಯವಿಲ್ಲ. ಕ್ರಿಸ್ತೀ ಧರ್ಮದವರ ರಾಜ್ಯದಲ್ಲಿ ಆದಿತ್ಯವಾರದ ಮಹತ್ತ್ವವಿದ್ದಂತೆಯೇ ಮುಸಲ್ಮಾನರ ರಾಜ್ಯದಲ್ಲಿ ಶುಕ್ರವಾರದ ಮಹತ್ವವಿರುವದು.

ದಿಲ್ಲಿಯಲ್ಲಿ ಶಹಾಜಹಾನ್ ಬಾದಶಹನು ಕಟ್ಟಿಸಿದ ಪರಮ ರಮಣೀಯ ವಾದ ಜುಮ್ಮಾಮಶೀದೆಯಲ್ಲಿ ಮಧ್ಯಾಹ್ನದ ನಮಾಜಕ್ಕಾಗಿ ಸ್ವತಃ ಬಾದಶಹನೂ, ರಾಜಪುತ್ರರೂ, ಅಮೀರ ಉಮರಾವರೂ, ಸೇಟ ಸಾವು-ಕಾರರೂ, ಒಂದಾನೊಂದು ಶುಕ್ರವಾರದ ದಿವಸ ಬಂದಿದ್ದರು. "ಬಾಂಗೀ"ಗಳು ಬಾಂಗ (ಭಗವದಾಹ್ವಾನ) ಮಾಡಿದ ಕೂಡಲೆ ಎಲ್ಲರೂ ಮೊಣಕಾಲೂರಿ ಭಕ್ತಿಪುರಸ್ಸರವಾಗಿ ಪ್ರಾರ್ಥನೆ ಮಾಡಿದರು. ನಮಾಜದ ವಿಧಾನವಾದ ಬಳಿಕ ಕುರಾಣಶಾಸ್ತ್ರಪಾರಂಗತರಾದ ಮುಲ್ಲಾ ಸಾಲೇ ಸಾಹೇಬರು ಎದ್ದು ನಿಂತು, ಮಹಮದೀ ಧರ್ಮದ ಪ್ರಶಂಸಾತ್ಮಕವಾದ ವ್ಯಾಖ್ಯಾನವನ್ನು ಕೊಟ್ಟರು. ಕುರಾಣವೇ ಪರಮಾತ್ಮಪ್ರಣೀತವಾದ ಸುಶಾಸ್ತ್ರವೆಂತಲೂ, ಮಹಮದ್ ಪಯಗಂಬರರೇ ಜಗಚ್ಚಾಲಕನ ಪ್ರತಿನಿಧಿ ಗಳೆಂತಲೂ ಹೇಳುವದಲ್ಲದೆ, ಯಹೂದಿ, ಹಿಂದೂ, ಕ್ರಿಶ್ಚನ್ ಮುಂತಾದ

ಧರ್ಮಗಳನ್ನು ಮುಲ್ಲಾ ಸಾಹೇಬರು ಯಥೇಚ್ಛವಾಗಿ ಖಂಡಿಸಿದರು. ಅದರಲ್ಲಿ ಹಿಂದೂ ಜನರ ಧರ್ಮದಂಥ ಅಬದ್ಧವಾದದ್ದೂ ಅನೀತಿಮಯ ವಾದದ್ದೂ ಪೃಥ್ವೀತಲದಲ್ಲಿ ಬೇರೆ ಯಾವದೂ ಇಲ್ಲವೆಂದು ಅವರು ಸಾರಿ ಹೇಳಿದರು. ಹಿಂದೂ ಕಾಫರರ ಕೂಡ ಪವಿತ್ರ ಧರ್ಮಾನುಯಾಯಿಗಳಾದ ಮುಸಲ್ಮಾನರು ಯಾವ ಪ್ರಕಾರದ ವ್ಯವಹಾರವನ್ನಾದರೂ ಇಡಕೂಡ ದೆಂದು ಮುಲ್ಲಾನವರು ನಿರ್ಬಂಧಿಸಿದರು. ಅವರು ಮತ್ತೆ ಹೇಳಿದ್ದು:— 'ಅಕಬರ ಬಾದಶಹರವರು ಹಿಂದೂ ಭಿಕ್ಷುಕರೊಡನೆ ಧರ್ಮದ ವಿಷಯವಾಗಿ ಚರ್ಚೆ ನಡಿಸಿ 'ದೀನ್ ಇಲಾಹಿ' ಎಂಬ ಅತೋಭ್ರಷ್ಟ ತತೋಭ್ರಷ್ಟವಾದ ಪಂಥವನ್ನು ಸ್ಥಾಪಿಸಿ, ಅದರಲ್ಲಿ ಹಿಂದೂ ಜನರ ಹೀನತರವಾದ ವಿಚಾರ ಗಳನ್ನು ಸೇರಿಸಿದರು. ಅನಿಷ್ಟವಾಗಿರುವ ಆ ಪಂಥದಲ್ಲಿ ಅನೇಕ ಜನ ಪ್ರಮುಖರಾದ ಮುಸಲ್ಮಾನರು ಸೇರಿಕೊಂಡರು. ಇನ್‌ಶಾಅಲ್ಲಾ! ಹಿಂದೂ ಜನರ ನೀಚತರವಾದ ಧರ್ಮವನ್ನು ಮೆಟ್ಟಿ ರಸಾತಲಕ್ಕೆ ತುಳಿಯ ಬೇಕೆಂದು ಅನೇಕ ಶತಮಾನಗಳ ವರೆಗೆ ನಾವು ಮಾಡುತ್ತ ಬಂದ ಯತ್ನ ಗಳೆಲ್ಲ, ಅಕಬರ ಬಾದಶಹರ ಕೃತಿಗಳ ಮೂಲಕ ವ್ಯರ್ಥವಾಗಿಹೋದವು. ಅಕಬರರ ತರುವಾಯ ಆ ದೀನ್‌ಇಲಾಹೀ ಪಂಥವು ಪಯಗಂಬರರ ಕೃಪೆಯಿಂದ ತನ್ನಿಂದ ತಾನೇ ಅಳಿದುಹೋಯಿತು! ಆದರೆ, ತೋಬಾ! ತೋಬಾ!! ಈಗ ಪ್ರತ್ಯಕ್ಷ ನಮ್ಮ ಯುವರಾಜರಾದ ಸುಲ್ತಾನ ದರಾಯುಸರೇ ಅಕಬರಶಹರ ಮಾರ್ಗವನ್ನು ಅವಲಂಬಿಸಿ ಹಿಂದುಗಳ ಮೂರ್ಖತನದ ತತ್ವಗಳನ್ನು ಅನುಸರಿಸುತ್ತಿರುವರೆಂದು ನಾವು ಕೇಳುತ್ತೇವೆ. ಸತ್ಯಧರ್ಮಾಭಿಮಾನಿಗಳಾದ ನಮ್ಮ ಮುಸಲ್ಮಾನ ಬಾಂಧ ವರಿಗೆ ನಾವು ಸವಿನಯವಾಗಿ ಸೂಚಿಸುವದೇನಂದರೆ, ಅವರು ಸುಲ್ತಾನ ದರಾಯುಸರ ಮತಕ್ಕೆ ಒಳಗಾಗಿ ಇಹಪರಗಳಿಗೂ ಅಡ್ಡಾಗಬಾರದು! ಇತ್ಯಾದಿ.'

ಈ ವ್ಯಾಖ್ಯಾನವು ಮುಗಿದ ಕೂಡಲೆ ಸುಲ್ತಾನ ದರಾಯುಸನು ಮುಲ್ಲಾಸಾಲೇನ ದುರಭಿಮಾನವನ್ನು ನೆನಿಸಿ ನಕ್ಕನು. ಆದರೆ, ಶಹಾ- ಜಹಾನ್ ಬಾದಶಹನು ತನ್ನ ಪ್ರೀತಿಯ ಮಗನ ಅಪಖ್ಯಾತಿಯಾಯಿತೆಂದು ನೆನಿಸಿ ವಿಷಾದವನ್ನು ತಾಳಿದನು. ದರಾಯುಸನ ಪಕ್ಷಪಾತಿಗಳು ಕನಿಕರ

ದಿಂದ ಅವನ ಮುಖವನ್ನು ಮಿಕಿ ಮಿಕಿ ನೋಡಿದರು. ನಿಂದಕರು ಅವನನ್ನು ನೋಡಿ ಕಿಸಿಕಿಸಿ ನಕ್ಕರು.

ಶಹಾಜಹಾನ್ ಬಾದಶಹನು ಚಿಂತಾಕುಲನಾಗಿ ದಿಲ್ಲಿಯಲ್ಲಿದ್ದ ತನ್ನ ಹೊಸ ರಾಜಮಂದಿರಕ್ಕೆ ಬಂದು ಮಂಚದ ಮೇಲೆ ಬಿದ್ದುಕೊಂಡನು. ತನ್ನ ಧರ್ಮದ ನಿಜವಾದ ತತ್ವಗಳು ಅವನಿಗೆ ಚೆನ್ನಾಗಿ ತಿಳಿಯದಿದ್ದರೂ ಮುಲ್ಲಾಸಾಲೇನು ತತ್ವಜ್ಞಾನಿಯಾದ ಸಾಧುವೆಂದು ತಿಳಿದು ಅವನ ಹೇಳಿಕೆಯ ಮೇರೆಗೆ ಅಕಬರನಾಗಲಿ, ತನ್ನ ಮಗನಾದ ದಾರಾಶಹನಾಗಲಿ ಅಮಾರ್ಗಗಾಮಿಗಳೆಂದು ಅವನ ಅಭಿಪ್ರಾಯವಾಯಿತು. ಸಾರಾಸಾರ ವಿಚಾರವೂ, ಪಿತೃಭಕ್ತಿಯೂ ಶಹಾಜಹಾನನಲ್ಲೇಕೆ, ಅವನಪ್ಪನಲ್ಲಿ ಕೂಡ ಇದ್ದಿಲ್ಲ. ಮುಲ್ಲಾಸಾಲೇನು ಅಕಬರ ಬಾದಶಹನ ವಿಚಾರಶೀಲತೆಯನ್ನೂ ಅವರ ಗುಣಗಳನ್ನೂ ಹೀಯಾಳಿಸಿದ್ದು ಕೇಳಿ ಅವನಿಗೆ ವಿಷಾದವಾಗಲಿಲ್ಲ.

ತನ್ನ ಗುರುವಾದ ಮುಲ್ಲಾಸಾಹೇಬರ ವ್ಯಾಖ್ಯಾನದ ಪರಿಣಾಮವು ತನ್ನ ತಂದೆಯ ಮನಸ್ಸಿನ ಮೇಲೆ ಹೇಗಾಯಿತೆಂಬದನ್ನು ಅರಿತುಕೊಳ್ಳುವದಕ್ಕಾಗಿ ಔರಂಗಜೇಬನು ತನ್ನ ತಂದೆಯ ಮನೆಗೆ ಬಂದನು ಅವನನ್ನು ಕಂಡು "ಔರಂಗಜೇಬ, ಬಾ, ಒಳ್ಳೇ ಸಮಯಕ್ಕೆ ಬಂದಿ; ನೀನಾದರೂ ಕುರಾಣವನ್ನು ಓದಿ ನಮ್ಮ ಪಾಲಿಗೆ ಒಬ್ಬ ಮುಲ್ಲಾನೇ ಆಗಿರುವಿ! ನಿನ್ನ ಅಧ್ಯಾಪಕನು ಈ ದಿವಸ ಮಾಡಿದ ಉಪನ್ಯಾಸದ ವಿಷಯದಲ್ಲಿ ನಿನ್ನ ಅಭಿಪ್ರಾಯವೇನಿರುವದು? ಹಿಂದೂಜನರೊಡನೆ ಧರ್ಮವನ್ನು ಕುರಿತು ವಾದವಿವಾದವನ್ನು ಮಾಡುವದು ನಮ್ಮ ಕುರಾಣಕ್ಕೆ ವಿರುದ್ಧವಾಗಿರುವದೆ?" ಎಂದು ಶಹಾಜಹಾನನು ಶಂಕಿತನಾಗಿ ಕೇಳಿದನು.

"ತಾತರೆ, ನಾನು ಕುರಾಣವನ್ನು ಅನೇಕಾವರ್ತಿ ಓದಿದ್ದರೂ ಅದರಲ್ಲಿ ನಾನೊಳ್ಳೇ ಪಾರಂಗತನೆಂದು ಹೇಳಲಾರೆನು. ಆದರೂ ಸತ್ಯಧರ್ಮಕ್ಕೆ ಪರಾಙ್ಮುಖರಾದವರೊಡನೆ ವಾದಮಾಡುವದು ಸರ್ವಥಾ ಶ್ರೇಯಸ್ಕರವಾದದ್ದಲ್ಲವೆಂದು ಕುರಾಣದ ಆಧಾರದ ಮೇಲಿಂದ ಹೇಳಬಹುದು. ಯಾಕೆಂದರೆ ಚತುರರಾದ ಪಾಖಂಡಿಗಳು ಸತ್ಯವನ್ನು ಅಸತ್ಯವಾಗಿಯೂ ಅಸತ್ಯವನ್ನು ಸತ್ಯವಾಗಿಯೂ ಭಾಸಗೊಳಿಸಿ ಸನ್ಮಾರ್ಗಿಗಳನ್ನು ಮೋಸಗೊಳಿಸುವದುಂಟು. ನಮ್ಮ ಅಕಬರ ಬಾದಶಹರಂಥ ಮಹಾಬುದ್ಧಿಶಾಲಿ

ಗಳು ಕೂಡ ಮಾಯಾವಿಗಳ ಮೋಸಕ್ಕೆ ಒಳಗಾಗಿ ನಿಂದಾಸ್ಪದರಾಗಿ ಹೋಗಲಿಲ್ಲವೆ ?"

"ಔರಂಗಜೇಬ ಚೆನ್ನಾಗಿ ಮಾತಾಡಿದಿ! ಹಿಂದುಗಳ ಹಾದಿಗೆ ಹೋಗಬೇಡವೆಂದು ನಮ್ಮ ದಾರಾಶಹನಿಗೆ ಯಾರು ಹೇಳ್ವಾರು? ಶಾಇಸ್ತೆಖಾನ, ನಮ್ಮ ಅಭಿಪ್ರಾಯವನ್ನು ನೀವು ನಮ್ಮ ಯುವರಾಜನಿಗೆ ಅವಶ್ಯವಾಗಿ ತಿಳಿಸಿರಿ" ಎಂದು ಔರಂಗಜೇಬನ ಸಂಗಡ ಬಂದಿದ್ದ ಶಾಇಸ್ತೇ ಖಾನನಿಗೆ ಶಹಾಜಹಾನನು ಹೇಳಿಕೊಂಡನು.

"ಅಲಂ ಪನಾಃ! ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ. ಆದರೆ ದಾರಾ ಸುಲ್ತಾನರು ಕೇಳಬೇಕಲ್ಲ! ತಾವು ಪಂಡಿತರೆಂಬ ಅಭಿಮಾನವು ಅವರಿಗೆ ಅಧಿಕವಾಗಿದೆ. ಅರಬಸ್ಥಾನದ ಅರಣ್ಯದಲ್ಲಿ ವನಚರರಾಗಿ ಸಂಚರಿಸಿದ ಪಯುಗಂಬರರ ಜ್ಞಾನಕ್ಕಿಂತಲೂ ಹಿಂದೂ ಋಷಿಗಳ ಜ್ಞಾನವು ಹೆಚ್ಚಿನದೆಂದು ಹೇಳುವ ನಮ್ಮ ಯುವರಾಜರ ಮುಂದೆ ಕುಳಿತು ತಲೆಯೊಡಕೊಂಡರೂ ಆಗುವ ಪ್ರಯೋಜನವೇನು ? ತೋಬಾ! ತೋಬಾ!! ಯಾ ರಹಿಮಾನ್ ! ಯಾ ಸುಭಾನಲ್ಲಾ !!" ಎಂದು ನುಡಿದು ಶಾಇಸ್ತೇಖಾನನು ನೆಲದ ಮಣ್ಣು ತೆಗೆದುಕೊಂಡು ತನ್ನ ಗಡ್ಡಕ್ಕೆ ಹಚ್ಚಿಕೊಂಡನು.

"ಹಜರತ್, ಅಣ್ಣತಮ್ಮಂದಿರಂಥ ಭಾಗಾದಿಗಳಿಲ್ಲವೆಂಬ ಗಾದೆಯ ಮಾತಿರಲು ಈ ಪ್ರಸಂಗದಲ್ಲಿ ನಾನೇನಾದರೂ ಆಡಿದರೆ ಬಂಧುಮತ್ಸರದ ಆರೋಪವು ನನ್ನ ಮೇಲೆ ಬರುವದು. ಆದರೆ ಸತ್ಯಕ್ಕೆ ಸಾವು ಇಲ್ಲವಷ್ಟೆ! ಹಾವು ಹದ್ದುಗಳನ್ನೂ, ಎತ್ತು ಮಂಗಗಳನ್ನೂ ದೇವರೆಂದು ಪೂಜಿಸುವಂಥ ಮೂರ್ಖರಾದ ಹಿಂದೂ ಬೈರಾಗಿಗಳು ಖುದಾ ಪರವರ್ದಿಗಾರರ ಪ್ರತ್ಯಕ್ಷ ಪ್ರತಿನಿಧಿಗಳಾದ ಪಯುಗಂಬರವರ ಪಾದಧೂಲಿಯನ್ನಾದರೂ ಹೋಲ ಬಲ್ಲರೆ! ಹೀಗಿರಲು ಆ ನೀಚರಾದ ಬೈರಾಗಿಗಳನ್ನು ಕೊಂಡಾಡುವ ನಮ್ಮ ಅಣ್ಣಂದಿರಿಗೆ ಏನೆನ್ನಬೇಕೋ ತಿಳಿಯದು!" ಎಂದು ಔರಂಗಜೇಬನು ಹೇಳಿದನು.

"ಲೋಕದೊಡೆಯರೆ, ಈ ನೀತಿಮಯವಾದ ರಾಜ್ಯದಲ್ಲಿಯ ಮುಖ್ಯರಾದ ಮೌಲ್ವೀ ಸಾಹೇಬರೂ, ಕಾಜೀ ಮುಲ್ಲಾಗಳೂ, ದಾರಾ-ಶಹರಿಗ "ಕಾಫರ್, ಕಾಫರ್" ಎಂದು ಆಡಿಕೊಳ್ಳುತ್ತಾರೆ. ಈ ಸಿಂಹಾ-

ಸನದ ಗುಲಾಮನಾದ ನಾನು ನಮ್ಮ ಯುವರಾಜರಿಗೆ ಅಪಶಬ್ದಗಳನ್ನಾಡು ವದು ಕೇಳಿ ವಿಷಾದಗೊಂಡಿರುತ್ತೇನೆ. ಆದರೆ ಯತ್ನವಿಲ್ಲ. ಈ ಸಿಂಹಾಸನ ದಿಂದ ಹೊರಟ ಶಾಸನದಿಂದಲೇ ಯುವರಾಜರಿಗೆ ಅರಿಕೆಯಾದರೂ ಆಗಬಹುದು'' ಎಂದು ಶಾಇಸ್ತೇಖಾನನು ಸೂಚಿಸಿದನು.

ಹೀಗೆ ಎರೆಯ ಮೇಲೆ ಎರೆ ಹಾಕಿ ಔರಂಗಜೇಬನೂ ಶಾಇಸ್ತೇ ಖಾನನೂ ಬಾದಶಹರ ಮನಸ್ಸನ್ನು ಒಳಿತಾಗಿ ತಳಿಸಲು, ಅವರು ಹೇಳಿದ್ದೆಲ್ಲ ನಿಜವೆಂದು ಆ ಅದೂರದರ್ಶಿಯಾದ ವೃದ್ಧರಾಜನು ತಿಳುಕೊಂಡು ಚಿಂತೆಗೀಡಾದನು.

ತನ್ನ ಹಿರಿಯ ಮಗನೂ, ಪ್ರೀತಿಪಾತ್ರನೂ, ಪಂಡಿತನೂ ಆದ ದಾರಾನು ಕಾಫರನೆಂದು ಪ್ರಜಾಜನರ ಅಭಿಪ್ರಾಯವಾದರೆ ಮುಂದೆ ದಿಲ್ಲೀ ಸಾಮ್ರಾಜ್ಯಕ್ಕೆ ಕೇಡಾಗದೆ ಇದ್ದೀತೆ ? ಎಂದು ಚಿಂತಾಗ್ರಸ್ತನಾಗಿ ವಿಚಾರಿ ಸುತ್ತಿರುವ ಶಹಾಜಹಾನನು ಔರಂಗಜೇಬ ಶಾಇಸ್ತೆಖಾನರಿಗೆ ಹೋಗಲು ಅಪ್ಪಣೆ ಕೊಟ್ಟು ಸ್ವಸ್ಥವಾಗಿ ಮಲಗಿಕೊಂಡನು.

ಉಪಹಾರವಾದ ಬಳಿಕ ರೋಶನಾರೆಯು ತಂದೆಯ ಸಮಾಚಾರಕ್ಕೆ ಬಂದಳು. ತುಸು ಹರಟೆಯಾದ ಬಳಿಕ ಶಹಾಜಹಾನನು ಅವಳನ್ನು ಕುರಿತು "ಮುದ್ದು ಮಗಳೇ, ಸುಲ್ತಾನ ದಾರಾಶಹನ ಧರ್ಮವಿಚಾರಗಳು ಹೇಗಿರುವವೆಂಬುದು ನಿನಗೆ ಗೊತ್ತಿರುವದೇನು ?'' ಎಂದು ಕೇಳಿದನು.

ರೋಶನಾರೆಯು ಮಂದಸ್ಮಿತೆಯಾಗಿ "ಅಜ್ಞಾನಿಯಾದ ತರಳೆ ನಾನು. ಧರ್ಮದಲ್ಲಿ ನನಗೇನು ತಿಳಿಯಬೇಕಾಗಿದೆ ?" ಎಂದು ಹೇಳಿದಳು.

"ನೀನೊಳ್ಳೇ ಚತುರೆಯು ! ಈ ಮಾತಿನ ವಿಷಯವಾಗಿ ಜನರು ಏನಾಡುತ್ತಿರುವರೆಂಬದು ನಿನಗೆ ತಿಳಿಯದೆ ಇರದು."

"ಜನರಲ್ಲಿರುವ ವದಂತಿಯನ್ನು ಕೇಳಿದರೆ ದರಾಯನು ಹಿಂದೂ ಧರ್ಮದ ಪಕ್ಷಪಾತಿಯಾಗಿರುವನೆಂದು ತಿಳಿಯುತ್ತದೆ. ಈ ವಿಚಾರವೇತಕ್ಕೆ ಬೇಕಾಗಿತ್ತು ತಮಗೆ ?"

"ರೋಶನ್, ದಾರಾಶಹನು ನನ್ನ ಪಶ್ಚಾತ್ ದಿಲ್ಲಿಯ ಚಕ್ರವರ್ತಿ ಯಾಗತಕ್ಕವನು. ಹಿಂದೂಧರ್ಮದ ಪಕ್ಷಪಾತಿಯಾಗಿದ್ದ ಆ ನನ್ನ

ಮಗನನ್ನು ಜನರು ಆದರಿಸುವರೋ ಇಲ್ಲವೋ ಎಂಬ ಭೀತಿಯು ನನ್ನ ಹೃದಯದಲ್ಲಿ ತುಂಬಿಕೊಂಡಿದೆ. ''

ಈ ಅಭಿಪ್ರಾಯವನ್ನರಿತು ರೋಶನಾರೆಯು ಒಳಿತಾಗಿ ಹಿಗ್ಗಿದಳು. ಆದರೂ ಉಪಚಾರಕ್ಕಾಗಿ ಅವಳಂದದ್ದು:- '' ದಿಲ್ಲಿಯ ಚಕ್ರವರ್ತಿಯೆಂಬ ಉದಗ್ರವಾದ ಬಿರುದನ್ನು ತಾಳಿದ ನರಾಧಿಪತಿಗೆ ಜನರ ಆದರ-ಅನಾದರ ಗಳಿಂದೇನಾಗುವದು ? ''

'' ಹಾಗಂದರೇನು ರೋಶನಾರ್ ? ಪ್ರಜಾಜನರ ಆದರಕ್ಕೆ ಪಾತ್ರನಾಗದಿದ್ದ ರಾಜನ ರಾಜ್ಯವು ಸ್ಥಿರವಾಗಿ ನಿಲ್ಲಲಾರದು. ''

'' ನೀವು ತೀರಿಕೊಂಡ ಬಳಿಕ ಈ ರಾಜ್ಯವು ಸ್ಥಿರವಾಗಿ ನಿಂತ ಭಾಗ್ಯವು ನಿಮಗೇನು, ಅಳಿದುಹೋದ ಭಾಗ್ಯವಾದರೂ ನಿಮಗೇನು ? ದರಾಯುಸನು ಮುಸಲ್ಮಾನೀ ಧರ್ಮಕ್ಕೆ ಪ್ರತಿಕೂಲನಾಗಿ ನಡೆದರೆ ತನ್ನ ಫಲಭೋಗವನ್ನು ತಾನುಣ್ಣುವನು. ಬಾಬರಶಹರು ಗಳಿಸಿಟ್ಟ ರಾಜ್ಯವನ್ನು ದಾರಾಶಹರು ಕಳೆದರೆನ್ನಬೇಕು ! ಆ ದೋಷಕ್ಕೆ ನೀವು ಜೇರೆ ಪಾತ್ರರಲ್ಲವಷ್ಟೆ ? ''

'' ಏನು ಮಾತಾಡುವಿ ರೋಶನಾರ್ ! ಈ ನಮ್ಮ ಮುಸಲ್ಮಾನೀ ಸಾಮ್ರಾಜ್ಯವು ಚಿರಕಾಲವಾಗಿ ನಡೆದು ಮಹಮುದ್ ಪಯಿಗಂಬರವರ ಮತವು ಆಸೇತುಹಿಮಾಚಲದ ವರೆಗೆ ವ್ಯಾಪಿಸಿಕೊಂಡಿರಬೇಕೆಂಬದು ನಮ್ಮ ಹಿರಿಯರ ಅಭೀಷ್ಟೆಯು. ಹೀಗಿರಲು ನನ್ನ ಮಗನೇ ನನ್ನ ರಾಜ್ಯವನ್ನು ಮುರಿದುಬಿಡುವನೆಂಬ ಭವಿಷ್ಯವನ್ನು ನೀನು ಸ್ವಸ್ಥಚಿತ್ತಳಾಗಿ ನನ್ನ ಮುಂದೆ ಹೇಳುವಿಯಲ್ಲವೆ ? ''

'' ಅವಕ್ಕಿನ್ನೇನು ಮಾಡಬೇಕು ? ಹಿರಿಯ ಮಗನನ್ನು ಬಿಟ್ಟು ಚಿಕ್ಕವನೊಬ್ಬನಿಗೆ ನೀವು ನಿಮ್ಮ ರಾಜ್ಯವನ್ನು ಕೊಡಬೇಕಾಗಿಲ್ಲವಷ್ಟೆ ? ''

'' ದಾರಾನ ಕಾಲಕ್ಕೆ ನಮ್ಮ ರಾಜ್ಯವು ನಿಶ್ಚಯವಾಗಿ ಮುರಿದು ಹೋಗುವದೇ ಆದರೆ ಮತ್ತೊಬ್ಬನಿಗೆ ನಾವು ಪಟ್ಟಗಟ್ಟಬೇಕಾಗುವದಲ್ಲವೇ? ''

'' ನಾನೇನು ಹೇಳಲಿ ? ನನಗೆ ದಾರಾಶಹನೂ ಅಷ್ಟೇ, ಮತ್ತೊಬ್ಬನೂ ಅಷ್ಟೇ. ಎಲ್ಲರೂ ನನ್ನ ಒಡಹುಟ್ಟಿದವರೇ. ಆದರೂ ನಿಮ್ಮ ನಾಲ್ಕು ಜನ ಮಕ್ಕಳಲ್ಲಿ ಔರಂಗಜೇಬನೇ ಸಾರ್ವಭೌಮನಾಗಲಿಕ್ಕೆ ಯೋಗ್ಯನೆಂದು ನನಗೆ ಕಾಣುತ್ತದೆ. ''

" ಹಿರಿಯುವನನ್ನು ಬಿಟ್ಟು ಚಿಕ್ಕವನಿಗೆ ಸಿಂಹಾಸನವನ್ನು ಕೊಡುವದು ಹೇಗೆ ? " ಎಂದು ಬಾದಶಹನು ಒಳ್ಳೇ ದುಃಖಿತನಾಗಿ ಕೇಳಿದನು.

" ತಾತರೆ, ಹಿರಿಯನಿಗೆ ಪಟ್ಟಗಟ್ಟಬೇಕೆಂಬದು ಹಿಂದೂಜನರ ರೂಢಿಯು. ಆ ರೂಢಿಯು ನಮ್ಮ ಮುಸಲ್ಮಾನರಲ್ಲಿ ಇರುವದಾಗಿ ತೋರು ವದಿಲ್ಲ. ನಮ್ಮ ಶಾಸ್ತ್ರದ ನಿರ್ಬಂಧವು ಹಾಗಿದ್ದದ್ದಾದರೆ ಕರ್ಬಲ್ಲಾದ ರಣ ಭೂಮಿಯೆಲ್ಲ ಮಹಾ ಸತ್ವಶಾಲಿಗಳ ರಕ್ತದಿಂದ ತೋಯಿದು ಕೆಸರಾಗು ತ್ತಿದ್ದಿಲ್ಲ. ನಮ್ಮ ಮುತ್ತಾತರಾದ ಸಲೀಮ ಸುಲ್ತಾನರು ಅಕಬರ ಬಾದ ಶಹರ ಜ್ಯೇಷ್ಠ ಪುತ್ರರೇ ಅಲ್ಲವೆ ? ಅವರಿಗೆ ರಾಜ್ಯವಾಗಬಾರದೆಂದು ಬಹು ಜನರ ಅಭಿಪ್ರಾಯವಾಗಿತ್ತು. ಅಕಬರ ಬಾದಶಹರೇ ತಮ್ಮ ಅಂತ್ಯ ಕಾಲದಲ್ಲಿ ಮಂತ್ರಿಗಳನ್ನು ಕರಿಸಿ ಸಲೀಮ ಸುಲ್ತಾನರಿಗೆಯೇ ತಮ್ಮ ರಾಜ್ಯ ವಾಗಬೇಕೆಂದು ಹೇಳಿಕೊಂಡರು. ಅಂದಲ್ಲಿಯೇ ಸಲೀಮ ಸುಲ್ತಾನರು ಜಹಾಂಗೀರ ಬಾದಶಹರಾದರು. ಅಕಬರ ಬಾದಶಹರು ಪ್ರಜರ ವಚನವನ್ನು ತೆಗೆದುಕೊಳ್ಳದೆ ಪ್ರಾಣ ಬಿಟ್ಟದ್ದಾಗಿದ್ದರೆ ಸಲೀಮರ ಜ್ಯೇಷ್ಠಪುತ್ರತ್ವವು ಹಾಗೇ ಉಳಿದು ಹೋಗುತ್ತಿತ್ತು. "

" ರೋಶನ್ ಈ ಮಾತು ಸಾಕಾಯಿತು. ಇಂದು ನನಗೆ ತಲೆಬೇನೆ ಹೆಚ್ಚಾಗಿದೆ. ನಾಳಿಗೆ ನಾವು ಆಗ್ರಾಪಟ್ಟಣಕ್ಕೆ ಹೋಗತಕ್ಕವರೆಂದು ಶಿಬಂದೀ ಜನರಿಗೆ ಆಜ್ಞೆ ಮುಟ್ಟುವಂತೆ ಮಾಡು " ಎಂದು ಹೇಳಿ ಶಹಾ ಜಹಾನನು ಮುಸುಕಿಟ್ಟು ಮಲಗಿಕೊಂಡನು.

## ೫

## ಮುತ್ತಾತ ಮೊಮ್ಮಕ್ಕಳು

ಶಹಾಜಹಾನ್ ಬಾದಶಹನ ವಿಶ್ರಾಮಮಂದಿರವೆಂದರೆ ಇಂದ್ರ ಭವನವೇ ಅಲ್ಲವೆ ? ಅತಿಮನೋಹರವಾಗಿ ಕಟ್ಟಿದ ವಿಸ್ತಾರವಾದ ಉಪ್ಪರಿಗೆ ಯದು ! ಆ ಮೇಲ್ಮನೆಯ ಎತ್ತರವಾದ ಮೇಲ್ಕಟ್ಟನ್ನು ಚಮತ್ಕಾರವಾದ ಹುಳುವುಗಳುಳ್ಳ ಬಂಗಾರದ ತಗಡಿನಿಂದ ಸಂಪೂರ್ಣವಾಗಿ ಹೊದಿಸಿದ್ದರಿಂದ

ಮನೆಯೆಲ್ಲ ಆ ಚಿನ್ನದ ಹೊಳಪಿನಿಂದ ಕಂಗೊಳಿಸುತ್ತಿತ್ತು. ಆ ಮೇಲ್ಕಟ್ಟಿನ ನಾಲ್ಕೂ ಬದಿಗಳಿಗೂ ಗೋಡೆಗಳ ಗುಂಟ ಮುತ್ತಿನ ತೊಂಡಿಲಗಳನ್ನು ಬಹು ಚಿತ್ರಮಯವಾಗಿ ತೋರುವಂತೆ ಕಟ್ಟಿದ್ದರು. ಅರಿಸಿನ ಬಣ್ಣದ ರೇಸಿಮೆಯ ತೆರೆಗಳಿಂದ ನಾಲ್ಕೂ ಗೋಡೆಗಳನ್ನು ಆಚ್ಛಾದಿಸಿದ್ದರು. ಕಲಾನಿಪುಣರು ಆ ತೆರೆಗಳ ಮೇಲೆ ಪುಷ್ಪಸಂಭೃತವಾದ ಲತೆಗಳನ್ನೂ, ಫಲಗಳಿಂದ ಬಾಗಿದ ತರುಗಳನ್ನೂ, ಆನಂದದಿಂದ ಹಾರಾಡುವ ಮನೋಹರವಾದ ಪಕ್ಷಿ ಸಮು-ದಾಯವನ್ನೂ, ಬೆದರಿದೆರಳೆಗಳನ್ನೂ, ಆಟ್ಟಿಬರುವ ವ್ಯಾಘ್ರನನ್ನೂ, ಕಾದಾಡುವ ಕಾಡಾನೆಗಳನ್ನೂ ತದ್ರೂಪವಾಗಿ ಕಸೀದೆಯಲ್ಲಿ ತೆಗೆದಿದ್ದರು. ಬಹು ಪರಿಯಾಗಿ ಅಲಂಕರಿಸಲ್ಪಟ್ಟ ಅನೇಕವಾದ ಸುಖಾಸನಗಳೂ, ಮಂಚಕಗಳೂ ಅಲ್ಲಲ್ಲಿ ರಂಜಿಸುತ್ತಿದ್ದವು. ಈ ಮಂದಿರದ ಸುತ್ತಲೂ ಹೊರಮಗ್ಗಲಿಗಿದ್ದ ಕಟಾಂಜನದಲ್ಲಿ ಹೂವಿನ ಗಿಡಗಳುಳ್ಳ ಅನೇಕವಾದ ರಂಜಣಿಗೆಗಳನ್ನು ಇಟ್ಟಿರುವದರಿಂದ ಸುಗಂಧಮಿಶ್ರಿತವಾದ ಗಾಳಿಯು ಬಾದಶಹನ ಇಚ್ಛಾನುಸಾರವಾಗಿ ಮೆಲ್ಲನೆ ವಾತಾಯನಗಳೊಳಗಿಂದ ಹಾಯ್ದು ಬರುತ್ತಿತ್ತು.

ಹೀಗೆ ಸುರಮ್ಯವಾಗಿರುವ ಆ ವಿಶ್ರಾಂತಿ ಮಂದಿರದ ಮೇಲ್ಭಾಗದಲ್ಲಿ ಇರಿಸಿದ ರತ್ನಖಚಿತವಾದ ಮಂಚದ ಮೇಲೆ ವೃದ್ಧನಾದ ಶಹಾಜಹಾನನು ಬೇನೆಯಿಂದಲೂ ಮನಸ್ತಾಪಗಳಿಂದಲೂ ಹಿಂಡಿ ಹಿಪ್ಪೆಯಾದಂತವನಾಗಿ ದಿಂಬಕ್ಕೆ ಆತುಕೊಂಡು ಕುಳಿತಿದ್ದನು. ಹೇಳಲಿಕ್ಕೆ ಬಾರದಂಥ ಬೇನೆಯಿಂದ ಅವನ ಅವಯವಗಳ ಸಂದುಸಂದುಗಳೆಲ್ಲ ಹಿಡಿದಿದ್ದವು. ಬಳಿಯಲ್ಲಿಯೇ ಇಟ್ಟಿರುವ ತಬಕದಲ್ಲಿ ತುಂಬಿರುವ ಉತ್ತಮೋತ್ತಮವಾದ ಪುಷ್ಪಗಳಲ್ಲಿ ಒಂದನ್ನು ಎತ್ತಿಕೊಂಡು ಮೂಸಿ ನೋಡುವೆನೆಂದರೂ ಅವನಿಗೆ ಸ್ವಾತಂತ್ರ್ಯವಿದ್ದಿಲ್ಲ. ವ್ಯಾಧಿ ವೃದ್ಧಾಪ್ಯಗಳು ಅವನ ಬಲವನ್ನೆಲ್ಲ ಮುರಿದುಬಿಟ್ಟಿದ್ದರಿಂದ ಅವನಿಗೆ ಯಾವ ವಸ್ತುವಿನಲ್ಲಿಯೂ ಅಪೇಕ್ಷೆ ಇರಲಿಲ್ಲ. "ಭ್ರಾತೃಘಾತದಂಥ ಪಾತಕವನ್ನು ಮಾಡಿ ನಾನು ಈ ಸಾಮ್ರಾಜ್ಯದ ಆಧಿಪತ್ಯವನ್ನು ಹೊಂದಿದೆನಲ್ಲವೆ? ಇದರಿಂದ ನನಗೇನು ಸುಖವಾಯಿತು? ವಿಷಯಸುಖನಿರತನಾದ ನನಗೆ ಸಾಮ್ರಾಜ್ಯವೇ ಯಾಕೆ ಬೇಕಾಗಿತ್ತು? ಸಾಮಾನ್ಯರಾದ ಸರದಾರರಲ್ಲಿ ಅನೇಕರು ನನಗಿಂತಲೂ ಅಧಿಕವಾದ ವಿಷಯಸುಖಗಳನ್ನು ಯಥೇಚ್ಛವಾಗಿ ಸೇವಿಸುತ್ತಿರುವರು. ಸ್ವಸುಖ ನಿರಭಿಲಾಷನಾದ

ಮಹಾತ್ಮನೇ ಸಾಮ್ರಾಜ್ಯದ ಸುಖವನ್ನು ಸೇವಿಸತಕ್ಕ ಸವಿಗಾರನು. ಪ್ರಜಾಜನರ ಭಾರವನ್ನು ಹೊರಬಲ್ಲವನಾದ ಬಲ್ಲಿದನೇ ರಾಜನಾಗಲಿಕ್ಕೆ ಯೋಗ್ಯನು! ಇದೆಲ್ಲ ನನಗೆ ಸಾಯುವ ಕಾಲಕ್ಕೆ ತಿಳಿಯಬಂದಿತು. ನನ್ನ ಮುತ್ತಾತರಾದ ಅಕಬರ ಬಾದಶಹರಿಗೆ ತಾರುಣ್ಯದಲ್ಲಿಯೇ ಕರ್ತವ್ಯ ದೃಷ್ಟಿಯ ಜ್ಞಾನವಾದ್ದರಿಂದ ಅವರ ಕೀರ್ತಿಯು ಅಜರಾಮರವಾಗಿ ಹೋಯಿತು. ಇನ್ನೇನಿದೆ!! ನನ್ನ ತರುವಾಯದಲ್ಲಿಯಾದರೂ ಅಕಬರ ನಂಥ ಮಹಾರಾಜನು ನನ್ನ ಪೀಠವನ್ನೇರಿದರೆ ಒಳ್ಳೇದಾದೀತು. ಅಕಬರ ರಂಥವನೆಂದರೆ ನನ್ನ ದರಾಯುಸನೇ! ಆದರೆ ಧರ್ಮಾಭಿಮಾನಿಗಳಾದ ನನ್ನ ಮುಸಲ್ಮಾನೀ ಪ್ರಜಾಜನರು ಔರಂಗಜೇಬನೇ ರಾಜನಾಗಬೇಕೆನ್ನುತ್ತಾರೆ. ಇವರೀರ್ವರಲ್ಲಿ ಶ್ರೇಷ್ಠನಾವನೋ ನನಗೆ ತಿಳಿಯಲೊಲ್ಲದು!"

ಹೀಗೆ ಅಸ್ತಾಚಲದ ಮೇಲೆ ವಿಶ್ರಮಿಸಿರುವ ಪ್ರಾತಃಕಾಲದ ಚಂದ್ರ ನಂತೆ ನಿಸ್ತೇಜನೂ ಸಮಾಪ್ತಕಾಲನೂ ಆದ ಶಹಾಜಹಾನನು ತನ್ನ ಪರ್ಯಂಕದ ಮೇಲೆ ಚಿಂತಾಕುಲನಾಗಿ ಕುಳಿತಿರಲು, ಶುಕ್ರನಂತೆ ನವೋ ದಿತನೂ ತೇಜಸ್ವಿಯೂ ಆಗಿರುವ ಸುಲೇಮಾನ ಶುಕೋ ರಾಜಕುಮಾರನು ತನ್ನ ಮುತ್ತಾತನಾದ ಶಹಾಜಹಾನನ ಎದುರಿನಲ್ಲಿ ತುಸು ಅಂತರದ ಮೇಲೆ ವಿನಯದಿಂದ ನಿಂತುಕೊಂಡಿದ್ದನು. ತ್ರೈಲೋಕ್ಯಸುಂದರಿಯಾದ ನೂರ ಜಹಾನಳ ಮೊಮ್ಮಗಳ ಮಗನಾದ ಸುಲೇಮಾನನು ಅನುಪಮನಾದ ಸುಂದರನಾಗಿದ್ದನು. ಉನ್ನತಾಂಗನೂ ಅಜಾನುಬಾಹುವೂ ಬಲಯುತನೂ ಆಗಿರುವ ಆ ನವತರುಣನು ರಾಜಲಕ್ಷಣಗಳಿಂದ ಮೆರೆಯುತ್ತಿದ್ದನು. ತನ್ನ ಮುತ್ತಾತನು ವಿಚಾರಗ್ರಸ್ತನಾಗಿ ಕುಳಿತದ್ದು ಕಂಡು ಸುಲೇಮಾನನು ಸಪ್ಪಳ ಮಾಡದಲೆ ಮೆಲ್ಲನೆ ಬಂದು ನಿಂತಿರುವದರಿಂದ ಶಹಾಜಹಾನನ ದೃಷ್ಟಿಯು ಅವನ ಕಡೆಗೆ ಬೇಗನೆ ತಿರುಗಲಿಲ್ಲ.

ಬಾದಶಹನ ವಿಚಾರಸರಣಿಯು ಶಿಥಿಲವಾದ ಬಳಿಕ ಅವನು ಮೇಲಕ್ಕೆ ಕಣ್ಣೆತ್ತಿ ನೋಡಲಾಗಿ ತನ್ನ ಹೃದಯಾನಂದಕನಾದ ಮೊಮ್ಮಗನನ್ನು ಕಂಡನು. ವಿನೀತನಾಗಿ ನಿಂತಿರುವ ಸುಲೇಮಾನನ್ನು ಕಂಡು ಬಾದಶಹನು ಹಿಗ್ಗಿ "ಏನು ಹಜರತ್, ದಿಲ್ಲಿಯ ಬಾದಶಹರಾಗತಕ್ಕವರಾದ ನೀವು

ಸಾಮಾನ್ಯ ಜನರಂತೆ ಹಾಗೇಕೆ ನಿಂತಿರಿ ?'' ಎಂದು ವಿನೋದದಿಂದ ನುಡಿದು ತನ್ನ ಬಾಡಿದ ಮುಖದಲ್ಲಿ ನಗೆದೋರಿದನು.

'' ತಾತರು ನನಗೆ ಬರಲಾಜ್ಞಾಪಿಸಿದ ಮೇರೆಗೆ ನಾನಾಗಲೇ ಬಂದೆನು. ತಾವು ವಿಚಾರದಲ್ಲಿರುವದನ್ನು ಕಂಡು ನಾನು ಸುಮ್ಮನೆ ನಿಂತುಕೊಂಡಿದ್ದೆನು.'' ಎಂದು ಸುಲೇಮಾನನು ತನ್ನ ಮುತ್ತಾತನ ಮಂಚಕ್ಕೆ ಪ್ರಣಾಮ ಮಾಡಿ ಆತನು ತೋರಿಸಿದ ಆಸನದ ಮೇಲೆ ಕುಳಿತುಕೊಂಡನು.

'' ಶಾಬಾಸ್ ! ವತ್ಸಾ, ನೀನೊಳ್ಳೇ ವಿನಯಶೀಲನು. ನಮ್ಮ ಆಜ್ಞೆಯನ್ನು ನೀನು ನಿಯಮದಿಂದ ಪರಿಪಾಲಿಸುತ್ತಿರುವದನ್ನು ಕಂಡು ನನಗೆ ಬಹಳೇ ಸಂತೋಷವಾಯಿತು.''

'' ಈ ದಿವಸ ಮುತ್ತಾತರ ಜೀವಕ್ಕೆ ಸಮಾಧಾನವಿರುವದಷ್ಟೆ? ತಮಗೆ ತುಸು ಆರಾಮವಾಗಿರುವದೆಂದು ಫಿರಂಗೀ ಹಕೀಮನು ಹೇಳಿದನು.''

'' ಮಗುವೆ, ವೃದ್ಧನಾದ ನನ್ನನ್ನು ದುರ್ಧರವಾದ ವ್ಯಾಧಿಯು ಆಕ್ರಮಿಸಿಕೊಂಡಿರಲು ನನಗೆ ಯಾರ ಔಷಧದಿಂದ ಏನಾಗಬೇಕಾಗಿದೆ ? ನನ್ನ ಸಾಮ್ರಾಜ್ಯವನ್ನೂ ಈ ಮುಕುಟವನ್ನೂ ಯಾರಾದರೂ ತೆಗೆದುಕೊಂಡು ಅದಕ್ಕೆ ಬದಲಾಗಿ ಮನಃಸ್ವಾಸ್ಥ್ಯವನ್ನು ಕೊಟ್ಟರೆ ನನಗೊಳ್ಳೇ ಲಾಭವಾಯಿತೆಂದು ತಿಳುಕೊಳ್ಳುವೆನು. ನಾನು ಜೀವಂತನಿರುವಾಗಲೇ ಮನಸ್ತಾಪಕರವಾದ ಈ ಮುಕುಟವು ತನಗೆ ತನಗೆಂದು ನಿನ್ನ ತಂದೆ ಕಕ್ಕಂದಿರು ವಾಜ್ಯ ನಡಿಸಿರುವದನ್ನು ಕಂಡು ನನ್ನ ಮನಸ್ಸಿಗೆ ಹೆಚ್ಚಿನ ಅಸಮಾಧಾನವಾಗಿದೆ.'' ಎಂದು ಆ ದಿಲ್ಲೀಶ್ವರನು ಉಸುರ್ಗರೆದು ನುಡಿದನು.

'' ನನ್ನ ತಂದೆಯುವರಿಂದೇನು, ಮತ್ತಾರಿಂದಲೇನು ತಮಗೆ ಅಸಮಾಧಾನವುಂಟಾದದ್ದು ಕಂಡು ನನಗೆ ಅತಿಶಯವಾದ ವಿಷಾದವಾಯಿತು. ಯಾವಾಗಲೂ ತಮಗೆ ಸಂತೋಷವಾಗುವ ಕೆಲಸವೇ ತಮ್ಮ ಚಿರಂಜೀವರಾದ ನನ್ನ ಮಾತಾ-ಪಿತೃವ್ಯರ ಕರ್ತವ್ಯವಾಗಿರುವದು. ಆದರೆ, ಸುಲ್ತಾನ ದರಾಯುಸರಿಂದ ವಿಪರೀತವಾದ ಆಚರಣವು ಸಂಭವಿಸಿರಲಿಕ್ಕಿಲ್ಲವೆಂದು ನಾನು ನಂಬಿದ್ದೇನೆ. ಮುತ್ತಾತರ ಪಶ್ಚಾತ್ ನನ್ನ ತಂದೆಯುವರೇ ಈ

ಸಿಂಹಾಸನಕ್ಕೆ ಅಧಿಕಾರಿಗಳಾಗಿರಲು ಅದರ ಪ್ರಾಪ್ತಿಗಾಗಿ ಅವರು ಅನುಚಿತ ವಾದ ಕೆಲಸವನ್ನು ಮಾಡುವದಕ್ಕೆ ಕಾರಣವೇ ಇಲ್ಲ."

"ಸುಲ್ತಾನ ಸುಲೇಮಾನ ಶುಕೋ, ನೀನೀಗ ಅಬುಲ್ ಫಾಜಲ ನಂತೆ ಬಹು ವಿಶದವಾಗಿ ಮಾತಾಡಿದಿ. ಆದರೆ ನನ್ನ ಪ್ರಿಯಪುತ್ರನಾದ ದರಾಯುಸನ ವಿರುದ್ಧವಾಗಿ ಅನೇಕರು ಅನೇಕವಾದ ಆರೋಪಗಳನ್ನು ಮಾಡುತ್ತಿರುವರು. ರೋಶನಾರೆಯು ಹೇಳುವದೊಂದು, ಔರಂಗಜೇಬನು ಮತ್ತೊಂದು. ಪ್ರತ್ಯಕ್ಷ ನಿನ್ನ ತಂದೆಯು ಸೋದರಮಾವನಾದ ಶಾ ಇಸ್ತೇ ಖಾನರು ಹೇಳುವದು ಬೇರೊಂದು. ಹೀಗೆ ಅನೇಕರು ಅನೇಕಪರಿಯಾಗಿ ಕಿಟಕಿಟ ಹಚ್ಚಿರುವರು. ಅವರು ಮಾಡುತ್ತಿರುವ ಆರೋಪಗಳೆಲ್ಲ ನಿರರ್ಥಕವಾದವುಗಳೆಂಬದನ್ನು ನಾನು ಬಲ್ಲೆನು. ನನ್ನ ದಾರಾಶಹನಂಥ ಸಜ್ಜನನೇ ಇಲ್ಲ. ಆದರೆ ಅವನು ಮಾಡುತ್ತಿರುವದೊಂದು ಕೆಲಸವು ಮಾತ್ರ ನನಗೆ ಸರಿಬರುವದಿಲ್ಲ."

"ದೇವತಾ ಸಮಾನರಾದ ನನ್ನ ಮುತ್ತಾತರೆ, ಅಂಥದಾವ ಕೆಲಸ ವನ್ನು ನನ್ನ ತಂದೆಯುವರು ಮಾಡುತ್ತಿರುವರು?" ಎಂದು ಚಕಿತನಾಗಿ ಸುಲೇಮಾನನು ಕೇಳಿದನು.

"ಸುಲೇಮಾನ್, ಹೇಳಲು ಸಂಕೋಚಗೊಳ್ಳುತ್ತೇನೆ. ಆ ವರ್ತ ಮಾನವನ್ನು ಕೇಳಿದರೆ ನಿನ್ನ ಮೈಗೆ ಕೂಡ ಮುಳ್ಳು ಬರುವದು!"

ಸುಲೇಮಾನನು ಆವೇಶದಿಂದೆದ್ದು ನಿಂತು ತನ್ನ ಜಾಜ್ವಲವಾದ ಖಡ್ಗ ವನ್ನು ಹಿಡಿದು,—"ತಾತರೆ, ಯಾರು ಇಂಥ ಆರೋಪವನ್ನು ಮಹಾನು ಭಾವರಾದ ನನ್ನ ತಂದೆಯುವರ ಮೇಲೆ ಮಾಡಿರುವರು ಹೇಳಿರಿ? ಅವರ ನಾಲಿಗೆಯನ್ನೇ ಸೀಳಿಬಿಡುವೆನು. ಅವರು ಜಯಸಿಂಗ, ಜಸವಂತಸಿಂಗರೇ ಆಗಲಿ, ಔರಂಗಜೇಬ, ಸುಜಾ ಸಾಹೇಬರಾಗಿರಲಿ, ಇನ್ನು ಮುತ್ತಾ ರಾಗಿದ್ದರೂ ಚಿಂತೆಯಿಲ್ಲ!!" ಎಂದು ಗರ್ಜಿಸಿ ನುಡಿದನು.

"ಸುಲೇಮಾನ್, ಪಿತೃಭಕ್ತನಾದ ನಿನಗೆ ಕೋಪ ಬಂದದ್ದು ಆಶ್ಚರ್ಯವಲ್ಲ. ಆದರೂ ನಾನು ಹೇಳುವದನ್ನು ನೀನು ಸಮಾಧಾನ ಚಿತ್ತನಾಗಿ ಕೇಳುವಿಯೆಂದು ಆಶಿಸುತ್ತೇನೆ."

"ಪಿತಾಮಹರೆ, ತಮ್ಮ ಇಚ್ಛೆಯೆಂದರೆ ನನಗೆ ಅನುಲ್ಲಂಘನೀಯ ವಾದ ಆಜ್ಞೆಯೇ. ಆದರೆ ಮುಂದೆ ತಮ್ಮ ಸಿಂಹಾಸನವನ್ನೇ ಏರತಕ್ಕವ ರಾದ ಸುಲ್ತಾನ ದಾರಾಶಹರಂಥ ಸುಚರಿತರ ಮೇಲೆ ದುರಾತ್ಮರು ತಮ್ಮ ಸ್ವಹಿತವನ್ನು ಸಾಧಿಸುವದಕ್ಕಾಗಿ ವೃಥಾರೋಪಗಳನ್ನು ಮಾಡಿ ಬಾದಶಹರ ಮನಸ್ಸನ್ನು ಕಲುಷಿತವಾಗಿ ಮಾಡಲು ಯತ್ನ ಮಾಡುತ್ತಿರುವದನ್ನು ಕಂಡು ನನಗೆ ವಿಷಾದವಾಯಿತು. ವಿಷಾದದ ಭರಕ್ಕಾಗಿ ನಾನು ಬಾದಶಹರ ಸನ್ನಿಧಾನದಲ್ಲಿ ನಿಂತು ಖಡ್ಗವನ್ನು ಹಿರಿಯಬಾರದಾಗಿತ್ತು. ತಾತರು ಈ ಬಾಲಕನನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇನೆ." ಎಂದು ಸುಲೇಮಾನನು ನಮ್ರನಾಗಿ ಪ್ರಣಾಮ ಮಾಡಿದನು.

ಈ ಮಾತು ಕೇಳಿ ಬಾದಶಹನಿಗೆ ಪರಮ ಸಂತೋಷವಾಯಿತು. ದ್ರುವರಹಿತವಾದ ಅವನ ಕಣ್ಣುಗಳು ಆನಂದಾಶ್ರುಗಳಿಂದ ತುಸು ಆರ್ದ್ರ ವಾದವು. "ಮಗುವೆ, ನಿನ್ನ ಅನುನಯವನ್ನು ಕಂಡು ನನಗೆ ಹಿಡಿಸಲಾರ ದಷ್ಟು ಆನಂದವಾಗಿದೆ. ಹೀಗೆ ಬಂದು ನನಗೆ ನಿನ್ನ ಬೆನ್ನುಮೇಲೆ ಕೈ ಆಡಿಸ ಗೊಡು!" ಎಂದು ಪ್ರೇಮಪೂರಿತವಾದ ಅಂತಃಕರಣದಿಂದ ಆ ಮುತ್ತಾತನು ಹೇಳಿದನು.

ಸುಲೇಮಾನನು ನಮ್ರತೆಯಿಂದ ಶಹಾಜಹಾನನ ಸಮೀಪಕ್ಕೆ ಬಂದು ತಲೆ ಬಾಗಿಸಿಕೊಂಡು ನಿಂತನು. ಶಹಾಜಹಾನನು ಅಕ್ಕರತೆಯಿಂದ ಸುಲೇಮಾನನ ಬೆನ್ನುಮೇಲೆ ಕೈಯ್ಯಾಡಿಸಿ ಕೃತಾರ್ಥನಾದನು.

"ಹಜರತ್, ನನ್ನ ತಂದೆಯವರು ಏನು ಮಾಡಿದರೆಂಬ ವಾರ್ತೆ ತಮ್ಮ ಕಿವಿಗೆ ಬಿದ್ದದೆ? ದಯಮಾಡಿ ಹೇಳಬೇಕು." ಎಂದು ಸುಲೇಮಾನನು ಪ್ರಾರ್ಥಿಸಿದನು.

"ದರಾಯುಸನು ಕಾಫರರಾದ ಹಿಂದೂ ಪಂಡಿತರೊಡನೆ ಧರ್ಮದ ಸಂಬಂಧವಾಗಿ ಚರ್ಚೆ ನಡೆಸುತ್ತಿರುವನಂತೆ! ಅಹುದೇನು?"

"ಅಹುದು. ಆದರೇನಾಯಿತು?"

"ಏನಾಯಿತೆಂದರೆ! ಮುಸಲ್ಮಾನೀ ಸಾಮ್ರಾಜ್ಯದ ಅಧಿಪತಿಯಾಗ ತಕ್ಕವನಾದ ನಿನ್ನ ತಂದೆಯು ಕಾಫರರ ಅಭಿಪ್ರಾಯಕ್ಕೆ ಒಳಗಾದರೆ ಅದು ಕೆಡಕಲ್ಲವೆ?"

"ಹುಜೂರ್, ಕಾಫರರೊಡನೆ ಪ್ರಸಂಗಮಾಡಿ ಅವರ ಧರ್ಮದ ತತ್ವಗಳನ್ನು ಚನ್ನಾಗಿ ಅರಿತುಕೊಂಡು ಅವುಗಳನ್ನು ಖಂಡಿಸಲು ಪ್ರಯತ್ನ ಮಾಡುವದು ಕೆಡಕೆ? ಹಿಂದೂ ಜನರ ಧರ್ಮವು ಏನಿರುವದೆಂಬದನ್ನು ಅರಿಯದೆ ಅದು ಕೆಟ್ಟದ್ದೆಂದು ಹೇಳುವ ವೃಥಾಭಿಮಾನಿಗಳಿಗಿಂತಲೂ, ಅದನ್ನು ಅರಿತು ಅದರ ಹೀನತೆಯನ್ನು ಬೈಲಿಗೆ ತರಲು ಯತ್ನ ಮಾಡು ವವರ ಉದ್ಯೋಗವು ಸ್ತುತ್ಯವಾದದ್ದಲ್ಲವೆ?"

ಈ ಮಾತಿಗೆ ಬಾದಶಹನು ಸಂತೋಷದಿಂದ ನಕ್ಕು—"ವಿದ್ವಾಂಸನ ಮಗನು ನೀನು! ಈ ಸಮಯದಲ್ಲಿ ನನ್ನ ಬಾಯಿ ಕಟ್ಟಿದಿ ಸರಿ. ಆದರೆ ದರಾಯುಸನು ಹಿಂದೂ ಜನರ ಮತಕ್ಕೆ ಒಳಗಾಗುವದು ಕೆಟ್ಟದ್ದೇ ಸರಿ." ಎಂದು ನುಡಿದು ಸುಲೇಮಾನನ ಮುಖವನ್ನು ನೋಡಿದನು.

"ನನ್ನ ತಂದೆಯವರು ಅನ್ಯಮತಕ್ಕೆ ಒಳಗಾಗುವರೆಂಬದು ಅಸಂಭವ ವಾದ ಮಾತು. ಅನ್ಯಮತಗಳಲ್ಲಿ ಅವರಿಗೆ ವಿಶ್ವಾಸವಿದ್ದದ್ದೇ ಆಗಿದ್ದರೆ ಅವರು ತಮ್ಮ ಪ್ರೀತಿಯ ಮಗನಾದ ನನ್ನನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ಕುರಾಣದ ತತ್ವಗಳನ್ನು ಬೋಧಿಸಿ ಇಸ್ಲಾಮೀ ಧರ್ಮವೇ ಸತ್ಯವಾದ ದ್ದೆಂದು ಯಾಕೆ ಹೇಳುವರು?"

"ಸುಲೇಮಾನ್, ನೀನು ಮನಗಂಡ ಮಾತು ಹೇಳುತ್ತಿರುವಿಯಷ್ಟೆ?" ಎಂದು ದರಾಯುಸನ ತಂದೆಯು ಔತ್ಸುಕ್ಯದಿಂದ ಕೇಳಿದನು.

ಸುಲೇಮಾನನೆದ್ದು ನಿಂತು—"ತಾತರೆ, ಈ ಸುಲೇಮಾನನು ತಮ್ಮ ಪಾದಗಳ ಮುಂದೆ ಎಂದಾದರೂ ಮೋಸದ ಮಾತುಗಳನ್ನು ಹೇಳಿದ್ದು ತಮ್ಮ ಅನುಭವಕ್ಕೆ ಬಂದಿರುವದೆ?" ಎಂದು ನುಡಿದು ವಿನಯದಿಂದ ಪ್ರಣಾಮ ಮಾಡಿದನು.

"ವತ್ಸಾ, ಈಗ ನನ್ನ ಚಿಂತೆಯು ಪರಿಹಾರವಾಯಿತು. ನಾನು ಧನ್ಯ ನಾದೆನು! ನನ್ನ ಪ್ರೀತಿಯ ಮಗನಾದ ದಾರಾಶಹನೇ ನನ್ನ ಪಶ್ಚಾತ್ ನಮ್ಮ ಸಾಮ್ರಾಜ್ಯಕ್ಕೆ ಅಧಿಪತಿಯಾಗತಕ್ಕವನೆಂದು ನಾನಿನ್ನು ಶಾಸನ ವನ್ನು ಮಾಡುವೆನು." ಎಂದು ಬಾದಶಹನು ತನ್ನ ವ್ಯಾಧಿಯ ಪೀಡೆಯ ನ್ನೆಲ್ಲ ಮರೆತು ಉತ್ಸಾಹದಿಂದ ಹೇಳಿದನು.

"ನಮ್ಮ ತಂದೆಯವರಿಗೆ ಪಟ್ಟವಾಗಬಾರದೆಂದು ಈ ಮೊದಲು ಬಾದಶಹರ ಅಭಿಪ್ರಾಯವಾಗಿತ್ತೇನು ?"

"ಹಾಗೇನಲ್ಲ ! ನಿಮ್ಮ ತಂದೆಯು ಪರಧರ್ಮಾನುಯಾಯಿಯಾಗಿದ್ದರೆ ಇಂಥ ರಾಜನಿಗೆ ಸದ್ಧರ್ಮಾನುಯಾಯಿಗಳಾದ ಮಹಮದೀಯರು ಅಂಕಿತ ರಾಗಿರಲಿಕ್ಕಿಲ್ಲವೆಂತಲೂ, ಹಾಗಾದಮೇಲೆ ನಮ್ಮ ರಾಜ್ಯಕ್ಕೆ ಹಾನಿ ತಟ್ಟುವ ದೆಂತಲೂ ಚಿಂತಿಸಿ ನಿನ್ನನ್ನೇ ಭಾವೀ ಚಕ್ರವರ್ತಿಯನ್ನಾಗಿ ಮಾಡಬೇಕೆಂದು ನಾನು ಯೋಚಿಸುತ್ತಿದ್ದೆನು."

"ಹೀಗೆ ವ್ಯುತ್ಕ್ರಮವಾಗಿ ಬಂದ ಸಿಂಹಾಸನವನ್ನು ನಾನೆಂದಿಗೂ ಮೆಟ್ಟುತ್ತಿದ್ದಿಲ್ಲ!!" ಎಂದು ಸುಲೇಮಾನನು ಖಂಡಿತವಾಗಿ ನುಡಿದನು.

"ಆ ಮಾತು ಇನ್ನೇಕೆ ? ನಿನ್ನ ತಂದೆಗೆ ಮೊದಲು ರಾಜ್ಯವಾಗಲಿ ! ಪಶ್ಚಾತ್ತಾದರೂ ನೀನು ರಾಜನಾಗುವಿಯಷ್ಟೆ ?"

## ೬

## ಮನೋವೇಧಕವಾದ ಪುತ್ಥಳಿಯು

ವಜೀರ ಸಾದುಲ್ಲಾಖಾನನು ಅರವತ್ತು ಅರವತ್ತೆರಡು ವರುಷದವ ನಾದ ವೃದ್ಧನು. ಆದರೂ ತೇಜಃಪುಂಜನಾದ ಆ ಗೌರವರ್ಣದ ಅಮೀರನ ಮುಖದಲ್ಲಿ ಪಾಂಡಿತ್ಯದ ಲಕ್ಷಣವೂ, ಬುದ್ಧಿಮತ್ತೆಯ ವರ್ಚಸ್ಸವೂ ಅಧಿಕ ವಾಗಿ ತೋರುತ್ತಿದ್ದವು. ಚತುರನೂ, ಕಾರ್ಯಕ್ಷಮನೂ, ಸಮೀಕ್ಷ್ಯ- ಕಾರಿಯೂ ಆಗಿರುವ ಸಾದುಲ್ಲಾಖಾನನು ಬ್ರಹ್ಮಬೀಜದವನು "ಯಥಾ- ರಾಜಾ ತಥಾ ಪ್ರಜಾ" ಎಂಬಂತೆ ರಾಜರ ಜಾತಿಯವರ ಆಚಾರ-ವಿಚಾರ- ಗಳೂ, ಅವರ ಉಡುಗೆ-ತೊಡಿಗೆಗಳೂ ಪ್ರಜರಿಗಾದರೂ ಬೇಕಾದ್ದವೇ ಆಗುವದುಂಟು. ಬ್ರಾಹ್ಮಣನಾದ ಸಾದುಲ್ಲಾಖಾನನು ರಾಜರ ವೇಷ- ಭಾಷೆಗಳನ್ನು ಅಂಗೀಕರಿಸಿ ಯವನಸುಂದರಿಯೋರ್ವಳ ಮೋಹಪಾಶದಲ್ಲಿ ಸಿಕ್ಕಿದವನಾಗಿ ಅವಳನ್ನು ಮದುವೆಯಾಗಿ ಮುಸಲ್ಮಾನನಾದನು. ಆಗಿನ ಕಾಲಕ್ಕೆ ಯಃಕಶ್ಚಿತ್ತನಾದ ಹಿಂದುವು ಮುಸಲ್ಮಾನನಾದರೆ ಅವನು ರಾಜಾಶ್ರಯಕ್ಕೆ ಪಾತ್ರನಾಗುತ್ತಿದ್ದನಂತೆ! ಚತುರನೂ, ಪಂಡಿತನೂ,

ಮೇಲಾಗಿ ಬ್ರಾಹ್ಮಣನೂ ಆದ ಸಾದುಲ್ಲಾಖಾನನು ಮುಸಲ್ಮಾನನಾಗಲು, ಅವನಿಗೆ ರಾಜಾಶ್ರಯ ದೊರಕಿದ್ದು ಆಶ್ಚರ್ಯವೆ? ಶಹಾಜಹಾನ್ ಬಾದಶಹನು ಈ ವಿದ್ವದ್ರತ್ನವನ್ನು ತನ್ನ ಕೊರಳಲ್ಲಿ ಕಟ್ಟಿಕೊಂಡನು.

ಸಾದುಲ್ಲಾಖಾನನಿಗೆ ಶಹರ್‌ಜಾದೆಯೆಂಬ ಅತಿರೂಪವತಿಯಾದ ಮಗಳಿದ್ದಳು. ಅರಬೀ ಭಾಷೆಯಲ್ಲಿ ಬರೆದ ಸುರಸ ಕಥೆಗಳ ನಾಯಿಕೆಯಾದ ಶಹರ್‌ಜಾದೆಯ ಹೆಸರನ್ನು ಸಾದುಲ್ಲಾಖಾನನು ರೂಪವತಿಯೂ ಚತುರೆಯೂ ಆದ ತನ್ನ ಮಗಳಿಗೆ ಇಟ್ಟಿದ್ದನು. ಆ ಸುಂದರಿಯು ವಿದ್ವಾಂಸನಾದ ತನ್ನ ತಂದೆಯ ಬಳಿಯಲ್ಲಿ ಕಲಿತವಳಾಗಿ ಸುಸಂಸ್ಕೃತವಾದ ಆಚಾರ-ವಿಚಾರಗಳುಳ್ಳವಳೂ, ಬುದ್ಧಿವಂತೆಯೂ, ರಸಜ್ಞಳೂ, ಕಲಾನಿಪುಣೆಯೂ ಆಗಿದ್ದಳು. ಶಹಾಜಹಾನನ ದ್ವಿತೀಯ ಚಿರಂಜೀವರಾದ ಸುಲ್ತಾನ ಸುಜಾ ಸಾಹೇಬರು ಆ ನವಯೌವನೆಯ ಮೇಲೆ ಮನಸಿಟ್ಟು ಅವಳನ್ನು ತನಗೆ ಕೊಡಬೇಕೆಂದು ಆಗ್ರಹದಿಂದ ಕೇಳಾಡಹತ್ತಿದರು. ದಿಲ್ಲಿಯ ಬಾದಶಹನ ಮಗನೂ, ಕದಾಚಿತ್ ದಿಲ್ಲಿಯ ಬಾದಶಹನೇ ಆಗಬಹುದಾದವನೂ, ಆದ ಸುಜಾ ಸುಲ್ತಾನನಿಗೆ ತನ್ನ ಮಗಳನ್ನು ಕೊಟ್ಟರೂ ಕೊಡಬಹುದೆಂದು ಸಾದುಲ್ಲಾಖಾನನು ಆಲೋಚಿಸಿದ್ದನು. ಆದರೆ ಶಹಾಜಹಾನ್ ಬಾದಶಹನು ಅಸ್ವಸ್ಥನಾದದ್ದು ಕಂಡು, ಅವನ ನಾಲ್ಕೂ ಜನ ಮಕ್ಕಳು ಹಿಂದುಸ್ಥಾನದ ಚಕ್ರವರ್ತಿಯ ಮುಕುಟದ ಪ್ರಾಪ್ತಿಗಾಗಿ ಘೋರತರವಾದ ಯತ್ನವನ್ನು ಮಾಡುತ್ತಿರುವರೆಂದು ಶಂಕಿಸಿ ಅಂಥ ಪ್ರಸಂಗದಲ್ಲಿ ತಾನು ರಾಜಕುಮಾರರಲ್ಲಿ ಒಬ್ಬನ ಪಕ್ಷವನ್ನು ಸ್ವೀಕರಿಸುವದು ಸರಿಯಾದ ಮಾತಲ್ಲವೆಂದೆಣಿಸಿ, ವಜೀರನು ತನ್ನ ಮಗಳ ಲಗ್ನದ ಆಲೋಚನೆಯನ್ನು ಸದ್ಯಕ್ಕೆ ಮಾನಸಿಕ ಮಾಡಿದ್ದನು.

ಶಹರಜಾದೆಯ ವಿಷಯವಾಗಿ ಸಾದುಲ್ಲಾಖಾನ ಹಾಗೂ ಸುಜಾ ಸುಲ್ತಾನರ ಮನಸ್ಸಿನಲ್ಲಿ ಭಿನ್ನಭಿನ್ನವಾದ ಆಲೋಚನೆಗಳು ಹುಟ್ಟುತ್ತಿರುವಾಗ ಆ ತರುಣಿಯ ಮನಸ್ಸು ಮತ್ತೋರ್ವ ತೇಜಸ್ವಿಯಾದ ತರುಣನಲ್ಲಿ ಮೆಲ್ಲಮೆಲ್ಲನೆ ಆಸಕ್ತವಾಗುತ್ತ ನಡೆದಿತ್ತು. ಸುಲ್ತಾನ ಸುಲೇಮಾನ ಶುಕೋನ ಅಧ್ಯಾಪಕನಾದ ಮೌಲ್ವಿಯೇ ಶಹರಜಾದೆಯ ಗುರುವಾಗಿದ್ದನು. ಮೌಲ್ವಿಯು ಕಾಲಕಾಲಕ್ಕೆ ಸುಲೇಮಾನ ರಾಜಪುತ್ರನ

ಕುಶಾಗ್ರಬುದ್ಧಿಯ ವರ್ಣನೆಯನ್ನು ಶಹರಜಾದೆಯು ಮುಂದೆ ಮಾಡು-
ವನು. ಅವಳ ತಂದೆಯು ರಾಜಕುಮಾರನ ರಾಜಕಾರಣಪಟುತ್ವವನ್ನು
ಆಗಾಗ್ಗೆ ಹೊಗಳುವನು. ಪರಿವಾರದವರೆಲ್ಲರೂ ಸುಲೇಮಾನ ಶಹನ
ಔದಾರ್ಯವನ್ನು ಕೊಂಡಾಡುವರು. ಅವನೊಳ್ಳೇ ರೂಪವಂತನೆಂದು
ಅಂತಃಪುರದ ದಾಸಿಯರೆಲ್ಲರೂ ಬಹುಪರಿಯಾಗಿ ಬಣ್ಣಿಸುವರು.
ಇಂಥ ಮಾನಿನೀಮನೋರಾಜ್ಯದ ಚಕ್ರವರ್ತಿಯನ್ನು ಕಣ್ಣುತುಂಬಾ
ನೋಡುವೆನೆಂಬ ಮನೀಷೆಯು ಯಾವ ಕಾಮಿನಿಗೆ ಆಗಲಿಕ್ಕಿಲ್ಲ !

ಮಿಜಿಮಿಜಿಯ ಮನಸ್ಸಿನವನಾದ ಶಹಾಜಹಾನನು ತನ್ನ ಪಶ್ಚಾತ್
ದಿಲ್ಲಿಯ ಸಿಂಹಾಸನವನ್ನು ಯುವರಾಜನಾದ ದಾರಾಶಹನಿಗೆ ಖಂಡಿತ
ವಾಗಿ ಕೊಡುವೆನೆಂದು ವಜೀರ ಸಾದುಲ್ಲಾಖಾನನ ಮುಂದೆ ಆಡಿ
ತೋರಿಸಿದ್ದನು. ದೂರದರ್ಶಿಯಾದ ಆ ವಜೀರನಿಗೆ ಶಹಾಜಹಾನನ
ಮನೋಗತವು ಸರಿಯಾಗಿ ತೋರಿದ್ದರಿಂದ ಆ ಆನಂದಪ್ರದವಾದ
ಸಮಾಚಾರವನ್ನು ಯುವರಾಜನಿಗೆ ತಿಳಿಸಬೇಕೆಂದು ಸಾದುಲ್ಲಾಖಾನನು
ದಾರಾಸುಲ್ತಾನನನ್ನೂ ಅವನ ಜ್ಯೇಷ್ಠಪುತ್ರನಾದ ಸುಲೇಮಾನನನ್ನೂ
ತನ್ನ ಮನೆಗೆ ಭೋಜನಕ್ಕೆ ಕರೆದಿದ್ದನು.

ಭಾವೀ ಸಾರ್ವಭೌಮನ ಆತಿಥ್ಯಕ್ಕಾಗಿ ಮಾಡಿಸಿದ ಸಮಾರಂಭವು
ಒಳ್ಳೇ ಸಡಗರವುಳ್ಳದ್ದಾಗಿತ್ತು. ಗಂಗಾನದಿಯ ಉತ್ತಮೋತ್ತಮವಾದ
ಮೀನಗಳೂ, ಫೈಜಾಬಾದದ ಹೋರಿಗಳ ನವಮಾಂಸಗಳೂ, ಘಮ-
ಘಮಿಸುವ ಅಕ್ಕಿ-ಜೇಳಿಗಳೂ, ಸಕ್ಕರೆ ತುಪ್ಪಗಳೂ ಪಾಕಶಾಲೆಯಲ್ಲಿ
ಒಟ್ಟಿದ್ದವು. ಸೂಪಕಲಾನಿಪುಣರು ಕೇಶರ, ಕಸ್ತೂರಿ ಮಸಾಲೆಗಳನ್ನು
ವಿಪುಲವಾಗಿ ಹಾಕಿ ಪರಿಪರಿಯ ಪಕ್ವಾನ್ನಗಳನ್ನು ಸಿದ್ಧಮಾಡುತ್ತಲಿದ್ದರು.
ಮುಸಲ್ಮಾನರು ವ್ಯಂಜನಪದಾರ್ಥಗಳನ್ನು ಸಿದ್ಧಮಾಡಲು ಹೆಸರಾದವರು.
ಅನೇಕ ತೋಟಗಳಿಂದ ತಂದ ಅಪೂರ್ವವಾದ ಕಾಯಿಪಲ್ಲೆಗಳ ರಚನೆ
ಯನ್ನು ನೋಡಲಾಗಿ ಹೊಟ್ಟೆತುಂಬ ಉಂಡವನ ಬಾಯಿಯಲ್ಲಿ ಕೂಡ
ನೀರು ಬರಬಹುದಾಗಿತ್ತು. ಕಾಬೂಲದ ದ್ರಾಕ್ಷಿಗಳನ್ನೂ, ಮಸ್ಕತ್ತದ
ದಾಳಿಂಬಗಳನ್ನೂ, ಕೊಡಗದ ಕಿತ್ತಳೆಗಳನ್ನೂ, ಗೋಮಾಂತಕದ
ಮಾವಿನಹಣ್ಣುಗಳನ್ನೂ ಉಗ್ರಾಣಾಧಿಪತಿಗಳು ತರಿಸಿ ಇಡಿಸಿದ್ದರು.

ಭೋಜನಕ್ಕೆ ಇನ್ನೂ ಅವಕಾಶವಿತ್ತು. ದಾರಾಶಹನೂ ವಜೀರನೂ ಏಕಾಂತದಲ್ಲಿ ಕುಳಿತು ಆಪ್ತಾಲೋಚನಗೈಯುತ್ತಿದ್ದರು. ಈ ಅವಧಿಯಲ್ಲಿ ಸುಲೇಮಾನನು ವಜೀರರ ರಮ್ಯವಾದ ಉಪ್ಪರಿಗೆಯ ಶೋಭೆಯನ್ನು ನೋಡುತ್ತ ಮೆಲ್ಲನೆ ಅಡ್ಡಾಡುತ್ತಿದ್ದನು. ಆ ಉಪ್ಪರಿಗೆಯಲ್ಲಿ ಒಳ್ಳೇ ಚಮತ್ಕಾರವಾಗಿ ಅಲಂಕರಿಸಿದ್ದೊಂದು ಭವ್ಯವಾದ ಮಧ್ಯ ಮಂದಿರವಿತ್ತು. ನಟ್ಟನಡುವೆ, ಹೋಗಿಬರುವವರಿಗಾಗಿ ಪ್ರಶಸ್ತವಾದ ಮಾರ್ಗವನ್ನು ಇರಿಸಿ ಆ ಮಂದಿರದ ಎರಡೂ ಬದಿಗಳಲ್ಲಿ ಪ್ರದರ್ಶನಕ್ಕಾಗಿ ಸೋಜಿಗವಾದ ಅನೇಕ ವಸ್ತುಗಳನ್ನು ಬಹು ಪರಿಷ್ಕಾರವಾಗಿ ಮಂಡಿಸಿದ್ದರು. ಚಿತ್ರಗಾರರು ರಚಿಸಿದ ಕೃತ್ರಿಮವಾದ ಪತ್ರಫಲಾವಳಿಗಳೊತ್ತಟ್ಟಿಗೆ ನೇತ್ರೋತ್ಸವವಾಗಿ ತೋರುತ್ತಿದ್ದವು. ಕೈಮುಟ್ಟಿ ನೋಡದ ಹೊರತು ಇದು ಕೃತ್ರಿಮವಾದ ಮಾವಿನಹಣ್ಣೋ, ಈಗ ಗಿಡದ ಮೇಲಿಂದ ತಂದು ಇರಿಸಿದ್ದೋ ಹೇಳುವಂತೆ ಇದ್ದಿಲ್ಲ. ಒತ್ತಟ್ಟಿಗೆ ಹುಲಿ, ಕರಡಿ, ಮಂಗ, ನಾಯಿ, ಬೆಕ್ಕು, ಮೊಲ ಮುಂತಾದ ಪಶುಗಳು ಮೃಗರಾಜನಾದ ಸಿಂಹರಾಜನ ದರ್ಬಾರದಲ್ಲಿ ನೆರೆದಿದ್ದವು. ಜಟಾಧಾರಿಯಾದ ಮೃಗೇಂದ್ರನ ಕಣ್ಣುಗಳು ಆ ಮಂದಿರದಲ್ಲಿದ್ದ ದೀಪೋತ್ಸವದ ಬೆಳಕಿಗೆ ಬಹುಪರಿಯಾಗಿ ಹೊಳೆಯುತ್ತಿದ್ದು, ಮುಟ್ಟಿದ ಕೂಡಲೆ (ಯಂತ್ರಯೋಜನಕ್ಕಾಗಿ) ಆ ಕಂಠೀರವನು ಭೀತಿಬರುವಂತೆ ಗುರುಗುಟ್ಟಿ ಬಾಲವನ್ನೆತ್ತಿ ಅಪ್ಪಳಿಸುವನು. ಹೊಟ್ಟೆಯಲ್ಲಿರುವ ಮಲಸೂತ್ರದ ಯೋಗದಿಂದ ಕೆಲವು ಪಕ್ಷಿಗಳು ಮಂಜುಲವಾಗಿ ಹಾಡುತ್ತಿದ್ದವು. ಮತ್ತೊಂದೆಡೆಯಲ್ಲಿ ಲಗ್ನಸಮಾರಂಭಕ್ಕಾಗಿ ನೆರೆದಿರುವ ನರನಾರಿಯರ ಮೇಳವಿತ್ತು. ಕೃತ್ರಿಮರಾದ ಕೆಲ ಜನ ದಾಸಿಯರು ಎಡೆಬಿಡದಲೆ ಕಟಾಕ್ಷಕ್ಷೇಪವನ್ನು ಮಾಡುತ್ತಿದ್ದರು. ಕೆಲವರು ಮೃದುಹಾಸಗೈಯುತ್ತಿದ್ದರು. ಕೆಲವರು ಬೀಸಣಿಕೆ ಬೀಸುತ್ತಿದ್ದರು. ಅವರೆಲ್ಲರ ವ್ಯಾಪಾರಗಳು ಒಂದೇ ಪ್ರಕಾರವಾಗಿ ಪುನರಾವೃತ್ತಿಯನ್ನು ಹೊಂದುತ್ತಿರುವದರಿಂದಲೇ ಅವು ಕೃತ್ರಿಮವಾದ ಚಿತ್ರಗಳೆಂದು ಹೇಳಬಹುದೇ ಹೊರತಾಗಿ ಆಕಾರ ವರ್ಣಗಳನ್ನು ನೋಡಲು ಅದು ಮನುಷ್ಯ ಸಮುದಾಯವೇ ಎಂದು ಹೇಳಬಹುದಾಗಿತ್ತು. ದೀಪದ ಪ್ರಕಾಶ

ದಲ್ಲಿ ಮೋಸವು ಹೆಚ್ಚಾಗಿ ತೋರುವದರಿಂದ ಸುಲೇಮಾನನು ಆ ಚಮತ್ಕಾರಗಳನ್ನೆಲ್ಲ ನೋಡಿ ಆಶ್ಚರ್ಯಚಕಿತನಾಗಿಹೋಗಿದ್ದನು.

ನಾರಿಯರ ಪುತ್ಥಳಿಗಳ ಮಧ್ಯದಲ್ಲಿ ನಿಂತಿರುವದೊಂದು ಅತಿ ಪ್ರೇಕ್ಷಣೀಯವಾದ ಪುತ್ಥಳಿಯ ಲಾವಣ್ಯ ಲಕ್ಷಣಗಳನ್ನು ಕಂಡು ಚಕಿತ ನಾಗಿ ಸುಲೇಮಾನನು ಕ್ಷಣಹೊತ್ತು ಅದನ್ನೇ ತದೇಕ ದೃಷ್ಟಿಯಿಂದ ನೋಡುತ್ತ ನಿಂತನು. ಉಳಿದ ಚಿತ್ರಗಳಂತೆ ಅದಾದರೂ ನಿರ್ಜೀವವಾಗಿ ಕಂಡರೂ ಅದರ ಅಂಗಸೌಷ್ಟವವೂ ಮುಖಕಾಂತಿಯೂ ಸಜೀವಳಾದ ಯುವತಿಯಂತೆಯೇ ಇದ್ದವು. ಕಣ್ಣುಗಳಲ್ಲಿ ವಿಲಕ್ಷಣವಾದ ಹೊಳಪು ಕಾಣುತ್ತಿತ್ತು. ಇಂಥ ಹೊಳಪನ್ನು ಚಿತ್ರಕಾರನು ತೋರಿಸಬಲ್ಲನೆ? ಎಂದು ಸುಲೇಮಾನನು ಯೋಚಿಸುತ್ತಿರುವಾಗಲೇ ಆ ಚಿತ್ರವು ಅದೃಶ್ಯ ವಾಗಿ ಹೋಗಿತ್ತು !! ಪುತ್ಥಳಿಯು ಅದೃಶ್ಯವಾದದ್ದು ಕಂಡು ಸುಲೇಮಾ ನನು ಹುಚ್ಚುಹಿಡಿದವರಂತೆ ಬೆರಗಾಗಿ ನಿಂತನು. 'ಇದು ಅರಬೀ ಸುರಸ ಕಥೆಯಲ್ಲಿ ವರ್ಣಿಸಿದ ಮಾಟದ ಮಂದಿರವೇ ?' ಎಂದು ಅವನು ಚಕಿತ ನಾಗಿ ಸುತ್ತಲೂ ನೋಡುತ್ತ ಆ ಪುತ್ಥಳಿಯ ಶೋಧ ಮಾಡತೊಡಗಿದನು. ಅದೆಲ್ಲಿಯೂ ಕಾಣಲೊಲ್ಲದು ! ಆ ಪುತ್ಥಳಿಯ ಹಿಂಭಾಗದಲ್ಲಿದ್ದ ರೇಸಿಮೆಯ ತೆರೆಯನ್ನು ಸಾರ್ಚಿ ನೋಡಿದನು. ತೆರೆಯ ಹಿಂದೆ ಮತ್ತೊಂದು ಅಂತರ್ಗೃಹವು ! ಆ ಒಳಮನೆಯ ಬಾಗಿಲವು ತೆರೆದಿತ್ತಾದ್ದ ರಿಂದ ಸುಲೇಮಾನನು ಸಾಹಸದಿಂದ ಒಳಗೆ ಹಣೆಯಿಕ್ಕಿ ನೋಡಿದನು. ಶುಷ್ಕವಾದ ಶೋಭೆಯೇ ಹೊರತಾಗಿ ಆ ನವತರುಣಿಯು ಅಲ್ಲಿ ಇರಲಿಲ್ಲ! ಒಳಹೋಗುವದು ಉಚಿತವಲ್ಲವೆಂದೆಣಿಸಿ ಆ ರಾಜಕುಮಾರನು ಹಿಂದಕ್ಕೆ ಸರಕೊಳ್ಳುವಷ್ಟರಲ್ಲಿ ಕಾಲು-ಗೆಜ್ಜೆಗಳ ಮಂಜುಲವಾದ ಧ್ವನಿಯು ಅವನ ಕಿವಿಗೆ ಬಿದ್ದಿತು. ಅಕೋ! ಆ ನಿಶ್ಚಲವಾದ ಪುತ್ಥಳಿಯು ಈಗ ನಯನಾಭಿರಾಮೆಯಾಗಿ ಸುಳಿದಾಡಿ ಬಂದು, ಸುಲೇಮಾನನ ಎದುರಿನಲ್ಲಿ ನಿಂತಂತೆ ಕಂಡಿತು. ಅದೇ ಮುಖಚಂದ್ರವು, ಅದೇ ಚಿತ್ತವೇಧಕ ವಾದ ನೇತ್ರಕಮಲಗಳು, ಅದೇ ಸುಧಾಮಯವಾದ ಬಿಂಬಾಧರವು, ಅವೇ ಸೊಬಗಿನ ಉಡುಗೆ-ತೊಡಿಗೆಗಳು ! ಒನಪು ಒಯ್ಯಾರಗಳು ಮಾತ್ರ ಹೆಚ್ಚಿನವು !! ಆ ಇಂದುಮುಖಿಯು ಸುಲೇಮಾನನನ್ನು ಕಂಡು

ಲಜ್ಜಾವನತಮುಖಿಯಾಗಿ ಕಿಂಚಿತ್ ಮೃದುಹಾಸಗೈಯುತ್ತ ಮೆಲ್ಲನೆ ಮರೆಯಾಗಿ ನಿಂತಳು. ಆ ವಿಲಾಸಿನಿಯ ಪ್ರೇಮಸೂಚಕವಾದ ಮೃದು ಹಾಸವನ್ನು ಕಂಡು ಸುಲೇಮಾನನ ಮನಸ್ಸು ಕರಗಿ ನೀರಾಯಿತು. ಅವನ ಮೈಯೆಲ್ಲ ಕಂಪಿಸಿತು. ತಾನಾರು, ಎಲ್ಲಿರುವೆನೆಂಬ ಪ್ರಜ್ಞೆಯು ಅವನಿಗಿರಲಿಲ್ಲ. ಆ ನೋಟವೆಂದರೆ ಮಾಯಾವಿಲಾಸವೊ, ಸ್ವಪ್ನವೊ, ಅವನೇನು ಬಲ್ಲನು! ತಾನೊಂದು ಪುತ್ಥಳಿಯಾಗಿ ನಿಂತುಕೊಂಡನು.

ಅರಿಯದವರ ಅಂತಃಪುರದಲ್ಲಿ ಕಾಲಿಡುವದು ಶೀಲವಲ್ಲೆಂದು ಸುವಿಚಾರಿಯಾದ ಸುಲೇಮಾನನು ನಿಮಿಷಾರ್ಧದಲ್ಲಿ ವಿಮರ್ಶಿಸಿ ಅಲ್ಲಿಂದ ಹೊರಮುಟ್ಟಿ ಬರುವಷ್ಟರಲ್ಲಿ ಅವನೊಂದು ದುಂಡುಮಲ್ಲಿಗೆಯ ಹಾರವನ್ನು ಕಂಡನು. ಆ ಕಾಮಿನಿಯ ಪ್ರೇಮದ ಕುರುಹು ಇರಲೆಂದು ಎಣಿಸಿ ಆ ರಾಜಕುಮಾರನು ಹಾರವನ್ನು ಆದರದಿಂದೆತ್ತಿಕೊಂಡನು.

## ೭

## ಬಾದಶಹ ವಜೀರರ ಮಂತ್ರಾಲೋಚನವು.

“ ಸಾದುಲ್ಲಾಖಾನ, ಮಕ್ಕಳನ್ನು ಕಂಡು ಅಕ್ಕರತೆ ಪಟ್ಟು ಅವರನ್ನು ಎತ್ತಿ ಆಡಿಸಿ ಪ್ರೇಮದಿಂದ ಬೆಳಿಸುವದು ಒಂದು ಮಾತು; ಅವರನ್ನು ಅಂಕೆಯಲ್ಲಿಟ್ಟುಕೊಂಡು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವದು ಮತ್ತೊಂದು ಮಾತು. ಮಕ್ಕಳ ಮೇಲೆ ಮಮತೆಯನ್ನು ಮಾಡುವದು, (ಪಶುಗಳಂತೆಯೇ) ಮನುಷ್ಯನಲ್ಲಿ ಸ್ವಭಾವಜನ್ಯವಾದ ಗುಣವಲ್ಲದೆ ಅದರಲ್ಲಿ ವಿಶೇಷವೇನೂ ಇಲ್ಲ. ಆದರೆ ಮಕ್ಕಳ ಮೇಲೆ ವರ್ಚಸ್ವವನ್ನಿಟ್ಟುಕೊಂಡು, ತಂದೆಯೆಂದರೆ ಸನ್ಮಾನ್ಯನಾದ ಪುರುಷನೂ ನಿಯಾಮಕನಾದ ಶಿಕ್ಷಕನೂ ಆಗಿರುವನೆಂಬ ಆದರದ ಭಾವವು ಅವರಲ್ಲಿ ಉಂಟಾಗಿರುವಂತೆ ವ್ಯವಸ್ಥೆಯನ್ನಾದರೂ ಇಟ್ಟುಕೊಂಡಿರುವದು ತಂದೆಯ ಕರ್ತವ್ಯವು. ಅದಕ್ಕಾಗಿಯೇ ಮನುಷ್ಯನ ಯೋಗ್ಯತೆಯನ್ನು ಅವನ ಕುಟುಂಬದ ಸ್ಥಿತಿಯ ಮೇಲಿಂದ ಕಟ್ಟತಕ್ಕದ್ದೆಂದು ಬುದ್ಧಿವಂತರು ಹೇಳುವದು ಸರ್ವಥಾ ಯಥಾರ್ಥವಾದದ್ದು. ವಜೀರಜೀ, ರಾಜಪುತ್ರ

ರಾದ ನಮ್ಮ ದಾರಾ, ಸುಜಾ, ಮುರಾದ, ಔರಂಗಜೇಬರ ವರ್ತನಗಳನ್ನು ಯೋಗ್ಯವಾದ ರೀತಿಯಿಂದ ನಿರ್ಬಂಧಿಸಬೇಕೆಂದು ನೀವು ನನಗೆ ಕಾಲ ಕಾಲಕ್ಕೆ ಹೇಳುತ್ತ ಬಂದರೂ ತಿಳಿಗೇಡಿಯಾದ ನಾನು ಉಪೇಕ್ಷೆ ಮಾಡಿದೆನು! ಅದರ ಪರಿಣಾಮ ನೋಡಿರಿ! ಮದ, ಮತ್ಸರ, ಲೋಭ ಮುಂತಾದ ದುಷ್ಟವಾದ ವಿಕಾರಗಳಿಗೆ ವಶರಾಗಿ ಅವರು ಹುಚ್ಚೆದ್ದು ಕುಣಿಯುತ್ತಲಿದ್ದಾರೆ. ನಾನು ಜೀವಂತನಿರುವಾಗಲೇ ಈ ಸಾಮ್ರಾಜ್ಯದ ಪ್ರಾಪ್ತಿಗಾಗಿ ಅವರೆಲ್ಲರೂ ಸಾಧಿಸಿ ಪ್ರಯತ್ನ ಮಾಡುತ್ತಿರುವಂತೆ ಕಾಣುತ್ತದೆ. ಹಟದಿಂದ ಘೋರತರವಾದ ಸಾಹಸದ ಕೃತ್ಯವನ್ನು ಮಾಡುತ್ತಿರುವಾಗ ನನ್ನ ಮಕ್ಕಳೇ ಮಣ್ಣುಪಾಲಾಗಿ ಹೋಗುವರೋ, ಇಲ್ಲವೆ ಅಂಥ ಅನರ್ಥಕರವಾದ ಹವಣಿಕೆಯ ಮೂಲಕವಾಗಿ ಪ್ರತಾಪಶಾಲಿಗಳಾದ ಅಕಬರ ಬಾದಶಹರ ಸಾಮ್ರಾಜ್ಯವೆಂಬ ದಿವ್ಯವಾದ ಮಂದಿರವು ಬುಡಮೇಲಾಗಿ ಬಿದ್ದು, ಹೇಳ ಹೆಸರಿಲ್ಲದೆ ಹೋಗುವದೋ ಕಾಣೆನು" ಎಂದು ನುಡಿದು ಶಹಾಜಹಾನನು ಉಸುರ್ಗರೆದನು.

ಬಾದಶಹರ ನುಡಿಯನ್ನೂ ಅವರ ಖಿನ್ನವಾದ ಮುಖವನ್ನೂ ಕಂಡು ರಾಜನಿಷ್ಠನಾದ ಆ ವಜೀರನಿಗೆ ವ್ಯಸನವಾಯಿತು. ಅವನು ಪ್ರತ್ಯುತ್ತರವಾಗಿ ನುಡಿದದ್ದು:— "ಪ್ರಭುಗಳು ಹಾಗೆ ಚಿಂತೆಗೀಡಾಗಕೂಡದು. ಅಸಾಧ್ಯವಾದ ಸಂಗತಿಗಳು ಕೂಡ ಕೆಲವೊಂದು ಸೂತ್ರವನ್ನು ಜಾಣ್ಮೆಯಿಂದ ತಿರುವಲಾಗಿ ಸುಸಾಧ್ಯವಾದ ಚಮತ್ಕಾರಗಳನ್ನು ಕಂಡದ್ದುಂಟು. ಇದಲ್ಲದೆ ದೇವರ ಕೃಪೆಯೆಂಬ ಹೇಮುಗರ್ಭವಂತೂ ಇದ್ದೇ ಇರುವದು. ಉತ್ಶೃಂಖಲರಾಗಿರುವ ಜನರಿಗೆ ಬಹಿರಂಗವಾಗಿ ಆದರವನ್ನೂ ಮಮತೆಯನ್ನೂ ತೋರಿಸಿ ಯುಕ್ತಿಪ್ರಯುಕ್ತಿಗಳಿಂದೆ ಅವರನ್ನು ನಮಗೆ ಬೇಕಾದ ಹಾಗೆ ನಿಗ್ರಹಿಸಬಹುದು. ಮುಂದೆ ಹೀಗೆಯೇ ಆಗಬೇಕೆಂದು ಬಾದಶಹರು ನಿಶ್ಚಯವಾಗಿ ಆಲೋಚಿಸಿಕೊಂಡಿಟ್ಟರೆ ಆ ನಿಶ್ಚಯವನ್ನು ಕೊನೆಗಾಣಿಸುವ ಭಾರವು ನನ್ನನ್ನು ಕೂಡಿತು. ಈ ಚರಣಗಳ ತರುವಾಯ ಈ ದಿಲ್ಲೀ ಸಾಮ್ರಾಜ್ಯಕ್ಕೆ ಯಾರು ಒಡೆಯರಾಗತಕ್ಕದ್ದೆಂಬದನ್ನು ಬಾದಶಹರು ಸಮಾಲೋಚಿಸಿ ನಿಶ್ಚಯಿಸತಕ್ಕದ್ದು. ಸದ್ಯಕ್ಕೆ ಭಯಪ್ರದವಾಗಿರುವ ದುಸ್ಥಿತಿಯನ್ನು ನಿವಾರಿಸಲಿಕ್ಕೂ ಬಾದಶಹರ ಇಚ್ಛೆಗೆ ಬಂದ ರಾಜ-

ಪುತ್ರರೇ ನಿರಾಯಾಸವಾಗಿ ಸಾರ್ವಭೌಮರಾಗುವಂತೆ ಮಾಡಲಿಕ್ಕೂ ಈ ಸಾದುಲ್ಲಾಖಾನನು ಸಮರ್ಥನಿರುವನು."

"ಸಾದುಲ್ಲಾಖಾನ, ನೀವು ಅಂಥ ಚತುರರೂ ಧೂರ್ತರೂ ಆದ ಮಂತ್ರಿಯಾಗಿರುವಿರಿ! ಆದರೆ ನನ್ನ ದುರ್ಮತಿಗಳಾದ ಮಕ್ಕಳು ರಾಜ್ಯದಲ್ಲಿಯ ಸೇನಾಪತಿಗಳನ್ನೂ ಸರದಾರರನ್ನೂ ತಮ್ಮ ತಮ್ಮ ಪಕ್ಷಗಳಿಗೆ ಒಡಕೊಂಡು ಬೇಗನೆ ಅನರ್ಥಕರವಾದ ರಕ್ತಪಾತದಿಂದ ಹಿಂದುಸ್ಥಾನದ ತುಂಬ ಹಾಹಾಕಾರವನ್ನುಂಟುಮಾಡಲು ಸಿದ್ಧರಾಗಿರುವರಷ್ಟೆ? ಇಂಥ ಸಮಯದಲ್ಲಿ ಇಂಥವನೇ ಭಾವೀ ಚಕ್ರವರ್ತಿಯಾಗತಕ್ಕದ್ದೆಂದು ನಾನು ನಿಯಮಿಸಿದರೆ ನಾಳಿಗೆ ಬರುವ ಸಂಕಟಗಳು ಇಂದೆಯೇ ಬಂದೊದಗಲಿಕ್ಕಿಲ್ಲವೆ?"

"ಅಲಂಪನಾಃ! ಈ ಸಾದುಲ್ಲಾಖಾನನ ದೇಹದಲ್ಲಿ ಪ್ರಾಣವಿರುವವರೆಗೂ ಸೇನಾಪತಿಗಳಾಗಲಿ, ಸರದಾರರಾಗಲಿ, ಬಾದಶಹರ ಇಷ್ಟೆಗೆ ವಿರುದ್ಧವಾಗಿ ಯತ್ಕಿಂಚಿತ್ತಾದರೂ ಅಲ್ಲಾಡಲಿಕ್ಕೆ ಅಸಮರ್ಥರಾಗಿರುವರು. ಮೇಲಾಗಿ ಐವತ್ತು ಸಾವಿರ ಜನ ಪಠಾಣ ಜಾತಿಯ ಸೈನ್ಯದವರು ಕೇವಲವಾಗಿ ನನ್ನ ಆಜ್ಞೆಯಂತೆಯೇ ನಡಕೊಳ್ಳುವವರಾಗಿದ್ದಾರೆ. ನನ್ನಾ ಪಠಾಣ ಸೈನ್ಯದ ಮುಂದೆ ಯಾರ ಆಟವಾದರೂ ಕ್ಷಣ ಹೊತ್ತು ಕೂಡಾ ನಡೆಯಲಾರದೆಂಬದನ್ನು ರಾಜಪುತ್ರರೆಲ್ಲರೂ ಮನಗಂಡವರಾಗಿದ್ದಾರೆ."

"ಶಾಬಾಸ್ ಸಾದುಲ್ಲಾಖಾನಸಾಹೇಬ! ನಿಮ್ಮ ಪ್ರಭಾವವೇ ಅಂಥಾದ್ದು! ಆದರೆ ನನ್ನ ತರುವಾಯ ಯಾರು ಸಿಂಹಾಸನಕ್ಕೆ ಯೋಗ್ಯರೆಂಬದು ಇನ್ನೂ ನಿಶ್ಚಿತವಾಗಲೊಲ್ಲದು. ನನ್ನ ಹಿರಿಯ ಮಗನಾದ ದಾರಾಶಹನೇ ದಿಲ್ಲಿಯ ಸಾರ್ವಭೌಮನಾಗುವದು ವಿಹಿತವಲ್ಲವೆ?"

"ಇಂಥ ಚಂಚಲವಾದ ಮನೋವೃತ್ತಿಯೇ ಘಾತಕವಾದದ್ದು. ಬಾದಶಹರು ಈ ಸಮಯದಲ್ಲಿ ಹೀಗೆ ಮೀನಮೇಷ ಮಾಡುತ್ತಿರುವದು ಸರಿಯಲ್ಲ. ಈ ಪಾದಸೇವಾರತನಾದ ವಜೀರನು ಸ್ವಾಮಿಭಕ್ತಿಯಿಂದೆ ಪ್ರೇರಿತನಾಗಿ ಕಿಂಚಿತ್ ಹೆಚ್ಚಿಗೆ ಮಾತಾಡಿದ್ದಕ್ಕೆ ಕ್ಷಮೆಯಿರಬೇಕು." ಎಂದು ಸಾದುಲ್ಲಾಖಾನನು ಕೈಜೋಡಿಸಿ ಬೇಡಿಕೊಂಡನು.

"ವಜೀರ್, ನೀವು ಈ ಸಾಮ್ರಾಜ್ಯದ ಆಧಾರಸ್ತಂಭ! ಕರ್ತವ್ಯವನ್ನು ಲಕ್ಷಿಸಿ ನೀವು ಸ್ಪಷ್ಟೋಕ್ತಿಗಳನ್ನಾಡಿದ್ದಕ್ಕೆ ನನಗೆ ಎಳ್ಳಷ್ಟಾದರೂ ಸಿಟ್ಟಿಲ್ಲ! ನನ್ನ ದರಾಯುಸನೇ ದಿಲ್ಲಿಯ ಚಕ್ರವರ್ತಿಯಾಗಲಿಕ್ಕೆ ಯೋಗ್ಯನೆಂದು ಹೇಳಲು ತಪ್ಪೇನು? ನಿಮ್ಮ ಭಾವೀ ಜಾಮಾತನಾದ ಸುಜಾ ಸುಲ್ತಾನನಿಗೆ ಪಟ್ಟವಾಗಬೇಕೆಂಬ ಅಭಿಪ್ರಾಯವು ನಿಮ್ಮದಾಗಿದ್ದರೆ ಹೇಳಿರಿ!"

"ತೋಬಾ! ತೋಬಾ!! ಹೂಜೂರ್, ಬಾದಶಹರು ಯಾರಾಗಬೇಕೆಂದು ಹೇಳುವ ಅಧಿಕಾರವು ಪಾಮರನೂ ಪ್ರಜನೂ ಆದ ನನಗೆ ಹೇಗೆ ಬಂದೀತು? ಯಾರೇ ಈ ಸಿಂಹಾಸನವನ್ನೇರಲಿ, ಏಕನಿಷ್ಠೆಯಿಂದ ಅವರ ಸೇವೆಯನ್ನು ಮಾಡಿಕೊಂಡಿರುವ ಕೆಲಸವು ನನ್ನದು. ಪ್ರಭೋ, ಸುಜಾ ಸುಲ್ತಾನರವರು ನನ್ನ ಜಾಮಾತರಾಗತಕ್ಕವರೆಂಬ ವಾರ್ತೆಯನ್ನು ಈ ಸಿಂಹಾಸನಕ್ಕೆ ಅರಿಕೆ ಮಾಡಿದವರಾರು?"

ಶಹಾಜಹಾನನು ಮಂದಸ್ಮಿತನಾಗಿ "ಸಾದುಲ್ಲಾಖಾನ್, ನಮ್ಮ ಔರಂಗಜೇಬನ ಪಾತಾಳಗಣ್ಣಿಗೆ ತಗಲದೆ ಯಾವದಾದರೂ ರಹಸ್ಯವು ಉಳಿದೀತೆ?" ಎಂದು ಕೇಳಿದನು.

"ಸುಲ್ತಾನ ಔರಂಗಜೇಬರ ಸಾಹಸವು ವಿಚಿತ್ರವಾದದ್ದು! ಅವರು ಮೇಧಾವಿಗಳೂ ರಾಜಕಾರಣಪ್ರವೀಣರೂ ಪರಾಕ್ರಮಿಗಳೂ ಆಗಿರುವದು ನಿಜ. ಇಂಥವರಲ್ಲಿ ಕಪಟವೂ, ನಿರ್ಘೃಣತೆಯೂ, ವೃಥಾಭಿಮಾನವೂ ವಾಸಮಾಡಿಕೊಳ್ಳದಿದ್ದದ್ದಾಗಿದ್ದರೆ ಅವರೇ ದಿಲ್ಲಿಯ ಸಾರ್ವಭೌಮರಾಗಲಿಕ್ಕೆ ಯೋಗ್ಯರೆಂದು ನಾನು ಹೇಳುತ್ತಿದ್ದೇನೆ. ಅದಿರಲಿ; ಪ್ರಭುಗಳೇ, ಸುಲ್ತಾನ ಸುಜಾಸಾಹೇಬರು ನನ್ನ ಮಗಳ ಪಾಣಿಗ್ರಹಣವನ್ನು ಮಾಡುವೆನೆಂದು ಇಚ್ಛಿಸಿದ್ದು ನಿಜ. ಆದರೆ ಇಷ್ಟೇ ಕಾರಣಕ್ಕಾಗಿ ಅವರು ಸಾರ್ವಭೌಮರಾಗಬೇಕೆಂದು ನಾನು ಹೇಳಲಾರೆನು."

"ಏನೆಂದಿರಿ ವಜೀರ್? ನೀವು ನಿಮ್ಮ ಮಗಳನ್ನು ನಮ್ಮ ಸುಜಾ ಸುಲ್ತಾನರಿಗೆ ಕೊಡಬೇಕೆಂದು ಆಲೋಚಿಸಿರುವಿರಾ?"

"ತೋಬಾ! ತೋಬಾ!! ಬಾದಶಹರ ಸಮ್ಮತಿಯಲ್ಲದೆ ಸುಜಾ ಸುಲ್ತಾನರಿಗೆ ಮಗಳನ್ನು ಕೊಡಲು ನಾನು ಅಧಿಕಾರಿಯೋ?!! ಈ

ದಾಸನು ಒಪ್ಪಿಕೊಂಡೇ ಇಲ್ಲ. ಮೇಲಾಗಿ ನನ್ನ ಮಗಳು ಮತ್ತೋರ್ವ ತರುಣರಾದ ರಾಜಪುತ್ರರಲ್ಲಿ ಆಸಕ್ತವಾದ ಪ್ರೇಮವುಳ್ಳವಳಾಗಿರುವ ಳೆಂದು ನನಗೆ ತಿಳಿದಿದೆ. ಸುಜಾ ಸುಲ್ತಾನರ ಅರ್ಧಾಂಗಿಯಾಗಲು ಆ ತರುಳೆಯು ಇಚ್ಛಿಸುವದಿಲ್ಲವಂತೆ!"

"ಆಂ! ನಿಮ್ಮ ಮಗಳು ಸುಲ್ತಾನೆಯಾಗಲಿಕ್ಕೆ ಒಪ್ಪುವದಿಲ್ಲವೆ? ದಿಲ್ಲಿಯ ಬಾದಶಹರ ಸೊಸೆಯಾಗಲಿಕ್ಕೆ ಒಪ್ಪದಿರುವ ಆ ಎದೆಗಾರತಿಯು ಹೆಚ್ಚಿನಾಕೆಯಾಗಿ ತೋರುತ್ತಾಳೆ! ಒಳ್ಳೇದು; ಆ ಲಲನೆಯು ತನ್ನ ಮಾಲೆಯನ್ನು ಇನ್ನಾವ ರಾಜಪುತ್ರನ ಕೊರಳಿಗೆ ತೊಡಕಿಸಬೇ ಕೆನ್ನುವಳು?"

"ಸಾರ್ವಭೌಮರು ಕ್ಷಮಿಸಬೇಕು. ಇಲಿಯ ಮರಿಯು ಮೃಗ ರಾಜನ ಹೆಂಡತಿಯಾಗಬೇಕೆಂದು ಹವಣಿಸುವಂತೆಯೇ ಆ ನನ್ನ ಮಗಳು ಸುಲ್ತಾನ ಸುಲೇಮಾನರವರ ಪ್ರೇಮಾಸ್ಪದಳಾಗಬೇಕೆಂದು ಬಯಸಿದಂತೆ ತೋರುತ್ತದೆ" ಎಂದು ಹೇಳಿ ವಜೀರನು ಬಾದಶಹನಿಗೆ ಪ್ರಣಾಮ ಮಾಡಿ ನುಡಿದನು.

"ಓಃ ಹೋ!! ಆ ಚದುರೆಯು ಹಗ್ಗವನ್ನಂತೂ ಬಲು ದೂರ ಒಗೆದಿರುವಳು. ನನ್ನ ಹರ್ಷವರ್ಧನನಾದ ಸುಲೇಮಾನನ ರೂಪಕ್ಕೆ ಮರುಳಾಗದ ನಾರಿಯರು ಹುಟ್ಟಿದ್ದುಂಟೆ? ಒಳ್ಳೇದು! ಸುಲೇಮಾನನ ಅಭಿಪ್ರಾಯವು ಈ ವಿಷಯದಲ್ಲಿ ಏನಾಗಿರುವದು?"

"ನನ್ನ ಶಹರಜಾದೆಯು ಸುಲೇಮಾನ ರಾಜಪುತ್ರರ ಅನುಗ್ರಹಕ್ಕೆ ಪಾತ್ರಳಾಗಿರುವಂತೆ ಕಾಣುತ್ತದೆ."

ಈ ಮಾತು ಕೇಳಿ ಬಾದಶಹನಿಗೆ ಒಂದು ಪ್ರಕಾರದ ಆನಂದವೇ ಆಯಿತು. ಅವನು ತನ್ನ ವ್ಯಾಧಿವಿಕೃತವಾದ ಜೋಲು-ಮುಖವನ್ನು ಮೇಲಕ್ಕೆ ಎತ್ತಿ ಉತ್ಸಾಹದಿಂದ ನುಡಿದದ್ದು: "ಶೂಕ್ರ ಅಲ್ಲಾಃ! ಇದೊಂದು ಶುಭವಾರ್ತೆಯೇ ಸರಿ. ಸಾದುಲ್ಲಾಖಾನ, ನಾನು ಸುಲ್ತಾನ ದರಾಯುಸನಿಗೆ ದಿಲ್ಲಿಯ ಸಾಮ್ರಾಜ್ಯದ ಆಧಿಪತ್ಯವು ಪ್ರಾಪ್ತವಾಗ ಬೇಕೆಂದು ಇಚ್ಛಿಸುತ್ತೇನೆ. ಮುಂದೆ ಅವನ ಬೀಗರಾಗತಕ್ಕವರಾದ ನೀವು ದಾರಾಶಹನ ಪಕ್ಷವನ್ನೇ ಸ್ವೀಕರಿಸುವಿರಲ್ಲವೆ?"

"ಹಮ್‌ದುಲಿಲ್ಲಾ! ಬಾದಶಹರ ಇಚ್ಛಾನುಸಾರವಾಗಿ ನಾನು ದಾರಾಶಹರ ಪಕ್ಷವನ್ನು ಸ್ವೀಕರಿಸುವದು ನನ್ನ ಕರ್ತವ್ಯವೇ ಆಗಿದೆ."

"ಈ ಮಾತು ನಿಜವಷ್ಟೆ?" ಎಂದು ಶಹಾಜಹಾನನು ಆಸ್ಥೆಯಿಂದ ಕೇಳಿದನು.

"ಯಾ ಸುಭಾನಲ್ಲಾ! ಯಾ ಸುಭಾನಲ್ಲಾ!! ನಾನೆಂದಿಗಾದರೂ ದಂಭವನ್ನು ಮಾಡಿದವನೆ? ಪ್ರತ್ಯಕ್ಷ ಅಕಬರ ಬಾದಶಹರೇ ದಾರಾ-ಸುಲ್ತಾನರಾಗಿ ಹುಟ್ಟಿಬಂದಿರುವರೆಂದು ನಾನು ದೃಢವಾಗಿ ನಂಬಿದ್ದೇನೆ. ಹಿಂದುಸ್ಥಾನದ ಭಾಗ್ಯೋದಯದ ಕಾಲವಿದ್ದರೆ ಅವರೇ ಬಾದಶಹರಾಗ-ತಕ್ಕದ್ದು!"

"ಇನ್‌ಶಾ ಅಲ್ಲಾಃ! ವಜೀರಜೀ, ದೇವರ ಕೃಪೆಯಿಂದ ನಿಮ್ಮ ವಚನವು ಸತ್ಯವಾಗಲಿ! ಖಾನಸಾಹೇಬ, ನನ್ನ ಪ್ರೀತಿಯ ಮಗನು ಬಾದಶಹನಾಗಬೇಕಾದರೆ ನಾನೇನು ಮಾಡಬೇಕು ಹೇಳಿರಿ?"

"ರಾಜಕುಮಾರರೆಲ್ಲರೂ ದಿಲ್ಲೀ ಆಗ್ರಾ ಪಟ್ಟಣಗಳಲ್ಲಿ ಈಗ ಧ್ವಜವೂರಿಕೊಂಡಿದ್ದು ರಾಜ್ಯದ ಪ್ರಮುಖರಾದ ನಬಾಬ, ರಾಜಾ, ಅಮೀರ, ಸರದಾರ ಮುಂತಾದ ಜನರೊಡನೆ ಒಳಸಂಚು ನಡಿಸುತ್ತ ತಮ್ಮ ತಮ್ಮ ಸ್ತೋಮಗಳನ್ನು ಬೆಳಿಸುತ್ತಿರುವರು. ಹೀಗೆ ಅವಕಾಶ ಕೊಟ್ಟರೆ ಅವರು ಬರಬರುತ್ತ ಸಾಮ್ರಾಜ್ಯದ ಬಲಕಟ್ಟನ್ನು ಹಿಂಜಿ ಹಿರಿದು ಬಿಡುವರು. ನಿಮ್ಮೀ ತರುಣರಾದ ಸುಲ್ತಾನರ ಕಲಹಗಳಿಂದ ರಾಜಧಾನಿಯಲ್ಲಿ ಅಭದ್ರವಾದ ಅತ್ಯಾಚಾರಗಳುಂಟಾಗತೊಡಗಿವೆ. ಇವು ಕ್ಷುಲ್ಲಕವಾಗಿದ್ದರೂ ಇವುಗಳಿಂದೆ ಬಾದಶಹರಿಗೂ ರಾಜ್ಯದ ಬೇರೆ ಅಧಿಕಾರಿಗಳಿಗೂ ಮನಸ್ತಾಪ ತೊಂದರೆಗಳಾಗಬಹುದು. ಅದಕ್ಕಾಗಿ ಸುಜಾ, ಮುರಾದ, ಔರಂಗಜೇಬ ಸುಲ್ತಾನರನ್ನು ಬೇರೆ ಬೇರೆ ಸುಭೆಗಳಿಗೆ ಬೇಗನೆ ಅಟ್ಟಿಬಿಡಬೇಕು."

"ಹೇಗೆ ಹೇಗೆ?" ಎಂದು ಬಾದಶಹನು ಉತ್ಸುಕನಾಗಿ ಕೇಳಿದನು.

"ಸ್ವಾರ್ಥಸಾಧನದಲ್ಲಿ ನಿಷ್ಣಾತರೂ ತತ್ಪರರೂ ಆಗಿರುವ ಔರಂಗ-ಜೇಬ ಸುಲ್ತಾನರನ್ನು ದೂರದತ್ತ ದಕ್ಷಿಣದ ಸುಭೆಗೆ ಕಳಿಸಿದರೆ ಅವರ ಸಂಧಾನಗಳೆಲ್ಲ ಶಿಥಿಲವಾಗುವವು. ಸುಜಾ ಸುಲ್ತಾನರನ್ನು ಬಂಗಾಲಕ್ಕೂ

ಸುರಾದ ಸಾಹೇಬರನ್ನು ಗುಜರಾಥಕ್ಕೆ ಕಳಿಸಿದರೆ ಅವರ ಮಿಸುಕಾಟವೂ ಕಡಿಮೆಯಾಗುವದು."

"ವಜೀರ್, ದಾರಾಶಹನನ್ನು ನಾನು ನನ್ನ ಬಳಿಯಲ್ಲಿಯೇ ಇಟ್ಟು ಕೊಳ್ಳಬೇಕೆಂದು ಇಚ್ಛಿಸುತ್ತೇನೆ."

"ನಾನಾದರೂ ಅದನ್ನೇ ಹೇಳುವವನಿದ್ದೆನು. ಯುವರಾಜರನ್ನು ಬಾದಶಹರು ಬಳಿಯಲ್ಲಿಯೇ ಇಟ್ಟುಕೊಂಡು ರಾಜ್ಯಭಾರದ ಅನೇಕಾಂಶ ಗಳನ್ನು ಅವರ ತಲೆಯ ಮೇಲೆ ಹೊರಿಸಿದರೆ ಅವರಿಗೆ ನಿಜವಾದ ಅನುಭವವು ಪ್ರಾಪ್ತವಾಗುವದು."

"ಇದೊಳ್ಳೇ ಪ್ರಶಸ್ತವಾದ ಆಪ್ತಾಲೋಚನೆಯು! ಈ ಮೇರೆಗೆ ವರ್ತಿಸಲು ರಾಜಪುತ್ರರಿಗೆ ಬೇಗನೆ ಆಜ್ಞಾಪತ್ರಗಳನ್ನು ಬರೆಯಿಸಿರಿ."

"ಜೀ ಹುಜೂರ್!"

"ಸಾದುಲ್ಲಾಖಾನ್, ನಿಮ್ಮ ಪತ್ನಿಯು ಕಾಬೂಲದ ಪಠಾಣ ವಂಶದ ಸರದಾರನ ಮಗಳಲ್ಲವೆ?"

"ಅಹುದು ಪ್ರಭೋ. ಯಾಕೆ?"

"ಸುಮ್ಮನೆ ಕೇಳಿದೆನು. ಪಠಾಣರು ಶೀಯಾ ಪಂಥದವರು. ನಿಮ್ಮ ಮಗಳಾದ ಶಹರಜಾದೆಯು ಶೀಯಾ ಪಂಥದಲ್ಲಿ ನಡೆಯುವವಳಾದರೆ ಅವಳು ನನ್ನ ಸುಲೇಮಾನನಿಗೆ ತಕ್ಕವಳಾದ ಸುಲ್ತಾನೆಯಾಗುವಳೆ?"

ಈ ಮಾತಿಗೆ ಸಾದುಲ್ಲಾಖಾನನು ತುಸು ನಕ್ಕು "ಪರ್ವರ್ದಿಗಾರ್, ತಾಯಿ-ತಂದೆಗಳ ಪಂಥವು ಯಾವದೇ ಇರಲಿ, ಕನ್ನೆಯು ನಿಶ್ಚಯವಾಗಿ ತನ್ನ ಪತಿರಾಯನ ಪಂಥವನ್ನೇ ಅನುಸರಿಸುವವಳಲ್ಲೆ? ಮೇಲಾಗಿ ಶಹರ್‌ಜಾದೆಯ ಅಧ್ಯಾಪಕರು ಸುನ್ನೀ ಪಂಥದವರಾಗಿದ್ದು, ಅವಳಿಗೆ ಅದೇ ಪಂಥದಲ್ಲಿ ಅಭಿಮಾನವಿರುವದು." ಎಂದು ಅವನು ಮತ್ತೆ ಮೂರಾವರ್ತಿ ನೆಲಮುಟ್ಟಿ ಬಾದಶಹನಿಗೆ ಪ್ರಣಾಮ ಮಾಡಿದನು.

"ಇದೊಂದು ಸಂಶಯವು ದೂರಾಗಿ ನನಗೆ ಪರಮಾವಧಿಯ ಆನಂದವಾಯಿತು. ಮುಂದೆ ನಮ್ಮ ನಿಮ್ಮ ಸಂಬಂಧವು ಪರಮಾತ್ಮನ ಇಚ್ಛಾನುಸಾರವಾಗಿ ಘಟಿಸುವದು. ಸುಲೇಮಾನನ ಪ್ರೀತ್ಯಾಸ್ಪದಳಾದ ನಿಮ್ಮ ಶಹರ್‌ಜಾದೆಯು ರೂಪವತಿಯೂ ಸುಶಿಕ್ಷಿತಳೂ ಚತುರೆಯೂ

ಆಗಿರುವಳೆಂಬ ಬಗ್ಗೆ ಸಂದೇಹವಿಲ್ಲ. ಆದರೂ ಆ ನಿನ್ನ ಕನ್ಯಾರತ್ನವನ್ನು ಒಂದಾವರ್ತಿ ನಮ್ಮ ರೋಶನಾರಾ ಜೇಗಮ್ಮಳ ದೃಷ್ಟಿಗೆ ಹಾಕುವಂತೆ ಮಾಡಿರಿ ಹೆಂಗಸರೇ ಹೆಂಗಸರ ಲಾವಣ್ಯದ ನಿಜವಾದ ಪರೀಕ್ಷಕರು" ಎಂದು ನುಡಿದು ಬಾದಶಹನು ಸಂತೋಷದಿಂದ ನಕ್ಕನು.

"ಪ್ರಭುಗಳ ಆಜ್ಞೆಯೇ ಪ್ರಮಾಣವು!" ಎಂದು ವಜೀರನು ನಗೆಮುಖ ತಾಳಿ ನುಡಿದು ಪ್ರಣಾಮ ಮಾಡಿದನು.

## ೮

## ಕುರಾಣವನ್ನು ಬಡೆದು ಆಣೆ ಮಾಡಿದರು

ತಮ್ಮ ತಮ್ಮ ಸುಭೆಗಳ ಸ್ಥಳಕ್ಕೆ ಹೊರಡಬೇಕೆಂದು ಶಹಾಜಹಾನನು ತನ್ನ ಮಕ್ಕಳಿಗೆ ಆಜ್ಞೆಗೈದ ಮೇರೆಗೆ ಸುಖೋಪಭೋಗಪ್ರಿಯನಾದ ಮುರಾದನು ಮತ್ತೊಂದು ವಿಚಾರವನ್ನು ಮಾಡದೆ ಅಹಮದಾಬಾದಕ್ಕೆ ಹೊರಟುಹೋದನು ತನ್ನ ಅಭೀಷ್ಟವು ಸಾಧಿಸಬೇಕಾದರೆ, ತಾನು ಬಂಗಾಲಕ್ಕೆ ಹೋಗಿ ಕಾರಸ್ಥಾನವನ್ನು ನಡಿಸತಕ್ಕದ್ದೆಂದು ಯೋಜಿಸಿ ಸುಜಾ ಸುಲ್ತಾನನು ರಾಜಮಹಾಲಿನ ದಾರಿ ಹಿಡಿದನು. ಆದರೆ, ಜೇಡ ಹುಳದಂತೆ ತನ್ನ ಕಪಟಜಾಲವನ್ನು ಒಡ್ಡುತ್ತಿರುವ ಔರಂಗಜೇಬನ ವ್ಯವಸಾಯವಿನ್ನೂ ಸಂಪೂರ್ಣವಾಗದ್ದಿಲ್ಲವಾದ್ದರಿಂದ ಆ ಧೂರ್ತನು ಆಗ್ರಾಪಟ್ಟಣವನ್ನು ಬಿಟ್ಟು ಕಾಲು ಕಿತ್ತಲೊಲ್ಲನು. ಮೊಹರಮ್ಮ ತಿಂಗಳಿನಲ್ಲಿ ತನಗೆ ಕುರಾಣವನ್ನು ಪಠಿಸುವದಿದೆ, ಸಫರ ತಿಂಗಳಸಲ್ಲಿ ಧರ್ಮನಿರತರಾದ ಮುಸಲ್ಮಾನರು ಸ್ಥಲಾಂತರವನ್ನು ಮಾಡಲಾಗದು, ಮುಂತಾದ ನೆವಗಳನ್ನು ತನ್ನ ತಂದೆಗೆ ಹೇಳಿ, ಆ ಶಕುನಿಯು ರಾಜಧಾನಿಯಲ್ಲಿಯೇ ಉಳಿದುಕೊಂಡನು.

ಈ ಸಮಯದಲ್ಲಿ ಔರಂಗಜೇಬನ ಮನೆಯಲ್ಲಿ ದಿನಾಲು ಒಳಸಂಚಿನ ಮಾತುಗಳು ಅವ್ಯಾಹತವಾಗಿ ನಡೆಯುತ್ತಿದ್ದವು. ಗೃಹಭೇದಿಗಳಾದ ರೋಶನಾರೆ ಶಾಇಸ್ತೆಖಾನರು ಸುಲ್ತಾನ ದರಾಯನ ಆಪ್ತಾಲೋಚನೆಗಳನ್ನೆಲ್ಲ ಯುಕ್ತಿ ಪ್ರಯುಕ್ತಿಗಳಿಂದ ಒಡಕೊಂಡು ಬಂದು

ಔರಂಗಜೇಬನಿಗೆ ತಿಳಿಸುತ್ತಿದ್ದರು. ರಾಜ್ಯದ ಮುಖ್ಯ ಬಕ್ಷಿಯಾದ ದಾನಿಶ್ ಮಂದಖಾನನು ಔರಂಗಜೇಬನ ಮೋಸಕ್ಕೆ ಒಳಗಾಗಿ ಅವನ ಪಕ್ಷಕ್ಕೆ ಸೇರಿದನು. ದಾರಾಶಹನ ಪಕ್ಷದವನಾದ ಆ ವೀರನೂ, ಪಂಡಿತನೂ, ರಾಜನಿಷ್ಠನೂ ಆಗಿದ್ದ ದಾನಿಶ್‌ಮಂದಖಾನನೇ ಹೀಗೆ ಮೋಸಕ್ಕೊಳಗಾಗಿರಲು ಇನ್ನುಳಿದವರ ಪಾಡೇನು ?

ಹೀಗೆ ಬಹುತರವಾಗಿ ತನ್ನ ಪಕ್ಷವು ಸಜ್ಜಾಗುತ್ತ ನಡೆದಿರುವದನ್ನು ಕಂಡು ಔರಂಗಜೇಬನು ಸಮಾಧಾನವನ್ನು ತಾಳಿ, ತಾನಿನ್ನು ದೌಲತಾಬಾದಿಗೆ ಹೋದರೆ ಅಡ್ಡಿ ಇಲ್ಲವೆಂದು ಚಿಂತಿಸಿದನು. ತಾನಿನ್ನು ಬೇಗನೆ ದಕ್ಷಿಣಕ್ಕೆ ತೆರಳುವವನಾಗಿರುವದರಿಂದ, ತನ್ನ ಪಕ್ಷಾಭಿಮಾನಿಗಳನ್ನೆಲ್ಲ ಒಂದು ದಿನ ಒತ್ತಟ್ಟಿಗೆ ಕೂಡಿಸಿ, ಅವರಿಂದ ಆಣೆ ಪ್ರಮಾಣಗಳನ್ನು ಮಾಡಿಸಿಕೊಳ್ಳುವ ಉದ್ದೇಶದಿಂದ, ಔರಂಗಜೇಬನು ಅವರೆಲ್ಲರನ್ನು ತನ್ನ ಮನೆಗೆ ಭೋಜನಕ್ಕೆ ಕರೆದನು. ನವಾಬ ಶಾಇಸ್ತೆಖಾನ, ಬಕ್ಷಿ ದಾನಿಶ್‌ಮಂದಖಾನ, ಸರ ಲಷ್ಕರ ಕಲಿಲುಲ್ಲಾಖಾನ, ಸರದಾರ ಮಸಜಿದ್‌ಮಿಯಾ, ಸರದಾರ ದಿಲೇಲದೌಲತ್ ಬಹದೂರ ಮುಂತಾದ ಮಹಾನ್ ಮಹಾನ್ ಪ್ರಭೃತಿಗಳೆಲ್ಲರೂ ನೆರೆದರು. ಅಂಗಾಲಿನಿಂದ ನಡುನೆತ್ತಿಯ ವರೆಗೆ ಫಕೀರನಿಗೆ ಉಚಿತವಾದ ಪೋಷಾಕು ಮಾಡಿಕೊಂಡು, ಮೇಲೆ ಹಸುರು ಶಾಲು ಹೊದ್ದುಕೊಂಡು ಬಂದು ಔರಂಗಜೇಬನು ನೆರೆದ ಸರದಾರರಿಗೆಲ್ಲ ಲೀನತೆಯಿಂದ ಪ್ರಣಾಮ ಮಾಡಿ, ಮಂದಹಾಸಗೈದು ಮೃದುನುಡಿಗಳಿಂದ ಅವರಿಗೆ ಸ್ವಾಗತವನ್ನು ಮಾಡಿ, ಉಚಿತವಾದ ಆಸನಗಳಲ್ಲಿ ಅವರಿಗೆ ಕುಳ್ಳಿರ ಹೇಳಿ ತಾನೂ ಕುಳಿತುಕೊಂಡನು.

ಆಗ ದಾನಿಶ್‌ಮಂದಖಾನನೆದ್ದು ನಿಂತು "ಮಹನೀಯರೇ, ಸರ್ವಸಾಕ್ಷಿಮಾನ್ ಪ್ರಭುವಾದ ಪರಮಾತ್ಮನ ಪ್ರತಿನಿಧಿಗಳಾದ ಮಹಮದ ಪಯಗಂಬರರ ಪ್ರೀತ್ಯಾಸ್ಪದರಾದ ಬಾಬರಶಹಾ ಬಾದಶಹರು ಒಳ್ಳೇ ಸಾಹಸದಿಂದಲೂ ಧರ್ಮನಿಷ್ಠೆಯಿಂದಲೂ ಈ ದಿಲ್ಲೀ ಸಾಮ್ರಾಜ್ಯವನ್ನು ಸಂಪಾದಿಸಿ, ಇಸ್ಲಾಮೀ ಧರ್ಮವು ಈ ಭೂಲೋಕದಲ್ಲೆಲ್ಲ ಹಬ್ಬಿಕೊಳ್ಳುವಂತೆ ಏರ್ಪಾಡು ಮಾಡಿ ಹೋದರು. ಅವರ ತರುವಾಯದಲ್ಲಿ ಪುಣ್ಯಪ್ರತಾಪಿಗಳಾದ ಅಕಬರ ಬಾದಶಹರು ಕಾಫರರಾದ ಹಿಂದೂ ಜನ-

ರನ್ನು ವಂಚಿಸುವದಕ್ಕಾಗಿ ಸಕಲ ಧರ್ಮಗಳೂ ಒಂದೇ ತತ್ವವನ್ನು ಪ್ರತಿಪಾದಿಸುತ್ತವೆಂತಲೂ, ಪ್ರಜರು ಯಥೇಚ್ಛವಾಗಿ ತಮ್ಮ ತಮ್ಮ ಪಂಥಗಳಲ್ಲಿ ನಡಕೊಳ್ಳಲು ಅಷ್ಟೇ ಇಲ್ಲವೆಂತಲೂ ಹೇಳಿದ್ದಲ್ಲದೆ ತಾವೂ ಹಿಂದೂ ಜನರ ಧರ್ಮದಂತೆ ನಡೆದಂತೆ ನಟಿಸಿ, ಆ ಜನರಿಗೆ ಇಸ್ಲಾಮೀ ಧರ್ಮದ ತತ್ವಗಳನ್ನು ತಿಳಿಸಿಕೊಟ್ಟದ್ದರಿಂದ, ಆ ದುರ್ಮತಿಗಳು ಮೆಲ್ಲ ಮೆಲ್ಲನೆ ಸತ್ಯಧರ್ಮದ ಅಭಿನಿವೇಶನವನ್ನು ಹೊಂದಿದರು. ಉಚ್ಚ ಕುಲದ ಅನೇಕ ಹಿಂದೂ ಸ್ತ್ರೀಯರನ್ನು ಅಕಬರ ಬಾದಶಹರು ತಮ್ಮ ಅಂತಃಪುರದಲ್ಲಿ ತೆಗೆದುಕೊಂಡು ಅವರ ಮನೆತನದವರೊಡನೆ ಆಪ್ತರಾಗಿ ವರ್ತಿಸಿದರು. ಹೀಗಾದ್ದರಿಂದ ಬರಬರುತ್ತ ಕುಲೀನರಾದ ಬ್ರಾಹ್ಮಣರು ಕೂಡ ದೀನ್ ಇಲಾಹಿ ಪಂಥಕ್ಕೆ ಸೇರಿದರು. ಆ ದೀನ್ ಇಲಾಹಿ ಪಂಥ ವೆಂದರೆ, ಇಸ್ಲಾಮೀ ಧರ್ಮದ ಸೋಪಾನವೇ ಅಲ್ಲವೆ? ಅನೇಕ ಜನ ಕರ್ಮನಿಷ್ಠರಾದ ಹಿಂದೂ ಜನರು ಬಾದಶಹರೊಡನೆ ಹಾಲು ಹಣ್ಣು ಗಳನ್ನು ಸೇವಿಸಿದರು. ಕೆಲವರು ಅವರ ಪಂತಿಯಲ್ಲಿ ಕುಳಿತು ಭೋಜನ ಮಾಡಿದರು. ಹೀಗಾಗಿ ಅಕಬರಶಹರಿಂದ ಮುಸಲ್ಮಾನೀ ಧರ್ಮವು ಅಭಿವೃದ್ಧಿಯನ್ನೇ ಹೊಂದಿತಲ್ಲದೆ ಅದಕ್ಕೆ ಗ್ಲಾನಿ ಬರಲಿಲ್ಲ. ಅಧಿಕಾರ ಗಳ ಆಸೆಗಾಗಲಿ, ಜಾಗೀರಗಳ ಪ್ರಾಪ್ತಿಯ ವ್ಯಾಸಕ್ಕಾಗಲಿ, ದೊಡ್ಡ ವರ ಶರೀರಸಂಬಂಧದ ಮರ್ಯಾದೆಗಾಗಲಿ ಅನೇಕ ಹಿಂದೂ ಜನರು ಬಹಿರಂಗವಾಗಿ ಮುಸಲ್ಮಾನರಾದರು.

ಆದರೆ ಕಳೆದ ಐವತ್ತು ವರ್ಷಗಳಲ್ಲಿ ಮುಸಲ್ಮಾನರು ವಿಷಯ ಲಂಪಟರಾಗಿ ಧರ್ಮದ ಎಚ್ಚರವಿಲ್ಲದೆ ಸ್ವೇಚ್ಛಾಚಾರಿಗಳಾಗಿರುವರು. ಮೌಲ್ವೀ, ಪೀರಜಾದೆ, ಮುಂತಾದ ಆದ್ಯ ಮುಸಲ್ಮಾನರಲ್ಲಿ ಕೂಡ ಧರ್ಮಾಚರಣದ ಗಂಧವಿಲ್ಲದಂತಾಗಿದೆ. ಇನ್ನು ಮುಂದೆ ನಮ್ಮ ಧರ್ಮಕ್ಕೆ ಹ್ರಾಸಕಾಲವು ಪ್ರಾಪ್ತವಾಗುವದೋ ಎಂಬ ಚಿಂತೆಯಲ್ಲಿ ನಾವು ಮುಳುಗಿದ್ದೆವು. ಆದರೆ ನಮ್ಮೆಲ್ಲರ ಪೂರ್ವಪುಣ್ಯದ ಬಲದಿಂದಲೇ ಪರಮಾತ್ಮನು ಕೃಪಾವಂತನಾಗಿ ಇಲ್ಲಿ ವಿರಾಜಮಾನರಾಗಿರುವ ಈ ತರುಣರಾದ ಸತ್ಪುರುಷರನ್ನು (ಔರಂಗಜೇಬನನ್ನು) ದಿಲ್ಲಿಯ ಚಕ್ರ ವರ್ತಿಯ ಹೊಟ್ಟೆಯಲ್ಲಿ ಹುಟ್ಟಿಸಿದನು. ಇವರಿಂದಲೇ ನಮ್ಮ ಧರ್ಮದ

ಉದ್ಧರಣವಾಗತಕ್ಕದ್ದು. ನೋಡಿದಿರಾ! ಅಷ್ಟೈಶ್ವರ್ಯಗಳ ಭೋಗಕ್ಕೆ ಉಚಿತರಾದ ನಮ್ಮ ಸುಲ್ತಾನ್ ಔರಂಗಜೇಬರು ಪ್ರಪಂಚ ಮಿಥ್ಯಾತ್ವವನ್ನರಿತವರಾಗಿ ಸಾತ್ವಿಕವಾದ ಫಕೀರ ವೃತ್ತಿಯನ್ನು ಕೈಕೊಂಡಿರುವರು! ಇವರಿಗೆ ಸ್ವಾರ್ಥವೆಂಬುದು ತಿಲಮಾತ್ರವೂ ಇಲ್ಲ. ಇವರು ಕುರಾಣ ಪಾರಾಯಣ ಪರಾಯಣರಾಗಿರುವದಲ್ಲದೆ ಒಳ್ಳೇ ಬುದ್ಧಿವಂತರೂ, ರಾಜಕಾರಣಪಟುಗಳೂ, ಉದಾರರೂ, ಶೂರರೂ ಆಗಿರುವರು. ಈಗಿನ ಧರ್ಮಗ್ಲಾನಿಯ ಸಮಯದಲ್ಲಿ ಈ ಮಹಾತ್ಮರೇ ಸಿಂಹಾಸನಾರೂಢರಾದರೆ ನಮ್ಮೆಲ್ಲರಿಗೆ ತರಣೋಪಾಯವು. ಅದಕ್ಕಾಗಿ ನಾನು ತಮ್ಮೆಲ್ಲರಿಗೆ ವಿನಯದಿಂದ ಪ್ರಾರ್ಥಿಸುವದೇನೆಂದರೆ, ತಾವೆಲ್ಲರೂ ಒಕ್ಕಟ್ಟಾಗಿ ಈ ಧರ್ಮಮೂರ್ತಿಗಳಾದ ರಾಜಪುತ್ರರನ್ನು ಸರ್ವ ಪ್ರಯತ್ನಗಳಿಂದ ದಿಲ್ಲಿಯ ಚಕ್ರವರ್ತಿಗಳನ್ನಾಗಿ ಮಾಡತಕ್ಕದ್ದು ಅವಶ್ಯವಾದ ಮಾತು. ಈ ಕಾರ್ಯದಲ್ಲಿ ನಮ್ಮ ಧನಕನಕಗಳೂ ಪ್ರಾಣಗಳೂ ವೆಚ್ಚವಾಗಿ ಹೋದರೂ ಅಡ್ಡಿಯಿಲ್ಲ." ಎಂದು ಹೇಳಿದನು.

ಇದುವರೆಗೆ ದಾನಿಶ್‌ಮಂದಖಾನನಾಡಿದ ಯಾವತ್ತೂ ಮಾತುಗಳನ್ನು ಏಕಾಗ್ರಚಿತ್ತನಾಗಿ ಕೇಳುತ್ತಿದ್ದರೂ ಔರಂಗಜೇಬನು ಒಳ್ಳೇ ದಂಭದಿಂದ ಗಂಭೀರವಾದ ಮುಖಮುದ್ರೆಯನ್ನು ತಾಳಿ, ತನ್ನ ಕೈಯಲ್ಲಿ ತೆರೆದಿಟ್ಟ ಕುರಾಣದ ಪುಸ್ತಕದಲ್ಲಿಯೇ ದೃಷ್ಟಿಯನ್ನಿಟ್ಟವನಾಗಿ ಕುಳಿತಿದ್ದನು. ದಾನಿಶ್‌ಮಂದನ ಮಾತು ಮುಗಿದ ಬಳಿಕ ಔರಂಗಜೇಬನು ವಿನೀತನಂತೆ ಎದ್ದುನಿಂತು "ಯಾ ಇಲಾಹೀ ಇಲ್ ಇಲ್ಲಾ; ಮಹಮ್ಮದ ರಸೂಲಿಲ್ಲಾ:!" ಎಂದು ಉದ್ಗಾರ ತೆಗೆದು ಹೀಗೆ ಮಾತಾಡಿದರು:

"ಮೆಹರ್ಬಾನರೆ, ದಾನಿಶ್‌ಮಂದಖಾನರು ಜ್ಞಾನಿಗಳ ಶಿರೋಮಣಿಗಳು! ಅವರ ಭಾಷಣವಾದ ಬಳಿಕ ನಾನು ಮಾತಾಡುವದೆಂದರೆ, ಸೂರ್ಯನ ಮುಂದೆ ಕರದೀಪವನ್ನು ಹಿಡಿದಂತೆ ಕಾಣಬಹುದು. ಆದರೂ ಈ ಸಮಯದಲ್ಲಿ ನಾನು ನಾಲ್ಕು ಮಾತುಗಳನ್ನಾಡದಿರುವದು ಉಚಿತವಲ್ಲ. ಸರದಾರ ದಾನಿಶ್‌ಮಂದಖಾನ ಬಕ್ಷೀಸಾಹೇಬರು ಈ ಪಾಪಿಯನ್ನು ಬಹುಪರಿಯಾಗಿ ಕೊಂಡಾಡಿದರು. ಆದರೆ ಹೇಳಿಕೊಳ್ಳುವಂಥ ಗುಣಗಳ ಲೇಶ ಕೂಡ ನನ್ನಲ್ಲಿ ಇಲ್ಲ. ನೀವೆಲ್ಲರೂ ನನ್ನನ್ನು ದಿಲ್ಲಿಯ

ಮಯೂರಾಸನದ ಮೇಲೆ ಕುಳ್ಳಿರಿಸಬೇಕೆನ್ನುವಿರಿ. ಆದರೆ ಆ ವೈಭವವು ನನ್ನಂಥ ಪಾಮರನಿಗೇಕೆ ಬೇಕು? ಜನ್ಮಾಂತರದ ಪಾಪಗಳನು ತೊಳೆದುಕೊಳ್ಳುವದಕ್ಕಾಗಿ ನಾನು ದರವೇಶಿಗಳ ಶಿಷ್ಯನಾಗಿ ಅಲ್ಲಾ! ಅಲ್ಲಾ!! ಎಂದು ಭಗವನ್ನಾಮಗರ್ಜನೆಯನ್ನು ಮಾಡುತ್ತ ಮಕ್ಕಾ ಮದೀನೆಗಳ ಪ್ರದೇಶದಲ್ಲಿ ಅಹರ್ನಿಶವಾಗಿ ಸಂಚರಿಸಬೇಕೆನ್ನುವೆನು. ನಾನೀಗ ದಕ್ಷಿಣದ ಸುಭೇದಾರನಾಗಿರುವದಾದರೂ ಪ್ರೌಢಿಮೆಯನು ಮೆರಿಸುವದಕ್ಕಲ್ಲ; ಕೇವಲವಾಗಿ ಬಾದಶಹರ ಅನುಲ್ಲಂಘನೀಯವಾದ ಆಜ್ಞೆಯನ್ನು ಮನ್ನಿಸುವದಕ್ಕಾಗಿಯೇ! ಪ್ರಜರ ಕಷ್ಟಾರ್ಜಿತವಾದ ಧನವನ್ನು ಅಪಹರಿಸಿ, ನಾವು ಸುಖೋಪಭೋಗಗಳಲ್ಲಿ ಮೆರೆದಾಡುವದು ಪಾಪವೆಂದು ತಿಳಿದು, ನಾನು ಕುರಾಣದ ಪ್ರತಿಗಳನ್ನು ಕೈಯಿಂದ ಬರೆದು ಅವುಗಳನ್ನು ಮಾರಿ ಬಂದ ಹಣದಿಂದ ನನ್ನ ಹೊಟ್ಟೆ ಬಟ್ಟೆಗಳ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಿರುವೆನೆಂಬದು ನಿಮ್ಮೆಲ್ಲರಿಗೆ ಗೊತ್ತೇ ಇದೆ. ಇನ್ನು, ದಾನಿಶ್‌ಮಂದಖಾನರು ಹೇಳುವಂತೆ ನಮ್ಮ ಧರ್ಮದ ಗ್ಲಾನಿಯಾಗುತ್ತ ನಡೆದಿರುವದು ಸತ್ಯ! ಇಂಥ ಸಮಯದಲ್ಲಿ ನಮ್ಮ ಅಣ್ಣಂದಿರಾದ ದಾರಾ ಸುಲ್ತಾನರವರು ದಿಲ್ಲಿಯ ಬಾದಶಹರಾದರೆ ನಮ್ಮ ಪವಿತ್ರವಾದ ಇಸ್ಲಾಮೀ ಧರ್ಮದ ಕಥೆಯೇ ಮುಗಿದಂತಾಯಿತೆಂದು ತಿಳಿಯಬೇಕು!! ಕಾಫರರಾದ ಹಿಂದೂ ಜನರ ಅಭಿಮಾನಿಯಾದ ದಾರಾ ಶಹರು ದಿಲ್ಲಿಯ ಸಿಂಹಾಸನವನ್ನು ದೂಷಿಸಲಾಗದೆಂದು ನೀವೆಲ್ಲರೂ ಅಭಿಪ್ರಾಯವನ್ನು ಹೊಂದಿರುವದು ಯೋಗ್ಯವೇ! ನಿಮಗೆ ಇಷ್ಟವಾಗಿರುವ ಈ ಸತ್ಕಾರ್ಯಕ್ಕೆ ನಾನು ನೆರವಾಗದಿದ್ದರೆ ನಾನೆಂಥ ಮುಸಲ್ಮಾನನು? ನಾನು ಕಾಯಾ-ವಾಚಾ-ಮನಸಾ ನಿಮಗೆ ಅನುಕೂಲನಾಗಿ ನಡೆದು ದರಾಯುಸನನ್ನು ಹಿಂದೆಳೆದು ನನ್ನ ಪ್ರಿಯ ಬಂಧುವಾದ ಸುಜಾ ಸುಲ್ತಾನನನ್ನಾಗಲಿ ನನ್ನ ಪ್ರಾಣಪದಕನಾದ ಮುರಾದ ಬಕ್ಷರನ್ನಾಗಲಿ, ದಿಲ್ಲಿಯ ಸಿಂಹಾಸನದ ಮೇಲೆ ಕುಳ್ಳಿರಿಸಿ, ಬಳಿಕ ಸಂತೋಷದಿಂದ ನಾನು ಮಕ್ಕಾಕ್ಷೇತ್ರದಲ್ಲಿರುವ ಪ್ರಭುವಿನ ನಿವಾಸಸ್ಥಾನವಾದ ಕಾಬಾ ಮಂದಿರ ಬಳಿಯಲ್ಲಿದ್ದು, ಪ್ರಭುಸೇವೆಯಲ್ಲಿ ಈ ಕುತ್ಸಿತವಾದ ಕಳೇವರವನ್ನು ಸವೆಸುವೆನು. ಅಲಹಮ್‌ದುಲಿಲ್ಲಾ! ಅಲಹಮ್‌ದುಲಿಲ್ಲಾ!!"

"ಶಾಅಬ್ಬಾಸ್! ಶಅಬ್ಬಾಸ್!! ಕೇಳಿದಿರಾ ನವಾಬ ಶಾಇಸ್ತೇ ಖಾನ ಸಾಹೇಬರೆ! ಈ ನರಪುಂಗವನ ಮುಖದಿಂದ ಹೊರಟಿರುವ ವಚನ ನಿರ್ಝರದ ಘೋಷವು ಹೇಗೆ ಶ್ರವಣರುಚಿರವಾಗಿದೆ ನೋಡಿರಿ! ಇನ್ನು ನಾವೆಲ್ಲರೂ ಶಪಥಪೂರ್ವಕವಾಗಿ ಸುಲ್ತಾನ ಔರಂಗಜೇಬರ ಪಕ್ಷವನ್ನೇ ವಹಿಸುವೆವೆಂದು ಮಾತು ಕೊಡತಕ್ಕದ್ದು." ಎಂದು ದಾನಿಶ್ ಮಂದಖಾನರು ಹೇಳಿದರು.

"ನೀವು ಹೇಳುವದೆಲ್ಲ ಸರಿ. ಆದರೆ ರಾಜಪುತ್ರರೆಲ್ಲರೂ ನನ್ನ ಅಕ್ಕನ ಮಕ್ಕಳು. ನನ್ನಂಥವನು ಬಹಿರಂಗವಾಗಿ ಯಾರ ಪಕ್ಷವನ್ನಾದರೂ ವಹಿಸುವದು ಅಪ್ರಶಸ್ತವಾದ ಮಾತು. ರಾಜನಿಷ್ಠೆಯನ್ನು ಅನುಲಕ್ಷಿಸಿದರೆ ಬಾದಶಹರ ಸಂಕೇತವನ್ನು ಶಿರಸಾವಹಿಸಿ ಯುವರಾಜನಾದ ದಾರಾಶಹನ ಪಕ್ಷವನ್ನೇ ನಾನು ಸ್ವೀಕರಿಸತಕ್ಕದ್ದು; ಇತ್ತ ಧರ್ಮವನ್ನು ನೋಡಿದರೆ, ನನಗೆ ಔರಂಗಜೇಬನ ಪಕ್ಷವೇ ಶ್ರೇಯಸ್ಕರವಾದದ್ದು. ಇತ್ತ ಬಾವಿ, ಅತ್ತ ಕೆರೆ!" ಎಂದು ನುಡಿದು ಶಾಇಸ್ತೇಖಾನನು ಕೆಳಗೆ ಮೋರೆ ಮಾಡಿಕೊಂಡು ಕುಳಿತನು.

ಈ ಮಾತು ಕೇಳಿ ತೆರೆಯಲ್ಲಿ ಕುಳಿತಿದ್ದ ರೋಶನಾರೆಯು "ನಮ್ಮ ಶಾಇಸ್ತೇಖಾನ ಮಾವನವರಿಗೆ ಬಾವಿ-ಕೆರೆಗಳ ಭೀತಿಗಿಂತಲೂ ಮುಖ್ಯ ವಜೀರನ ಅಧಿಕಾರದ ಅಪೇಕ್ಷೆಯು ಅಧಿಕವಾಗಿರುವಂತೆ ತೋರುತ್ತದೆ. ಮಾವನವರೆ, ದರಾಯುಸ್ ಬಾದಶಹನ ಆಳಿಕೆಯಲ್ಲಿ ವಜೀರನಾಗ ತಕ್ಕವನು ಅವಶ್ಯವಾಗಿ ಪಂಡಿತನಾಗಿರತಕ್ಕದೆಂಬದನ್ನು ಕಟಾರಿಯು ಒಕ್ಕಲುಗಳಾದ ತಾವು ಸರ್ವಥಾ ಮರೆಯಲಾಗದು. ಸ್ವಾರ್ಥಪರವಾದ ರಾಜನಿಷ್ಠೆಯನ್ನು ನೀವು ಆಸ್ಥಾನದಲ್ಲಿರಿಸಿರುವಿರಿ ಕಂಡಿರಾ!" ಎಂದು ಅಕ್ಕಸದಿಂದ ನುಡಿದಳು.

"ಏನೆಂದಿ ರೋಶನಾರೆ?" ಎಂದು ಶಾಇಸ್ತೆಖಾನನು ಕ್ರುದ್ಧನಾಗಿ ಗರ್ಜಿಸಿ ಕೇಳಿದನು.

"ಮಾತುಲರೆ, ಹಾಗೆ ಕೋಪಿಸಿಕೊಳ್ಳಬೇಡಿರಿ. ದಾರಾನ ಆಳಿಕೆಯಲ್ಲಿ ತಮ್ಮಂಥ ರಣಧುರಂಧರರಿಗೆ ವಜೀರನ ಅಧಿಕಾರವು ಸಿಕ್ಕದೆಂಬದೇ ನನ್ನ ಅರ್ಥವು." ಎಂದು ರೋಶನಾರೆಯು ಅದೇ ಅರ್ಥವನ್ನು

ಪರ್ಯಾಯದಿಂದ ಹೇಳಿದಳು.

"ಯಾಕೆ ನವಾಬ ಸಾಹೇಬ! ನಿಮಗೆ ವಜೀರನ ಪದವಿಯೇ ಬೇಕಾಗಿದ್ದರೆ ನಾನದನ್ನು ನಿಮಗೆ ಔರಂಗಜೇಬರ ಕಡೆಯಿಂದ ನಿಶ್ಚಯವಾಗಿ ಕೊಡಿಸುವೆನು. ನಿಮ್ಮಂಥ ವಜೀರರು ಹುಡುಕಿದರೂ ಸಿಕ್ಕುವದುಂಟೆ?" ಎಂದು ಸರಲಭಾವದವನಾದ ದಾನಿಶ್ ಮುಂದಖಾನನು ನುಡಿದನು.

ಈ ಮಾತು ಕೇಳಿ ಶಾಇಸ್ತೇಖಾನನು ದಿಗಿಲುಬಡಿದವನಂತಾಗಿ "ಎಲ ಎಲಾ! ಬಕ್ಷೀ ಸಾಹೇಬ. ನಾನು ವಜೀರನ ಪದವಿಗಾಗಿ ಕಾಲು ಮೊಸೆಯುತ್ತಿರುವೆನೆಂದು ನೀವೆಲ್ಲರೂ ಗ್ರಹೀತವಾಗಿ ಕಟ್ಟಿಕೊಂಡು ಹೀಗೆ ಮಾತಾಡುವಿರೇನು?" ಎಂದು ಹುಚ್ಚುನಗೆ ನಕ್ಕು ಕೇಳಿದನು.

"ನವಾಬ ಸಾಹೇಬ, ನೀವು ಕೇಳಿದರೂ ಚಿಂತೆಯಿಲ್ಲ; ಕೇಳದಿದ್ದರೂ ಚಿಂತೆಯಿಲ್ಲ. ವಜೀರನ ಅಧಿಕಾರವನ್ನು ನಾವು ನಿಮ್ಮ ಕೊರಳಿಗೇ ಹಾಕತಕ್ಕವರು. ಮುರಾದನು ಬಾದಶಹನಾಗಲೊಲ್ಲನೇಕೆ, ಸುಜಾ ಸಾಹೇಬನೇಕಾಗಲೊಲ್ಲ !!" ಎಂದು ಔರಂಗಜೇಬನು ಹೇಳಿದನು.

"ಸುಲ್ತಾನ ಔರಂಗಜೇಬ, ನೀವು ಕೂಡಾ ರೋಶನಾರೆಯ ಮರ್ಮಭೇದಕವಾದ ಮಾತನ್ನು ಎತ್ತಿ ಹಿಡಿದಿರಾ? ನೀವೆಲ್ಲರೂ ಕೂಡಿ ನನ್ನನ್ನು ಹೀಗೆ ಮುರಿಗೆ ಹಾಕಿದಿರಿ. ಆಗಲಿ, ನಾನು ನಿಮ್ಮ ಪಕ್ಷಕ್ಕೆ ಸೇರುವೆನೆಂದು ವಚನ ಕೊಡುವೆನು. ಆಯಿತೋ ಇಲ್ಲವೋ?"

ಆಗ, ತೆರೆಯಲ್ಲಿ ಕುಳಿತ ರೋಶನಾರೆಯು ದಾನಿಶ್‌ಮುಂದಖಾನನನ್ನು ಕುರಿತು "ಬಕ್ಷೀಸಾಹೇಬ, ನವಾಬ ಶಾಇಸ್ತೇಖಾನರ ಕೈಯಲ್ಲಿ ಕುರಾಣವನ್ನು ಕೊಡಿರಿ. ಅವರು ಅದನ್ನು ಹಿಡುಕೊಂಡು ಶಪಥ ಮಾಡಲಿ!" ಎಂದು ಉದ್ರೇಕದಿಂದ ಹೇಳಿದಳು.

"ಪ್ರಗಲ್ಭೆ, ನೀನು ಗಂಡಸಾಗಿ ಹುಟ್ಟಿದ್ದರೆ ಶಹಾಜಹಾನ್ ಬಾದಶಹರನ್ನು ಹಳ್ಳಕ್ಕೆ ಹಾಕಿ ನೀನೇ ಬಾದಶಹನಾಗಿ ಹಳೆ ಮಾತಾಗುತ್ತಿತ್ತು!" ಎಂದು ಮಾವನು ಸೊಸೆಯ ಅಪಹಾಸ ಮಾಡಿ ನಕ್ಕು ಕುರಾಣವನ್ನು ಬಡಿದು ದಾನಿಶ್‌ಮುಂದನು ಹೇಳಿದ ಮೇರಿಗೆ ಆಣೆ ಮಾಡಿದನು.

" ಇನ್ನಾರು ? ಕಲಿಲುಲ್ಲಾ ಖಾನರೆ, ನಿಮ್ಮ ಅಭಿಪ್ರಾಯವೇನು ! " ಎಂದು ಔರಂಗಜೇಬನು ಕೇಳಿದನು.

ಕಲಿಲುಲ್ಲಾಖಾನನು ಕೂಂಚ ಸಂಕೋಚಗೊಂಡು "ನನ್ನದೇನು? ಹುಜೂರ್ ನಾನು ತಮ್ಮ ಪಕ್ಷದವನೇ ಅಲ್ಲವೆ?" ಎಂದು ನುಡಿದನು.

" ಹಾಗಾದರೆ ನಾನು ಹೇಳಿದ ಮೇರೆಗೆ ಶಪಥ ಮಾಡಿರಿ! " ಎಂದು ದಾನಿಶ್‌ಮಂದಖಾನನು ಹೇಳಿದನು.

"ಬಕ್ಷೀಸಾಹೇಬ, ಬಾದಶಹರು ನನಗೆ ಲಷ್ಕರೀ ಅಧಿಕಾರವನ್ನು ಕೊಟ್ಟು, ಈ ಖಡ್ಗವನ್ನು ನನಗೆ ದಯಪಾಲಿಸಿದಾಗ, ನಾನು ಏಕನಿಷ್ಠೆಯಿಂದ ರಾಜಸೇವೆಯನ್ನು ಮಾಡುವೆನೆಂದು ಆಣೆ ಮಾಡಿರುವದು ತಮಗೆ ಗೊತ್ತೇ ಇದೆ. ಇನ್ನು ನಾನು ಬಾದಶಹರ ಇಚ್ಛೆಯ ವಿರುದ್ಧವಾಗಿ ಹೇಗೆ ನಡಕೊಳ್ಳಲಿ? ಅಂತರಂಗದಲ್ಲಿ ನಾನು ನಿಮ್ಮವನೇ."

" ಕಲಿಲುಲ್ಲಾಖಾನ, ನೀವು ನಮ್ಮವರೆಂದು ನಂಬಿರಲು ನೀವು ಹೀಗೆ ಮನಸ್ಸು ತೆಗೆದು ಮಾತಾಡಬಹುದೆ?' ಎಂದು ದೀನನಾದವನಂತೆ ನಟಿಸಿ ಔರಂಗಜೇಬನು ಕೇಳಿದನು.

ಕಲಿಲುಲ್ಲಾಖಾನನು ಔರಂಗಜೇಬನಿಗೆ ತಲೆಬಾಗಿ "ನಾನು ಸುಲ್ತಾನರವರಿಗೆ ಪ್ರತಿಕೂಲನಾಗಿರುವೆನಂತಲ್ಲ. ಆದರೂ ಇಂಥ ಮಹತ್ವದ ಕೆಲಸದಲ್ಲಿ ಪೂರ್ವಾಪರವನ್ನು ವಿಚಾರಿಸಿ ಏನು ಮಾಡುವದನ್ನು ಮಾಡಬೇಕಲ್ಲವೆ? ಜಯಸಿಂಗ, ಜಸವಂತಸಿಂಗ, ಕಾಸಮಖಾನ ಮುಂತಾದ ಸಮರಸಿಂಹರು ದಾರಾಸುಲ್ತಾನರ ಪಕ್ಷದಲ್ಲಿರಲು ನಮ್ಮ ಪಕ್ಷವು ಗೆಲಿಯುವದು ಹೇಗೆ?"ಎಂದು ಹೀನಸತ್ವನಾಗಿ ಚಿಸಗೊಂಡನು.

"ಛೀ! ಹೇಡಿಯೇ! ಅದಕ್ಕಾಗಿಯೇ ದಾರಾಸಾಹೇಬರು ನಿನಗೆ ತಮ್ಮ ಪಾದರಕ್ಷದ ಮೋದಕವನ್ನು ತಿನ್ನಲಿಕ್ಕೆ ಕೊಟ್ಟರು." ಎಂದು ರೋಶನಾರೆಯು ತನ್ನ ವೀಣಾರವದ ಕಂಠವು ಹರಿಯುವಂತೆ ಗರ್ಜಿಸಿ ನುಡಿದಳು.

"ರೋಶನ್, ಎಂಥ ಅಪ್ರಶಸ್ತವಾದ ನುಡಿಯಾಡಿದಿ! ನೀನು ಹೇಳುವ ಕಥೆಯು ನಿಜವಾಗಿದ್ದರೂ ಹಾಗೆ ಬಾಯಿಯಿಂದ ಆಡಿ ತೋರಿಸಬಾರದು ಕಂಡಿಯಾ?" ಎಂದು ಔರಂಗಜೇಬನು ತನ್ನ ತಂಗಿಗೆ ಸಿಟ್ಟು

ಮಾಡಿದನು.

"ಕಲಿಲುಲ್ಲಾ ಖಾನ್, ಇಂಥ ಅಪಮಾನವನ್ನು ತಾಳಿಯೂ ನಿಮಗೆ ದಾರಾಶಹರಲ್ಲಿ ಅಭಿಮಾನವೆ?'' ಎಂದು ಹಕೀಮು ದಾವುದನು ಕೆಣಕಿ ಕೇಳಿದನು.

"ಹಕೀಮರೆ, ದಿಲ್ಲಿಯ ಯುವರಾಜರ ಪಾದರಕ್ಷೆಗಳೆಂದರೆ ಅಂತಿಂತಹವೆ? ಹೂವಿನಂತೆ ಮೃದುವಾಗಿರುವ ಕಿನಖಾಬಿನ ಪಾದರಕ್ಷೆಕ್ಕೆ ಜರತಾರಿಯ ಮಡಾಸು ಇಲ್ಲದಿದ್ದರೆ ಅದರ ಹೊಡೆತವನ್ನು ನಮ್ಮ ಖಾನಸಾಹೇಬರು ಸಹಿಸುತ್ತಿಲೇ ಇದ್ದಿಲ್ಲ.'' ಎಂದು ರೋಶನಾರೆಯು ಮತ್ತೆ ಕುಚೇಷ್ಟೆಗೈದಳು.

ಈ ಮಾತು ಕೇಳಿ ಕಲಿಲುಲ್ಲಾಖಾನನ ಹೊಟ್ಟೆಯಲ್ಲಿ ಕ್ರೋಧಾಗ್ನಿಯು ಪ್ರಜ್ವಲಿಸಿತು. ಅವನು ಆವೇಶದಿಂದ ಥರಥರನೆ ನಡುಗಿ, ಹಲ್ಲು ಕಡಿದು ತನ್ನ ಖಡ್ಗವನ್ನು ಹಿಡಿದು— "ಬೇಗಮ್ ಸಾಹೇಬ, ನೀವು ನನ್ನ ಕಣ್ಣಿಗೆ ಒಳಿತಾಗಿ ಅಂಜನವನ್ನು ತಗಲಿಸಿದಿರಿ. ದುರುಳನಾದ ದಾರಾಶಹನು ಮಾಡಿದ ಅಪಮಾನದ ಸೇಡು ತೀರಿಸಿಕೊಳ್ಳದಿದ್ದರೆ, ನಾನು ಮುಸಲ್ಮಾನರ ಬೀಜಕ್ಕೆ ಹುಟ್ಟಿದವನಲ್ಲ. ಸುಣ್ಣದ ನೀರು ಕುಡಿಸಿದ ಕೋಣನಂತೆ ಆ ಮದಾಂಧನಾದ ಯುವರಾಜನನ್ನು ಓಡಾಡಿಸಿ ಕೊಲ್ಲುವೆನೆಂದು ನಾನು ಕುರಾಣವನ್ನು ಒಡೆದು ಹೇಳುತ್ತೇನೆ." ಎಂದು ಗಡಗಡನೆ ಗರ್ಜಿಸಿ ನುಡಿದನು.

"ಕಲಿಲುಲ್ಲಾಖಾನ, ಶಪಥವನ್ನು ಮಾಡುವದು ಸುಲಭವಾದ ಮಾತು! ಆದರೆ ಅದರಂತೆ ಸಿದ್ಧಾರರದಿಂದ ನಡಕೊಳ್ಳುವದು ದುಸ್ತರವಾಗಿರುವದೆಂಬುದನ್ನು ನೀವು ಚೆನ್ನಾಗಿ ಅರಿತುಕೊಂಡು ಶಪಥ ಮಾಡಿರಿ." ಎಂದು ಔರಂಗಜೇಬನು ಗರುಡನಂತೆ ಉದ್ದವಾಗಿರುವ ತನ್ನ ಮೂಗನ್ನು ಮುರಿದು ನುಡಿದು ನಕ್ಕನು.

"ಯಾ ಅಲ್ಲಾ: ರಹೀಮು! ಹುಜೂರ್, ಈ ದಾಸನು ಮನುಷ್ಯರ ಹಾಲನ್ನೇ ಕುಡಿದು ಬೆಳೆದಿರುವನು. ಖಡ್ಗಧಾರಿಯಾದ ಈ ಕಲಿಲುಲ್ಲಾಖಾನನು ತಾನು ಮಾಡಿದ ಪ್ರತಿಜ್ಞಾಪೂರ್ತಿಗಾಗಿ ಯಮರಾಜನ ಕೂಡ ಹೋರಾಡಲಿಕ್ಕಾದರೂ ಹಿಂದೆಮುಂದೆ ನೋಡುವವನಲ್ಲ!"

"ಇನ್ನೇನು ಸಂಶಯವಿಲ್ಲ. ಕಲೀಲುಲ್ಲಾಖಾನರು ಪ್ರತಿಜ್ಞೆ ಮಾಡಿದ್ದಕ್ಕೆ ಎಂದಿಗೂ ತಪ್ಪಲಿಕ್ಕಿಲ್ಲ." ಎಂದು ಹಕೀಮ ದಾವುದನು ಅಭಿಪ್ರಾಯವನ್ನು ವ್ಯಕ್ತಪಡಿಸಿದನು.

ಆಮೇಲೆ ಉಳಿದವರೆಲ್ಲರೂ ಕುರಾಣವನ್ನು ಒಡೆದು ಪ್ರತಿಜ್ಞೆ ಮಾಡಿದ ಬಳಿಕ ಔರಂಗಜೇಬನು ಎದ್ದು ನಿಂತು— "ಸರದಾರರೆ, ನಮ್ಮ ಸಂಕೇತವು ಬಹುತರವಾಗಿ ಮುಗಿದಂತಾಯಿತು. ಕೇಳಿರಿ! ಇದು ಬಹು ದುಸ್ತರವಾದ ಕೆಲಸವು. ನಾವೆಲ್ಲರೂ ಬಹು ಧೈರ್ಯದಿಂದಲೂ, ಜಾಣಾಕ್ಷತೆಯಿಂದಲೂ, ವಿಶ್ವಾಸದಿಂದಲೂ ನಡೆದು ನಮ್ಮೀ ಮಹತ್ತರ ವಾದ ಕಾರ್ಯವು ಕೊನೆಗಾಣುವ ವರೆಗೆ ನಮ್ಮ ಅಂತರಂಗವನ್ನು ಬಲು ಗೌಪ್ಯವಾಗಿ ಕಾದುಕೊಂಡಿರಬೇಕು! ಯಾರಲ್ಲಿ ಸಾಕಷ್ಟು ಧೈರ್ಯ-ವಿಲ್ಲವೋ ಅವರು ಈಗಲೆ ಹಾಗೆ ಸ್ಪಷ್ಟವಾಗಿ ಒಪ್ಪಿಕೊಂಡು ಮೈದೆಗೆದು ಪಾರಾಗಿ ಹೋಗಬಹುದು. ಹಿಂದಿನಿಂದ ಯಾರಾದರೂ ವಿಶ್ವಾಸಕ್ಕೆ ಅಪಾತ್ರರಾಗಿ ನಡೆದರೆಂಬ ವಾರ್ತಾ ಮಾತ್ರದಿಂದಲೇ ಈ ಔರಂಗಜೇಬನು ಅವರನ್ನೂ ಅವರ ಹೆಂಡರು ಮಕ್ಕಳನ್ನೂ ಕೂಡಿಯೇ ಈ ಖಡ್ಗದಿಂದ ಕನಿಕರವಿಲ್ಲದೆ ಕಡಿದು ಚೂರುಚೂರುಮಾಡಿ ಹಾಕುವನೆಂಬದನ್ನು ನೀವು ಸೆರಗಿಗೆ ಗಂಟುಹಾಕಿಕೊಳ್ಳಿರಿ! ಹೇಗೆ? ಹೇಳಿರಿ!" ಎಂದು ಔರಂಗಜೇಬನು ತನ್ನ ಖಡ್ಗವನ್ನು ಹಿರಿದು ಗುಲಗಂಜಿಯಂತೆ ಕೆಂಪಾ-ಗಿರುವ ತನ್ನ ಕಣ್ಣು ಕಿಸಿದು, ಭೀಕರವಾದ ಮುಖಮುದ್ರೆಯನ್ನು ತಾಳಿ, ಕಠೋರವಾದ ಧ್ವನಿಯಿಂದ ಕೇಳಿದನು.

ಕಪಟಪಟುವೂ, ನಿರ್ಘೃಣನೂ, ದೀರ್ಘದ್ವೇಷಿಯೂ ಆಗಿರುವ ಔರಂಗಜೇಬನು ಹಾಗೆ ಆವೇಶದಿಂದ ಕಣ್ಣುಗಳಲ್ಲಿ ಕಿಡಿಗಳನ್ನು ಕಾರುತ್ತ, ಶಸ್ತ್ರವನ್ನು ನೆವರಿ ಹಿಡಿದು ಎಲ್ಲರ ಮುಖಗಳನ್ನೂ ದಿಟ್ಟಿಸಿ ನೋಡಿ ಪ್ರಶ್ನಮಾಡುವ ಕಾಲಕ್ಕೆ, ಆ ಸಮಯದಲ್ಲಿ ಯಾವನಾದರೂ ವಿಶ್ವಾಸಘಾತಕನು ಇದ್ದದ್ದಾಗಿದ್ದರೆ, ಅವನ ದ್ರೋಹವು ಆಗಲೆ ಎದೆ ಬಿಚ್ಚಿ ಹೊರಬೀಳಬಹುದಾಗಿತ್ತು. ಆದರೆ, ಅಲ್ಲಿ ನೆರೆದವರೆಲ್ಲರೂ ಒಂದಿಲ್ಲ ಒಂದು ಕಾರಣಕ್ಕಾಗಿ ದಾರಾನ ದ್ವೇಷಿಗಳಾಗಿಯೂ ಔರಂಗ-ಜೇಬನ ಪಕ್ಷವನ್ನು ಬೇಕಾಗಿ ಸ್ವೀಕರಿಸಿದವರಾಗಿಯೂ ಇದ್ದುದರಿಂದ

ಅವರ ಮುಖದಲ್ಲಿ ದ್ರೋಹದ ಕುಂದು ಕಂಡುಬರಲಿಲ್ಲ. ಅದನ್ನರಿತು ಔರಂಗಜೇಬನು ಸಮಾಧಾನವನ್ನು ಹೊಂದಿ ತನ್ನ ಕಠೋರವಾದ ಮುಖದಲ್ಲಿ ಮತ್ತೆ ಎಳೆನಗೆಯನ್ನು ತಳೆದು ಸವಿಮಾತಿನ ಸಕ್ಕರೆಯ ಚೀಲವನ್ನು ಬಿಚ್ಚಿದನು.

## ೯

## ಪ್ರೇಮವು ಅಂಧವಾಗಿರುವದು

ಅತಿ ಮನೋಹರವಾಗಿರುವದೊಂದು ರಂಗಮಂದಿರದ ಮಧ್ಯದಲ್ಲಿ ಪರಿಪರಿಯಾಗಿ ಅಲಂಕರಿಸಲ್ಪಟ್ಟದ್ದೊಂದು ಮಹಾ ಮಂಚವಿತ್ತು. ಆ ಮಂಚದ ಮೇಲೆ ಹಂಸತೂಲಿಕೆಯ ದೊಡ್ಡ ಲೇಪು ಹಾಸಿದ್ದು ಆ ಲೇಪಿನ ಮೇಲೆ ಸುಧಾಶುಭ್ರವಾದ ಮೇಲ್ಹಾಸಿಗೆಯಿತ್ತು. ರಂಗಮಂದಿರದ ನಾಲ್ಕು ಮೂಲೆಗಳಲ್ಲಿ ಪ್ರಭಾಮಯವಾದ ನಾಲ್ಕು ತೂಗದೀಪಗಳು ಅಲ್ಲಿಯ ಕತ್ತಲೆಯನ್ನೆಲ್ಲ ಹೊರಗಟ್ಟಿ ಬಿಟ್ಟಿದ್ದವು. ಆ ದಿವ್ಯಜ್ಯೋತಿಯಲ್ಲಿ ರತ್ನಖಚಿತವಾದ ಮಂಚವೂ ಅಲಂಕಾರಾರ್ಥವಾಗಿ ಅಲ್ಲಲ್ಲಿ ತೂಗುಹಾಕಿದ ಬೆಳ್ಳಿಬಂಗಾರಗಳ ಪದಾರ್ಥಗಳೂ ಲಕಲಕನೆ ಹೊಳೆಯುತ್ತಿದ್ದವು. ಆ ದಿವ್ಯವಾದ ಮಂದಿರಕ್ಕೂ ಆ ಸುರಮ್ಯವಾದ ಮಂಚಕ್ಕೂ ಅಲಂಕಾರ ಭೂತಳಾಗಿರುವ ನವಯೌವನೆಯೋರ್ವಳು ಕೈಯಲ್ಲಿ ವೀಣೆಯನ್ನು ತೆಗೆದುಕೊಂಡು "ಬುಲ್ಬುಲೆ ಬರ್ಗೆ ಗುಲೆ ಖುಶರಂಗ ದರ್ಮಿನ್ ಕಾರ ದಾಸ್ತ" ಎಂಬ ಪದವನ್ನು ಬಹು ಮಂಜುಲವಾಗಿ ಹಾಡುತ್ತಿದ್ದಳು. ತನ್ನ ಸುಂದರವಾದ ಅಂಗಗಳಲ್ಲಿ ಬೇಕುಬೇಕಾದಷ್ಟು ರತ್ನಖಚಿತವಾದ ಅಲಂಕಾರಗಳನ್ನಿಟ್ಟು ಉತ್ತಮೋತ್ತಮವಾದ ಜರತಾರಿಯ ವಸ್ತ್ರ ಧರಿಸಿ ಯಥಾಸುಖವಾಗಿ ಆ ಸುಖಾಸನದಲ್ಲಿ ಕುಳಿತು ಹಾಡುತ್ತಿರುವ ಆ ಇಂದುವದನೆಯ ಮುಖದಲ್ಲಿ ಚಿಂತೆಯ ಲೇಶವಾದರೂ ಇದ್ದಿಲ್ಲ.

ಹೀರಾಸುಂದರಿಯ ಪೂರ್ವವೃತ್ತಾಂತವನ್ನು ಇಲ್ಲಿ ಸ್ವಲ್ಪದರಲ್ಲಿ ಹೇಳುತ್ತೇವೆ. ಔರಂಗಜೇಬನು ತನ್ನ ಸೋದರತ್ತೆಯ ಗಂಡನಾದ ಸರದಾರ

ಮುರಶಿದ ಕುಲಿಖಾನನ ಮನೆಗೆ ಕೆಲವೊಂದು ರಾಜಕಾರಣ ನಿಮಿತ್ತವಾಗಿ ಹೋಗಿದ್ದನು. ತನ್ನ ಅಣ್ಣನ ಮಗನು ಅಪರೂಪವಾಗಿ ತನ್ನ ಮನೆಗೆ ಬಂದಿರುವನೆಂಬ ಸಂತೋಷದಿಂದ ಔರಂಗಜೇಬನ ಸೋದರತ್ತೆಯು ಒಳ್ಳೇ ವಿಜೃಂಭಣೆಯಿಂದ ಭೋಜನಸಮಾರಂಭವನ್ನು ಮಾಡಿಸಿದ್ದಳು. ಮನೆಯ ಮುಖ್ಯನಾದ ಮುರಶಿದ್ ಕುಲೀಖಾನನಿಂದ ದಾಸದಾಸಿಯರ ವರೆಗೆ ಎಲ್ಲರೂ ಒಳ್ಳೇ ಉತ್ಸಾಹದಿಂದ ಓಡಾಡಿ ಸಮಾರಂಭದ ಏರ್ಪಾಡು ಮಾಡುವದರಲ್ಲಿ ನಿಮಗ್ನರಾಗಿದ್ದರು.

ಔರಂಗಜೇಬನೂ ಅವನ ಅತ್ತೆಯೂ ಮನೆಯ ಹಿಂಭಾಗದಲ್ಲಿರುವ ಪುಷ್ಪೋದ್ಯಾನದಲ್ಲಿ ಕುಳಿತುಕೊಂಡು ಮಕರಂದಸಂಭೃತವಾದ ತಂಗಾಳಿಯನ್ನು ಸೇವಿಸುತ್ತ ಅಲ್ಲಿಯ ರಮಣೀಯತೆಯನ್ನು ನೋಡುತ್ತ ಕುಳಿತಿದ್ದರು. ಅಂಥ ಸುಸಮಯದಲ್ಲಿ ಸಕಲವಾದ ಸುನಾದಗಳಲ್ಲಿ ಶ್ರೇಷ್ಠವಾದ ಮಂಜೀರಗಳ ನಾದವು ಸಮೀಪದಲ್ಲಿಯೇ ಕೇಳಬರುತ್ತಿರುವಂತೆ ಔರಂಗಜೇಬನಿಗೆ ಕಂಡಿತು. ಕೆಲಜನ ವಿಲಾಸವತಿಯರಾದ ನವತರುಣಿಯರು ಲೀಲೆಯಿಂದ ಆ ಉಪವನದೆಡೆಯಲ್ಲಿ ವಿಹರಿಸುತ್ತಿದ್ದರು. ಕೆಲವರು ಬಹು ಮಂಜುಲವಾಗಿ ಕಳ್ಳದನಿಯಿಂದ ಹಾಡುತ್ತಿದ್ದರು. ಕೆಲವರು ಅರಳು-ಮೊಗ್ಗೆಗಳನ್ನು ತೆಗೆದು ಮಾಲೆಗಳನ್ನು ಕಟ್ಟುತ್ತಿದ್ದರು. ಉರ್ವಶೀ ಸಮಾನಳಾದ ಚಾರ್ವಾಂಗಿಯೋರ್ವಳು ಉಲ್ಲಾಸದಿಂದೆ ಛಿಲ್ಲನೆ ಹಾರಿ ಮಾವಿನ ಕೊಂಬೆಯಲ್ಲಿಯ ಕಾಯಿಯನ್ನು ತೆಗೆಯಲೆಸಗಿದ್ದಳು. ಅಂಥ ಸಾಹಸದಲ್ಲಿ ತೊಡಗಿದ್ದ ಆ ಕಾಮಿನಿಯ ಸ್ತನಾಂಶುಕವು ಗಾಳಿಗೆ ಹಾರಿ ಕೆಳಗೆ ಬಿದ್ದಿತು. ಹಾಗೆ ನೆಲಕ್ಕೆ ಬೀಳುತ್ತಿರುವ ತನ್ನ ಉತ್ತರೀಯವನ್ನು ಎತ್ತಿಕೊಳ್ಳಲು ಹೋದ ತರುಣಿಯ ದೃಷ್ಟಿಯು ರಾಜಕುಮಾರನಾದ ಔರಂಗಜೇಬನ ಮೇಲೆ ಬಿದ್ದಿತು. ಅವಳ ಲೀಲೆಯನ್ನು ಬಿಡದೆ ಅವಲೋಕಿಸುತ್ತಿರುವ ಔರಂಗಜೇಬನ ದೃಷ್ಟಿಯಂತೂ ಅವಳ ಮುಖದಲ್ಲಿಯೇ ನೆಲೆಸಿತ್ತು. ಹೀಗೆ ಏಕದೃಷ್ಟಿಯಾಗುತ್ತಲೆ ಆ ಸುಂದರಿಯು ಸಲಜ್ಜಸ್ಮಿತಳಾಗಿ ತನ್ನನ್ನು ಮಾನಗೇಡಿಯಾಗಿ ಮಾಡಿದ ಆ ಉತ್ತರೀಯವನ್ನು ಭರದಿಂದೆತ್ತಿಕೊಂಡಳು.

ಔರಂಗಜೇಬನು ಆ ಸಾರಂಗನಯನೆಗೆ ಮನಸೋತು ಹೋಗಿ

"ಅತ್ಯಾ, ಆ ಸುಂದರಿ ಯಾರು ನೋಡು! ನಿನ್ನ ಪ್ರೇಮವು ನನ್ನ ಮೇಲಿರುವದು ನಿಜವಾಗಿದ್ದರೆ ಇವಳು ನನ್ನ ಅಂತಃಪುರದಲ್ಲಿ ಸೇರುವಂತೆ ಮಾಡು." ಎಂದು ಲಜ್ಜೆಯನ್ನು ದೂಡಿ ಹಾಕಿ ಕೇಳಿದನು.

"ಔವಯ್ಯಾ! ಅವಳು ನಮ್ಮ ಯಜಮಾನರಿಗೆ ಪ್ರಿಯತಮಳಾದ ಭೋಗಿನಿಯು. ನೀನವಳ ಹೆಸರು ತಡವಿದರೆ ಶೀಘ್ರಕೋಪಿಯಾದ ನನ್ನ ಪತಿಯು ನನ್ನನ್ನು ನಿನ್ನನ್ನು ಕೂಡಿಯೇ ಕಡಿದು ತುಂಡುತುಂಡಾಗಿ ಮಾಡುವನು." ಎಂದು ಉದ್ವಿಗ್ನಳಾಗಿ ಅತ್ತೆಯು ಹೇಳಿದಳು.

ಕಾರ್ಯಸಾಧಕನಾದ ಆ ಧೂರ್ತನು ಆ ಮಾತು ಅಷ್ಟಕ್ಕೆ ಹಾಗೇ ಬಿಟ್ಟು ಭೋಜನದ ವಿಧಿಯನ್ನು ತೀರಿಸಿಕೊಂಡು ತಾನಿರುವ ಸ್ಥಳಕ್ಕೆ ಬಂದನು. ಅಲ್ಲಿ ಔರಂಗಜೇಬನು ತನ್ನ ದಿವಾನನ ಮುಂದೆ ಹೀರಾ ಸುಂದರಿಯ ಪ್ರಸ್ತಾಪವನ್ನು ತೆಗೆಯಲಾಗಿ "ಹುಜೂರ್, ಇದೆಷ್ಟರ ಮಾತು? ಖಾನಸಾಹೇಬರನ್ನೇ ಈ ಖಡ್ಗದಿಂದೆ ಎರಡು ತುಂಡಾಗಿ ಮಾಡುವೆನು. ಬಳಿಕ ಅವರ ಅಂತಃಪುರವೇ ನಿಮ್ಮದಾಗುವದಲ್ಲವೇ?" ಎಂದು '**ಹಿಂಸೈವ ಪರಮೋಧರ್ಮ**'ನಾಗಿದ್ದ ಆ ಮಂತ್ರಿಯು ತತ್‌ಕ್ಷಣವೇ ಸೂಚಿಸಿದನು.

"ದಿವಾನ್‌ಸಾಹೇಬ, ಮುರ್ಶಿದ್ ಕುಲಿಖಾನರು ಇನ್ನೂ ಕೆಲ ಕಾಲ ಬದುಕಿರುವದು ನನಗೆ ಇಷ್ಟವಾಗಿದೆ. ಅವರ ಜೀವಿತಕ್ಕೆ ಅಪಾಯವಾಗದೆ ಹೀರೆಯ ಪ್ರಾಪ್ತಿಯು ನನಗಾಗುವಂತೆ ಆಲೋಚನೆಯನು ತೆಗೆಯಿರಿ" ಎಂದು ಔರಂಗಜೇಬನು ಹೇಳಿದನು.

ಯುಕ್ತಿಗಾರನಾದ ಆ ದಿವಾನನು ಮುರ್ಶಿದ್ ಕುಲಿಖಾನನೊಡನೆ ಸಾಮದಾನಗಳ ಮಾತುಗಳಾಡಿ, ಅವನು ಹೀರೆಯನ್ನು ಔರಂಗಜೇಬನಿಗೆ ಕೊಟ್ಟು ಔರಂಗಜೇಬನ ಅಂತಃಪುರದಲ್ಲಿಯ ಓರ್ವ ಸುಂದರಿಯನ್ನು ತಾನು ಪ್ರತಿಫಲವಾಗಿ ತೆಗೆದುಕೊಳ್ಳುವಂತೆ ವ್ಯವಸ್ಥೆ ಮಾಡಿದನು.

* * * *

ಅಂಥ ಸುಸಮಯದಲ್ಲಿ ಔರಂಗಜೇಬ ಸುಲ್ತಾನನು ಕಾಲುಸಪ್ಪಳ ಮಾಡದೆ ತನ್ನ ಪ್ರಿಯಳಿದ್ದಲ್ಲಿಗೆ ಬಂದು "ವ್ಹಾಃ! ಪ್ಯಾರೀ (ಪ್ರಿಯೆ)

ಈ ಸಮಯದಲ್ಲಿ ನೀನು ಅಪ್ಸರೆಗಿಂತಲೂ ಬಹು ಮೋಹಕಳಾಗಿ-
ತೋರುವಿ!" ಎಂದು ಸಂತೋಷದಿಂದ ನಗುತ್ತ ನುಡಿದನು.

ಪತಿಯ ಪ್ರೇಮವನ್ನು ಸಮಗ್ರವಾಗಿ ತನ್ನ ಸ್ವಾಧೀನದಲ್ಲಿಟ್ಟು ಕೊಂಡಿರುವ ಆ ಉಲ್ಹಾಸಯುತೆಯಾದ ಲೀಲಾವತಿಯು, ಸಕಲ ಭೂಮಂಡಲವನ್ನು ತನ್ನ ದರ್ಪದಿಂದ ನಡುಗಿಸುವ ಆ ಚಂಡವಿಕ್ರಮನನ್ನು ಕಂಡು ರವಷ್ಟಾದರೂ ತನ್ನ ಸ್ಥಾನವನ್ನು ಬಿಟ್ಟು ಸರಿಯದೆ ಕಿಂಚಿತ್ ತಲೆಬಾಗಿಸಿ ಪ್ರಣಾಮ ಮಾಡಿ ಮಂದಹಾಸಗೈದು ಮತ್ತೆ ತನ್ನ ಗಾನಕ್ರಮದಲ್ಲಿ ತೊಡಗಿದಳು. ವಿಸ್ತಾರವಾಗಿರುವ ಆ ಮಂಚದಲ್ಲಿ ಔರಂಗಜೇಬನಿಗೆ ಕುಳ್ಳಿರಲು ಸ್ಥಳವಿದ್ದೇ ಇತ್ತು. ಅವನು ಆದಷ್ಟು ಮಟ್ಟಿಗೆ ತನ್ನ ಪ್ರಿಯತಮೆಯ ಸಮೀಪದಲ್ಲಿ ಕುಳಿತುಕೊಂಡನು. ಸಮಗ್ರ ಒಂದು ಗಳಿಗೆಯ ವರೆಗೆ ತಾನು ಹಾಗೆ ಕುಳಿತಿದ್ದರೂ ಆ ವಿಲಾಸಿನಿಯು ತನ್ನ ಗಾನವನ್ನು ಮುಗಿಸಲೊಲ್ಲಳೆಂದು ಕಂಡು ಔರಂಗಜೇಬನು ಆತುರನಾಗಿ "ಪ್ರಿಯೆ, ಇಂದು ಬೆಳತನಕ ಇದೇ ಕ್ರಮವೇನು?" ಎಂದು ನಗುತ್ತ ಆ ರಮಣಿಯ ಕೈಯೊಳಗಿನ ವೀಣೆಯನ್ನು ಸೆಳಕೊಳ್ಳ ಹೋದನು. ಹೀರಾಸುಲ್ತಾನೆಯು ವೀಣೆಯನ್ನು ಗಟ್ಟಿಯಾಗಿ ಹಿಡುಕೊಂಡು "ಯಾಕೆ? ಗಾನದಿಂದ ಸುಲ್ತಾನರಿಗೆ ಬೇಸರವಾಗಿದ್ದರೆ ಅಲ್ಲಿಯೇ ನಿಮ್ಮ ಕುರಾಣ ಪುಸ್ತಕವಿದೆ, ತೆಗೆದುಕೊಂಡು ಯಥೇಷ್ಟವಾಗಿ ಪಾರಾಯಣ ಮಾಡಿರಿ!" ಎಂದು ತುಸು ಕೋಪಿಸಿಕೊಂಡವಳಂತೆ ಮಾಡಿ ನುಡಿದಳು.

"ಕುರಾಣ ಪಠನದ ಸಮಯವೇ ಇದು, ಹೀರಾ?" ಎಂದು ಮದನಾತುರನಾದ ಆ ಸುಲ್ತಾನನು ಆ ಕಾಮಿನಿಯ ಹೆಗಲ ಮೇಲೆ ಕೈಯಿಟ್ಟು ಕೇಳಿದನು.

ಆ ಚಂಡಿಯು ಔರಂಗಜೇಬನ ಕೈನೂಕಿ ಹಾಕಿ "ಇದು ಕುರಾಣ ಪಠನದ ಸಮಯವಾಗದಿದ್ದರೆ, ನಿನ್ನೆ ನಾನು ಇದೇ ಸಮಯಕ್ಕೆ ಜೂಬೈದೆ (ದಾಸಿಯ ಹೆಸರು) ಯನ್ನು ಕೊಟ್ಟು ನಿಮ್ಮನ್ನು ಕರಿಸಿದರೆ, 'ಕುರಾಣ ಪಠನ ಮಾಡುತ್ತೇವೆ; ಬರುವದಕ್ಕಾಗುವದಿಲ್ಲ'ವೆಂದು ಹೇಳಿ ಕಳಿಸಿ ನನ್ನ ಪ್ರೇಮಾಭಿಲಾಷೆಯನ್ನೆಲ್ಲ ಹಾಳುಮಾಡಿಬಿಟ್ಟದ್ದು ಯಾಕೆ?" ಎಂದು

ನುಡಿದು ಹುಬ್ಬುಗಂಟಿಕ್ಕಿಕೊಂಡು ಕುಳಿತಳು.

ಕಾಮುಪರವಶನಾದ ಔರಂಗಜೇಬನು ಚಟ್ಟನೇ ಎದ್ದವನೇ ಆ ಮಧುರಾಧರೆಯನ್ನು ಬಲಾತ್ಕಾರದಿಂದ ಚುಂಬಿಸಿದನು. ಹೀರಾಸುಲ್ತಾನೆಯು ತನ್ನ ಕೈಯಲ್ಲಿಯ ವೀಣೆಯನ್ನು ಕೆಳಗಿರಿಸಿ ಕೋಪದ ಆವಿರ್ಭಾವವನ್ನು ಒಳಿತಾಗಿ ತಳೆದು " ಇದೇನು ಬಲಾತ್ಕಾರವು!!! " ಎಂದು ಉದ್ಗಾರ ತೆಗೆದಳು.

" ಪ್ರಿಯೇ, ಬಲಾತ್ಕಾರದಲ್ಲಿ ಸ್ವಾರಸ್ಯವಿರುವದಿಲ್ಲೆಂದೇ ಇಂದು ಜಗತ್ತಿನಲ್ಲಿ ಸ್ತ್ರೀಯರ ಮೆರವಣಿಗೆಯು! ಅದಕ್ಕಾಗಿಯೇ ಪರರಾಜರ ರಾಜಲಕ್ಷ್ಮಿಯನ್ನು ಬಲಾತ್ಕಾರದಿಂದ ಅಪಹರಿಸುವನಾದ ಔರಂಗ-ಜೇಬನು ನಿನ್ನ ಲೀಲೆಗೆ ಸೋತು ಶರಣಾಗತನಾಗಿರುವನು!! " ಎಂದು ಮೃಗೇಂದ್ರನಂತೆ ಉಗ್ರವಾಗಿರುವ ತನ್ನ ಮುಖದಲ್ಲಿ ದೈನ್ಯವನ್ನು ತಾಳಿ ಔರಂಗಜೇಬನು ವಿಜ್ಞಾಪನೆ ಮಾಡಿಕೊಂಡನು.

ಹೀರೆಯು ತಾನು ನಟಿಸುತ್ತಿರುವ ಕೋಪವನ್ನು ಫಕ್ಕನೆ ಮರೆತು ಖೊಖ್ಖನೆ ನಕ್ಕು ಮತ್ತೆ ಗಾಂಭೀರ್ಯವನ್ನು ತಾಳಿ " ನಿನ್ನೆ ನೀವು ನನ್ನ ಪ್ರೇಮದ ರಸಭಂಗವನ್ನು ಮಾಡಿದ ಅಪರಾಧಕ್ಕೆ ನಾನು ಈಗ ವಿಧಿಸುವ ದಂಡನೆಗೆ ನೀವು ಸುಮ್ಮನೆ ಒಳಗಾದರೆ ಒಳಿತು, ಇಲ್ಲವಾದರೆ ಆ ಮೂಲೆಯಲ್ಲಿರುವ ಆಸನದಲ್ಲಿ ಕುಳಿತು ಬೆಳ್ಳಬೆಳತನಕ ಕುರಾಣವನ್ನು ಯಥೇಷ್ಟವಾಗಿ ಪಠಿಸಿರಿ." ಎಂದು ಮೂಲೆಯಲ್ಲಿರುವ ಆಸನವನ್ನು ತೋರಿಸಿ ನುಡಿದಳು.

" ಪ್ರಿಯೆ, ಪ್ರತಿಸ್ವರ್ಗವಾಗಿರುವ ನಿನ್ನೀ ಸನ್ನಿಧಾನಕ್ಕೆ ಬಂದ ಬಳಿಕ ಕುರಾಣದಿಂದೇನು ಪ್ರಯೋಜನ? ನಿನ್ನೆ ನಾನು ಮಾಡಿದ ದ್ರೋಹಕ್ಕೆ ನೀನು ಎಂಥ ಕಠಿಣವಾದ ಶಿಕ್ಷೆಯನ್ನು ವಿಧಿಸಿದರೂ ನಾನು ಅದನ್ನು ಅನುಭವಿಸಲಿಕ್ಕೆ ಸಿದ್ಧನು.

ಈ ಮಾತು ಕೇಳಿ ಹೀರೆಯು ಸಂತುಷ್ಟಳಾಗಿ ವಿಲಾಸದಿಂದೆದ್ದು ಪೆಟ್ಟಿಗೆಯೊಳಗಿಂದ ಒಂದು ಚೀನಾಭಾಂಡವನ್ನೂ ಸುವರ್ಣದ ಬಟ್ಟಲವನ್ನೂ ತೆಗೆದುಕೊಂಡು ಬಂದು ಔರಂಗಜೇಬನ ಬಳಿಯಲ್ಲಿ ಲೀಲೆಯಿಂದು ಕುಳಿತುಕೊಂಡಳು.

"ಇದನ್ನೇನಾರಂಭಿಸಿದಿ ಪ್ರಿಯೆ?" ಎಂದು ಔರಂಗಜೇಬನು ಮದಿರಾಸೇವನವನ್ನು ನಿಷೇಧಿಸಿ ಕೇಳಿದನು.

"ಯಾಕೆ! ಏನು ತಪ್ಪಾಯಿತು? ನನ್ನ ಸನ್ನಿಧಾನವೆಂದರೆ ಸ್ವರ್ಗ ಲೋಕವೇ ಎಂದು ನೀವೀಗಲೆ ಹೇಳಲಿಲ್ಲವೆ? ಸ್ವರ್ಗಲೋಕದಲ್ಲಿ ಸುರೆಗೆ ನಿಷೇಧವೆಲ್ಲಿ?" ಎಂದು ನುಡಿದವಳೇ ಆ ಭೋಗಿನಿಯು ಬಟ್ಟಲಿನಲ್ಲಿ ಸುರೆಯನ್ನು ತುಂಬಿಕೊಂಡಳು.

ಔರಂಗಜೇಬನು ಅವಳ ಗದ್ದವನ್ನು ಹಿಡಿದು "ಪ್ರಿಯೆ, ಈ ವ್ಯಸನವು ತಕ್ಕದ್ದಲ್ಲ. ನಾನಿರುವಾಗಲಂತೂ ಇದನ್ನು ನೀನು ತೆಗೆಯಬಾರದೆಂದು ನನ್ನ ಇಷ್ಟ. ನೀನು ನನ್ನನ್ನು ಪ್ರೀತಿಸುವಿಯೆಂದು ಹೇಳುತ್ತಿರುವಿ; ಈ ಮಾತು ನಿಜವಾಗಿದ್ದರೆ ಈ ಬಟ್ಟಲಿನಲ್ಲಿರುವ ನಿಂದ್ಯವಾದ ಪೇಯ ವನ್ನು ಚೆಲ್ಲಿಕೊಡು ನೋಡೋಣ!" ಎಂದೊಳ್ಳೆ ನಯೋಕ್ತಿಯಿಂದ ಹೇಳಿಕೊಂಡನು.

"ಫಕೀರರ ಮಾತು ಕೇಳಿದರೆ ಸುಖೋಪಭೋಗದ ವಸ್ತುಗಳೆಲ್ಲ ನಿಂದ್ಯವಾದವುಗಳೇ! ಮದಿರೆಗಿಂತಲೂ ಧನದಾರಾದಿಗಳನ್ನು ಅವರು ಅಧಿಕವಾಗಿ ನಿಂದಿಸುವರು. ಆ ದಾಂಭಿಕರ ಮಾತು ಕೇಳಿ ನೀವು ನನ್ನನ್ನು ಕೂಡ ಬಿಡುವಿರೆಂಬ ಭೀತಿ ನನಗಾಗಿದೆ!" ಎಂದು ಹೀರೆಯು ತನ್ನ ಕೈಬೆರಳುಗಳಿಂದ ಔರಂಗಜೇಬನ ಗಡ್ಡದ ತೊಡಕನ್ನು ಲೀಲೆಯಿಂದ ಬಿಡಿ ಸುತ್ತ ಮಂದಹಾಸಗೈದು ನುಡಿದಳು.

ಔರಂಗಜೇಬನು ಆ ಪ್ರೇಮದ ಪುತ್ಥಳಿಯನ್ನು ಆದರದಿಂದ ಚುಂಬಿಸಿ "ಪ್ರಿಯೆ, ನಾನು ಐಹಿಕವಾದ ಸಕಲಾಭಿಲಾಷೆಗಳನ್ನು ತ್ಯಾಗ ಮಾಡಿದರೂ ಮಾಡಬಲ್ಲೆನು; ಆದರೆ ಒಂದರಕ್ಷಣವಾದರೂ ನಿನ್ನನ್ನು ಅಗಲಿ ಇರಲಾರೆನು." ಎಂದು ಅವಳ ಮುಖವನ್ನು ದಿಟ್ಟಿಸಿ ನೋಡುತ್ತ ನುಡಿದನು.

"ಹುಜೂರ್, ತಮ್ಮ ಪ್ರೇಮವು ನನ್ನ ಮೇಲಿದ್ದರೂ ಇರಬಹುದು. ಆದರೆ ಅದರಲ್ಲಿ ನಾಟಕವು ಎಷ್ಟುಮಟ್ಟಿಗೆ ಕಲೆತಿರುವದೆಂಬ ಲೆಕ್ಕವನ್ನು ಮಾತ್ರ ನಾನು ಮಾಡಲರಿಯೆನು!"

"ಈ ಪ್ರೇಮದಲ್ಲಿ ದಂಭವು ಕೂಡಿದೆಯೆಂದು ಹೇಳುವೆಯಾ?

ನಾನೇನು ಮಾಡಿದರೆ ನನ್ನೀ ಪ್ರೇಮವು ನಿಜವಾದದ್ದೆಂದು ನೀನು ನಂಬುವಿ ಹೇಳು?"

"ಹೇಳಲಿಯಾ? ನೋಡಿರಿ! ಹಿಂದಿನಿಂದ ಹಿಂಜರಿದರೆ ನಾನು ಕೇಳುವವಳಲ್ಲ." ಎಂದು ಹೀರೆಯು ತನ್ನ ತರ್ಜನೀ ಬೆರಳಿನಿಂದ ಗಲ್ಲವನ್ನು ಒಡಿದು ನುಡಿದಳು.

"ಹೇಳಿಯಾದರೂ ನೋಡು!" ಎಂದು ಪ್ರೇಮಪರವಶನಾದ ಆ ರಮಣನು ಒಪ್ಪಿಕೊಂಡನು.

ಹೀರೆಯು ತತ್‌ಕ್ಷಣವೇ ಪರಿಮಳವನ್ನು ಸೂಸುವ ಆ ಸುವರ್ಣ ಚಷಕವನ್ನು ಎತ್ತಿ ಕುರಾಣಸಂಪನ್ನನಾದ ತನ್ನ ಪ್ರಿಯನ ಮುಖಕ್ಕೆ ಹಿಡಿದಳು. ಔರಂಗಜೇಬನು ಬೆದರಿ ಹಿಂದಕ್ಕೆ ಸರಿದು "ಪ್ಯಾರೀ, (ಪ್ರಿಯೆ) ಇದೊಂದು ಮಾತು ಬಿಟ್ಟು ನೀನು ಬೇಕಾದಆಜ್ಞೆ ಮಾಡಿದರೂ. ಈ ನಿನ್ನ ದಾಸನು ಅದನ್ನು ಸಂತೋಷದಿಂದ ಶಿರಸಾವಹಿಸುವನು ಸುರೆಯನ್ನು ನಾನೆಂದಿಗೂ ಮುಟ್ಟಿದವನಲ್ಲ" ಎಂದು ಬಹು ವಿನಯ ದಿಂದ ಹೇಳಿಕೊಂಡನು.

"ಇದಕ್ಕೇ ಕಪಟವೆನ್ನುತ್ತಾರೆ. ನಾನು ಪ್ರೇಮದಿಂದ ಕೊಟ್ಟವಸ್ತು ವನ್ನು ಹೀಗೆ ನಿರಾಕರಿಸಿದರೆ ನನ್ನ ಅಪಮಾನವನ್ನು ಮಾಡಿದಂತಾಗಲಿಲ್ಲವೆ? ಈ ಹೀರೆಯು ಅಪಮಾನವನ್ನು ಎಂದಿಗೂ ಸಹಿಸುವವಳಲ್ಲ! ಚೆಲ್ಲಿ ಕೊಡಲೇ ಇದನ್ನು? ನೋಡಿರಿ! ಇದರೊಡನೆಯೇ ನನ್ನ ಪ್ರೇಮ ವಾದರೂ ಮಣ್ಣುಪಾಲಾಗಿ ಹೋಗುವದು!" ಎಂದು ಆ ಧೂರ್ತೆಯು ಒಳ್ಳೇ ನಿಶ್ಚಯದಿಂದ ಕೇಳಿದಳು.

ಎಂಥ ಸಂಕಟವಿದು! ಕುಡಿಯುವನೇ, ತನ್ನ ದೃಢ ವ್ರತಕ್ಕೆ ಮಾಯಲು ಅರಿಯದ ನೋವು; ಬಿಡುವನೇ, ಅಂಥ ಸ್ವರ್ಗತುಲ್ಯವಾದ ಸುಖಕ್ಕೆ ಎರ ವಾಗುವನು! ಔರಂಗಜೇಬನು ತನ್ನ ಪ್ರಿಯತಮೆಯ ಗದ್ದವನ್ನು ಹಿಡಿದು "ಪ್ರಿಯೆ, ನನ್ನಾಣೆಯಾಗಿದೆ. ಇಂಥ ಆಗ್ರಹವನ್ನು ತೊಡಬೇಡ ಕಂಡಿಯಾ?" ಎಂದು ದೀನನಾಗಿ ಹೇಳಿಕೊಂಡನು.

ಹೀರೆಯು ಕ್ರೋಧವಶಳಾಗಿ ತನ್ನ ರಮಣನ ಪ್ರೇಮದ ಪಾಶ ಗಳನ್ನು ಹರಿದೊಗೆದು ಚಟ್ಟನೆ ಎದ್ದು "ಸಾಕು! ಸಾಕು!! ಈ ಸುಳ್ಳು

ಪ್ರೇಮವು ಸಾಕು !!!" ಎಂದು ನುಡಿದವಳೇ ಮಂಚದಿಂದಿಳಿದಳು.

ಹೀರೆಯು ನಿರ್ದಯವಾಗಿ ತನ್ನ ಹೃದಯಸೂತ್ರವನ್ನು ಹರಿದು ಕೊಂಡು ನಡೆದಳೋ ಎಂಬಂತೆ ಔರಂಗಜೇಬನಿಗೆ ಬಲವತ್ತರವಾದ ವ್ಯಥೆ ಯಾಯಿತು! ವೇದನೆಯ ಭರದಲ್ಲಿ ಅವನು ತನ್ನ ಕುರಾಣವನ್ನೂ ಧರ್ಮ ವನ್ನೂ ವ್ರತವನ್ನೂ ಮರೆತುಬಿಟ್ಟು ಧಾವಿಸಿ ಬಂದು ಹೀರೆಯನ್ನು ತನ್ನ ಬಾಹುಪಾಶಗಳಲ್ಲಿ ದೃಢವಾಗಿ ಹಿಡಿದು, "ಪ್ರಿಯೆ, ಹಾಗೆ ಕೋಪಿಸಿ ಕೊಂಡು ಹೋಗಿ ಈ ದೀನನ್ನು ವ್ಯಸನದಲ್ಲಿ ನೂಕಬೇಡ. ಬಾ, ನಿನ್ನಂತೆಯೇ ಆಗಲಿ! ನಿನ್ನೀ ಸುರುಚಿರವಾದ ಹಸ್ತದಿಂದ ನೀನೇ ನನಗೆ ಆ ಸುಧಾಸಮವಾಗಿರುವ ಮದಿರೆಯನ್ನು ಕುಡಿಸು ಬಾ. ಕುಡಿದು ಕೃತಾರ್ಥನಾಗುವೆನು" ಎಂದು ಉತ್ಸಾಹದಿಂದ ನುಡಿದನು.

ಹೀರೆಯು ಪ್ರೇಮರಸಪೂರಿತಳಾದ ತರುಣಿಯು. ಔರಂಗಜೇಬ ನಲ್ಲಿ ಅವಳ ನಿಶ್ಚಲವಾದ ಪ್ರೇಮವಿತ್ತು. ಪ್ರಾಣಕಾಂತನು ಹೀಗೆ ಪ್ರೇಮವಶನಾಗಿ ತನ್ನನ್ನು ಬಾಹುಗಳಲ್ಲಿ ಬಿಗಿದಪ್ಪಿದ ಸುಖವನ್ನನುಭವಿಸಿ ದಾಕ್ಷಣವೇ ಅವಳ ದರ್ಪವೆಲ್ಲ ಕರಗಿ ನೀರಾಗಿ ಹೋಯಿತು. ಅವಳ ಕಣ್ಣುಗಳಿಂದ ಆನಂದಾಶ್ರುಗಳು ಸುರಿದವು. ಆದರೂ ಆ ವಿನೋದಿನಿಯು ತನ್ನ ಪ್ರಿಯನೊಡನೆ ಇನ್ನಿಷ್ಟು ವಿನೋದ ಮಾಡಬೇಕೆಂದು ನೆನಿಸಿ ಔರಂಗಜೇಬನ ಅಕ್ಕರತೆಯು ತೆಕ್ಕೆಗೀಡಾಗಿ ಅವನವಳನ್ನು ಮಂಚಕ್ಕೆ ತಂದಿರಿಸುವವರೆಗೆ ಸುಮ್ಮನಿದ್ದಳು. ಬಳಿಕ ಆ ಲೀಲಾವತಿಯು ಒಯ್ಯಾರ ದಿಂದ ಕುಳಿತುಕೊಂಡು ಮದಿರಾಭಾಂಡದೊಳಗಿನ ಮದಿರೆಯಿಂದ ಬಂಗಾರದ ಬಟ್ಟಲವನ್ನು ತುಂಬಿ ಮೆಲ್ಲಗೆ ನಕ್ಕು ಅದನ್ನು ತನ್ನ ಹೃದಯ ರಣಮನ ಸ್ವಾಧೀನ ಮಾಡಿದಳು. ಸುರಾಪಾನವು ನಿಶ್ಚಯವಾಗಿ ನಿಷಿದ್ಧ ವಾದದ್ದೆಂದು ಔರಂಗಜೇಬನು ನಂಬಿದ್ದನು ತನ್ನ ಪ್ರಿಯೆಯು ಕೊಟ್ಟ ಆ ಪುಟ್ಟದಾದ ಸುವರ್ಣಪಾತ್ರೆಯನ್ನು ಹಿಡಿದಿರುವಾಗ ಅವನ ಕೈಯು ತತ್ತರಿಸುತ್ತಿತ್ತು. ಪ್ರಸಂಗವೇ ಬಂದೊದಗಿದ ಮೇಲೆ ಇನ್ನೇನು ಮಾಡು ವನು? ಇದ್ದದ್ದರಲ್ಲಿ ಆದಷ್ಟುಮಟ್ಟಿಗೆ ಸುಖವನ್ನೇ ಕಂಡುಕೊಳ್ಳಬೇ ಕೆಂದೆಣಿಸಿ ಆ ಜಗತ್‌ಶಾಸಕನಾದ ಪ್ರಭುವು ಮಂದಹಾಸಗೈದು ಹೀರೆ ಯನ್ನು ಕುರಿತು "ಪ್ರಿಯೇ, ಇದರಲ್ಲಿಯ ಸುರಚಿರವಾದ ರಸವನ್ನು

ನೀನು ತುಸು ಸೇವಿಸಿ ಇದರಲ್ಲಿ ನಿನ್ನ ಅಧರಾಮೃತದ ಬಿಂದುಗಳನ್ನು ಕೂಡಿಸಿ ಕೊಟ್ಟೆಯಾದರೆ ಇದಕ್ಕೆ ಅಧಿಕವಾದ ರುಚಿ ಬರುವದಲ್ಲ?" ಎಂದು ಹೇಳಿ ಅದನ್ನು ಅವಳ ಸ್ವಾಧೀನ ಮಾಡಿದನು.

ಆ ರಮಣಿಯು ತನ್ನ ಜೀವಿತೇಶ್ವರನಿಗೆ ಮನಮುಟ್ಟಿ ಪ್ರಣಾಮ ಮಾಡಿ ಮಂದಹಾಸಗೈದು ಆ ಪೇಯದಲ್ಲಿಯ ಅರ್ಧವನ್ನು ಕುಡಿದು ಶೇಷವನ್ನು ಅವನ ಸ್ವಾಧೀನ ಮಾಡಿದಳು. ಔರಂಗಜೇಬನು ಬಟ್ಟಲ ವನ್ನು ತನ್ನ ಬಾಯಿಗೆ ಹಚ್ಚಿದಾಕ್ಷಣವೇ ಅವನ ಪ್ರಿಯತಮೆಯು ಅದನ್ನು ಭರಕ್ಕನೇ ಕಸುಕೊಂಡು "ಏನು ಫಕೀರಸಾಹೇಬ, ಕುರಾಣಶಾಸ್ತ್ರ ಪ್ರವೀಣರಾದ ನೀವು ಸುರಾಪಾನವನ್ನು ಮಾಡಲುದ್ಯುಕ್ತರಾದಿರೊ?" ಎಂದು ನಿಂದಿಸಿ ನುಡಿದು, ಅದರಲ್ಲಿಯ ಸುರೆಯನ್ನು ಚಲ್ಲನೆ ಚಲ್ಲಿಕೊಟ್ಟಳು.

"ಇದೇನು ಪ್ರಿಯೆ?" ಎಂದು ಔರಂಗಜೇಬನು ಕಿಂಚಿತ್ ಆಶ್ಚರ್ಯದಿಂದಲೂ, ಕಿಂಚಿತ್ ರೋಷದಿಂದಲೂ ಕೇಳಿದನು.

ಹೀರೆಯು ವಿಲಾಸದಿಂದ ಆ ಕ್ರುದ್ಧನಾದ ಮೃಗೇಂದ್ರನನ್ನು ಅಪ್ಪಿಕೊಂಡು ಬಲು ಮೋಹ ಬರುವಂತೆ ಅವನ ಮುಖವನ್ನು ನೋಡಿ ಮಂದಹಾಸಗೈದು "ಪ್ರಿಯರಾಜ, ಇದುವರೆಗೂ ಈ ದಾಸಿಯು ವಿನೋದಗೈದದ್ದರ ಕ್ಷಮೆ ಇರಲಿ! ನೀವು ನನ್ನ ಪ್ರಾಣೇಶ್ವರರು. ನಿಮ್ಮಲ್ಲಿ ಸಂಪೂರ್ಣವಾಗಿ ಅಭಿಮಾನವನ್ನು ತಳೆದವಳಾದ ನಾನು ನಿಮ್ಮ ವ್ರತ ಭಂಗವನ್ನು ಮಾಡುವಂಥ ಕೆಲಸ ಮಾಡುವೆನೆ?" ಎಂದು ಬಹು ವಿನಯದಿಂದ ನುಡಿದಳು.

ಹೀರೆಯ ಉದಾರವಾದ ಮಾತು ಕೇಳಿ ಸುಲ್ತಾನ ಔರಂಗ ಜೇಬನು ನಿರ್ಜಿತನಾಗಿ "ಪ್ರಿಯೇ, ನೀನಿಂದು ನನ್ನ ಪ್ರಾಣಕ್ಕಿಂತಲೂ ಪ್ರಿಯಳಾದಿ. ಸ್ತ್ರೀಯೆಂದರೆ ಕೇವಲವಾದ ವಿಲಾಸವಸ್ತುವೆಂದು ನಾನಿದು ವರೆಗೆ ತಿಳಿದಿದ್ದೆನು. ಆದರೆ ನೀನಿಂದು ನನ್ನ ಗುರುವೇ ಆದಿ!" ಎಂದು ಸಂತೋಷದಿಂದ ನುಡಿದು ಬಿಂಬಾಧರೆಯನ್ನು ಚುಂಬಿಸಿದನು

ಬಳಿಕ ಔರಂಗಜೇಬನು ತಾನು ನಾಳಿಗೆ ದಕ್ಷಿಣಕ್ಕೆ ಹೋಗತಕ್ಕವ ನೆಂದು ಹೇಳಿ ಹೀರಾಸುಲ್ತಾನೆಯ ಅನುಜ್ಞೆಯನ್ನು ಕೇಳಿದನು.

" ಅಂದರೆ! ನೀವು ನನ್ನನ್ನು ಬಿಟ್ಟು ಹೋಗತಕ್ಕವರೇನು ? " ಎಂದು ಸುಲ್ತಾನೆಯು ಆಶ್ಚರ್ಯವನ್ನು ತಾಳಿ ಕೇಳಿದಳು.

" ಅಹುದು. ಈ ವಿಯೋಗಕ್ಕೆ ನಿನ್ನಲ್ಲಿ ವಾಸಮಾಡಿಕೊಂಡಿರುವ ಅಸಾಧಾರಣವಾದ ಜಾಣ್ಮೆಯೂ ಪತಿಪ್ರೇಮವೂ ಕಾರಣವಲ್ಲೆ ? "

" ವಿಪರೀತವನ್ನೇ ಕೇಳಿದೆನು ! " ಎಂದು ಹೇಳೆಯು ವಿಷಾದದಿಂದ ನಕ್ಕು ನುಡಿದಳು

" ರಾಜಕಾರಣಕ್ಕಾಗಿ ನೀನು ಕೆಲವು ದಿವಸ ಆಗ್ರಾ ಪಟ್ಟಣದಲ್ಲಿಯೇ ಇರಬೇಕು. ದಿಲ್ಲಿಯ ಚಕ್ರವರ್ತಿಯ ರಾಣಿಯಾಗಬೇಕೆಂದು ನೀನು ಬಯಸುವಿಯಲ್ಲವೆ ? "

" ಔರಂಗಜೇಬನ ಅರ್ಧಾಂಗಿಯೆಂದೆನಿಸಿಕೊಳ್ಳುವ ಮರ್ಯಾದೆ ನನಗೆ ಸಾಕು ! ಆದರೂ ಪ್ರಾಣದೊಡೆಯರ ಹಿತಕ್ಕಾಗಿ ಈ ದಾಸಿಯು ಹೇಳಿದ್ದು ಮಾಡಲು ಸಿದ್ಧಳೇ ಆಗಿರಬೇಕಲ್ಲವೆ ? "

" ಶಾಅಬ್ಬಾಸ್ ! ಶಾಅಬ್ಬಾಸ್ ! ಪ್ರಿಯೆ, ನಿನ್ನಂಥ ನಾರೀರತ್ನವನ್ನು ಸಂಪಾದಿಸಿಕೊಂಡವನಾದ ನಾನೇ ಈ ಜಗತ್ತಿನಲ್ಲಿ ಧನ್ಯನು ! ಪ್ರಿಯೆ, ವ್ಯಾಧಿಗ್ರಸ್ತರಾದ ನಮ್ಮ ಬಾದಶಹರ ಪಶ್ಚಾತ್ ನನ್ನ ಅಣ್ಣತಮ್ಮಂದಿರೆಲ್ಲರೂ ರಾಜಮುಕುಟವು ತಮಗೆ ತಮಗೆಂದು ಬಲು ಸಾಧಿಸಿಯತ್ನ ನಡಿಸಿರುವರು. ಅವರಂತೆಯೇ ನಾನಾದರೂ ಅದೇ ಹವಣಿಕೆಯಲ್ಲಿರುವೆನೆಂಬುದನ್ನು ನೀನು ಅರಿತಿರುವಿ. ನಾನಿನ್ನು ದಕ್ಷಿಣಕ್ಕೆ ಹೋದಬಳಿಕ ಇಲ್ಲಿಯ ಕಾರಸ್ಥಾನಗಳನ್ನು ನನಗೆ ತಿಳಿಸುವವರಾರು ? ರೋಶನಾರಾ ಬೇಗಮ್ಮಳು ನನಗೆ ಅನುಕೂಲಳಾಗಿರುವಳು ಸರಿ. ಆದರೆ ಅವಳೊಬ್ಬಳ ಮೇಲೆಯೇ ಕೈಯೂರಿಕೊಂಡಿರುವದು ವಿಹಿತವಲ್ಲ. ಅದಕ್ಕಾಗಿ ಚತುರೆಯಾದ ನೀನು ಇಲ್ಲಿದ್ದುಕೊಂಡು ಅರಮನೆಯ ಅಂತರಂಗಗಳನ್ನೆಲ್ಲ ಅರಿತುಕೊಂಡು ಕಾಲಕಾಲಕ್ಕೆ ನನಗೆ ತಿಳಿಸುತ್ತಿದ್ದರೆ ನನ್ನ ಮುಂದಿನ ಕಾರ್ಯವು ಸುಲಭವಾಗುವದು. ನಿನ್ನ ಅಭಿಪ್ರಾಯವೇನು ? "

" ಪತಿಯ ಹಿತದ ಕೆಲಸ ಮಾಡುವಾಗ ವಿಲಾಸಭೋಗಾದಿಗಳ ವಿಚಾರವು ಎಂದಿಗೂ ಅಡ್ಡಬರಲಾಗದು. ನಿರುದ್ಯೋಗಿಯಾದ ಹೆಂಗಸಿಗೆ

ಒಂದಿಲ್ಲ ಒಂದು ಉಪದ್ವ್ಯಾಪಗಳು ಬೇಕೇಬೇಕಾಗುತ್ತವೆ. ಹೀಗಿರಲು ಇಂಥ ಮಹತ್ವದ ಕೆಲಸದಲ್ಲಿ ತೊಡಗಿರಲು ನನಗೆ ಆನಂದವೇ ಸರಿ!" ಎಂದು ಹೀರಾಸುಲ್ತಾನೆಯು ಹೇಳಿದಳು.

ವಾಚಕರೇ, ನಡೆಯಿರಿನ್ನು. ಔರಂಗಜೇಬ ಸುಲ್ತಾನನಿವನು! ಇವನೊಡನೆ ಎಷ್ಟು ಸಲಿಗೆ ಅಷ್ಟು ಸಲಿಗೆ. ನಾವಿಲ್ಲಿ ಮರೆಗೆ ನಿಂತುಕೊಂಡಿರುವದು ಅವನಿಗೆ ತಿಳಿದರೆ ನಿಮ್ಮ ಗತಿಯೇನಾಗುವದು ಬಲ್ಲಿರೋ?

## ೧೦

## ಕಟಿಕನೂ ರಾಜನಂದಿನಿಯೂ

ಶ್ರೀಮಂತರ ಮನೆಯ ತಳ-ಅಂತಸ್ತಿನಲ್ಲಿ ಸೇವಕರೂ, ಅಡಿಗೆ ನೀರಿನವರೂ, ಚಿಕ್ಕ ಸಂಬಳದ ಕಾರಕೂನ ಗುಮಾಸ್ತರೂ ಇರತಕ್ಕವರು. ಕೆಲಸಬೊಗಸೆಗಳಾದ ಬಳಿಕ ಈ ಜನರು ತಮ್ಮತಮ್ಮ ಕೋಣೆಗಳನ್ನು ತಾವೇ ಉಡಗಿಕೊಂಡು ಯಜಮಾನರ ಶೇಷವಸ್ತ್ರಗಳನ್ನು ಧರಿಸಿ ಒಳ್ಳೇ ಆಸ್ಥೆಯಿಂದ ಕುಳಿತುಕೊಂಡು ಹೊಗೆ-ಸೊಪ್ಪು ಭಂಗಿ-ಸೊಪ್ಪುಗಳನ್ನು ಸೇದುತ್ತ ದೊಡ್ಡದೊಡ್ಡವರ ಮನೆಯ ಕೌಲೀನಗಳನ್ನು ತೆಗೆದು ಮನಸೋಕ್ತವಾಗಿ ಹರಟೆ ಹೊಡೆಯುವರು.

ವಜೀರ ಸಾದುಲ್ಲಾಖಾನನ ಮನೆಯ ತಳ-ಅಂತಸ್ತಿನಲ್ಲಿರುವ ಒಂದು ಕೋಣೆಯಲ್ಲಿ ಒಬ್ಬ ಭವ್ಯಕಾಯದ ಮನುಷ್ಯನು ಕುಳಿತಿದ್ದನು. ಅವನು ಆ ಕೋಣೆಯ ತುಂಬ ಕುಳಿತಿದ್ದನೆಂದರೂ ಅಡ್ಡಿ ಇಲ್ಲ! ಗೋಪುರಾಕಾರವಾಗಿ ಕುಳಿತಿರುವ ಆ ಮಹಾಕಾಯನ ಆಸನದ ವಿಸ್ತಾರವು ಅತಿ ದೊಡ್ಡದು. ಮುಂಡಿಗೆಯ ತುಂಡುಗಳ ಮೇಲಿರಿಸಿದ ತುಂಬಿದ ಚೀಲದಂತಿರುವ ಅವನ ಹೊಟ್ಟೆಯು ಎದ್ದುಕಾಣಿಸುತ್ತಿತ್ತು. ಹೊಟ್ಟೆಯ ವಿಸ್ತಾರಕ್ಕಿಂತಲೂ ಅವನ ಎದೆಕಟ್ಟು ಸಣ್ಣದು. ಆನೆಯ ಕುತ್ತಿಗೆಯಂತಿರುವ ಅವನ ಕುತ್ತಿಗೆಯ ಮೇಲಿರುವ ಮುಖವು ಗುಳ್ಳವನಂತೆ ವಿರಾಜಿಸುತ್ತಿತ್ತು. ಗಳಿಗೆ ಚಲ್ಲಣವನ್ನೂ, ತೇರಿನ ಗವಸಣಿಗೆಯಂತಿರುವ

ನಿಲುವಂಗಿಯನ್ನೂ ತೊಟ್ಟು ಗೋರಬಿನಂತಿರುವ ಟೊಪ್ಪಿಗೆಯನ್ನು ಹಾಕಿ ಕೊಂಡು ಕುಳಿತಿರುವ ಆತನ ವೇಷವೈಚಿತ್ರ್ಯವನ್ನು ಕಂಡರೆ ಅಂಜಿಕೆ ಬರಬಹುದಾಗಿತ್ತು. ಹೊಟ್ಟೆಯು ಭವ್ಯವಾದ ತಿದಿಯು ಎಡೆಬಿಡದೆ ಊದು ತ್ತಿರಲು ಆಘಾತ ಪ್ರಮಾಣವಾಗಿ ಹೊರಟ ಉಸುರಿಗೆ ಗೆಣಸಿನಂತಿರುವ ಅವನ ಮೂಗು ಸಾಲದೆ ಹೋದ್ದರಿಂದ ಅವನು ತನ್ನ ವಿಸ್ತಾರವಾದ ಬಾಯಿಯನ್ನು ತೆರೆದಿಟ್ಟಿದ್ದನು. ಪರಿಕೆಯಂತೆ ತಿಳುವಾಗಿರುವ ತನ್ನ ಗಡ್ಡಕ್ಕೆ ತಾನು ಹಚ್ಚಿರುವ ಹಸರುಬಣ್ಣವು ಹೇಗೆ ಒಪ್ಪುತ್ತದೆಯೋ ಎಂದು ಅವನು ತನ್ನ ಮುಂದಿರುವ ಕನ್ನಡಿಯಲ್ಲಿ ನೋಡಿಕೊಳ್ಳು ತ್ತಿದ್ದನು.

ಆ ವ್ಯಕ್ತಿಯ ಹೆಸರು ಅಬದುಲ್‌ಮಜೀದನು. ಅಬುದಲ್‌ಮಜೀದನ ವಂಶಪರಂಪರಾಗತವಾದ ವೃತ್ತಿಯೆಂದರೆ ಗೋವಧ ಮಾಡುವದು. ಆ ಗೋಘಾತಿಯು, ಹೇಗೋ ಏನೋ, ವಜೀರ ಸಾದುಲ್ಲಾಖಾನನ ಪಾಕ ಶಾಲಾಧಿಪತಿಯಾಗಿದ್ದನು. ಈ ಅಡಿಗೆಯವನು ತನ್ನ ಕೆಲಸದಲ್ಲಿ ಒಳ್ಳೇ ಕುಶಲನಾಗಿದ್ದರಿಂದ ಯಜಮಾನರ ಕೃಪೆಯು ತನ್ನ ಮೇಲೆ ಅಧಿಕವಾಗಿ ರುವದನ್ನು ಅರಿತು ಅವನು ಗರ್ವದಿಂದ ಕೊಬ್ಬೇರಿ ಉಳಿದ ಸೇವಕ ಜನ ರೊಡನೆ ಮಾತುಕಥೆ ಬೆಳಿಸದೆ ತನ್ನ ಕೋಣೆಯಲ್ಲಿ ತಾನೇ ತಾನೊಬ್ಬ ನಾಗಿ ಕುಳಿತುಕೊಂಡಿರುತ್ತಿದ್ದನು. ಅವನಂಥ ವಿಕಾರ್‍ಯನಾದ ಪುರುಷ ನಿಗೆ ಮೋಹಿತಳಾಗಿ ಅವನೊಡನೆ ಪ್ರೇಮವನ್ನು ಬಳಸುವ ಹೆಂಗಸು ಯಾರು! ಸ್ತ್ರೀಪ್ರೇಮದ ಸೊಗಸಿಗೆ ಪರಕೀಯನಾಗಿರುವ ಪುರುಷನು ಸ್ವಸ್ಥಚಿತ್ತನಾಗಿರದೆ ಯಾವಾಗಲೂ ದುಮುದುಮುನೆ ಉರಿಯುತ್ತಿರು ವನು. ಅವನ ಮನಸ್ಸಿನಲ್ಲಿ ಸುವಿಚಾರಗಳಿಗೆ ಆಸ್ಪದವಿರುವದಿಲ್ಲ. ಅವನ ಹೃದಯದಲ್ಲಿ ದಯೆಗೆ ಆಸ್ಪದವಿರದು. ದ್ರವ್ಯಾರ್ಜನದ ಹವಣಿಕೆ, ಇದ್ದಷ್ಟು ಅಧಿಕಾರದ ಹೆಮ್ಮೆಗಳ ಹೊರತಾಗಿ ಅವನಲ್ಲಿ ಬೇರೊಂದು ವಿಚಾರವಿಲ್ಲ. ಅಬದುಲ್ ಮಜೀದನ ಮನೋವೃತ್ತಿಯು ಹೀಗೆಯೇ ಇತ್ತು.

ಆ ಕಟುಕನು ತನ್ನ ಮುಖದ ಶೋಭೆಯನ್ನು ಕನ್ನಡಿಯಲ್ಲಿ ನೋಡಿ ಸಂತೋಷಪಡುತ್ತಲಿರುವಾಗ ಯಾವನೋ ಒಬ್ಬ ಗೃಹಸ್ಥನು ಅಲ್ಲಿಗೆ

ಬಂದು "ಸಲಾಮ್ ಅಲೇಕಮ್, ಅಬದುಲ್ ಮಜೀದ ಸಾಹೇಬ, ಕ್ಷೇಮವಷ್ಟೆ?" ಎಂದು ಕೇಳಿದನು.

ಅಬದುಲ್ಲನು ಆ ಸೊಲ್ಲುಕೇಳಿ ಬೆದರಿ ಹೊರಳಿ ನೋಡಿದಾಗ ಉತ್ತಮವಾದ ಪೋಷಾಕು ಮಾಡಿಕೊಂಡಿರುವ ಒಬ್ಬ ಸದ್ಗೃಹಸ್ಥನನ್ನು ಕಂಡನು. ಅವನೊಳ್ಳೇ ಪ್ರಯಾಸದಿಂದ ತನ್ನ ಗಳಿಗೆಯ ಹೊಟ್ಟೆಯನ್ನು ಹೊತ್ತುಕೊಂಡೆದ್ದು ಆ ಅಭ್ಯಾಗತನಿಗೆ ಪ್ರಣಾಮ ಮಾಡಿ "ಆದಾಬ್ ಹಕೀಮಸಾಹೇಬ, ಹೀಗೆ ದಯಮಾಡಿಸಬೇಕು. ಶೂಕ್ರುಅಲ್ಲಾ! ತಮ್ಮಂಥ ಸರದಾರರ ಪಾದಧೂಲಿಯನ್ನು ಹೀಗೆ ಅಕಸ್ಮಾತ್ತಾಗಿ ಕಾಣಬೇಕಾದರೆ ನನ್ನಂಥ ಕಂಗಾಲನ ಭಾಗ್ಯವೇ ಸರಿ! ಹಕೀಮ ಸಾಹೇಬರ ಆಜ್ಞೆ ಏನಿರುವದೋ ಅದನ್ನು ಈ ದಾಸನ ತಲೆಯಮೇಲಿರಿಸಬೇಕು." ಎಂದು ಮಾತಿಗೊಮ್ಮೆ ತಲೆಬಗ್ಗಿಸಿ ಪ್ರಣಾಮ ಮಾಡುತ್ತ ಬೆಸಗೊಂಡನು.

"ಕೂತುಕೊಳ್ಳಿ ಸಾಹೇಬರೆ, ನಿಮಗೊಂದು ಮಹತ್ವದ ಸಂಗತಿಯನ್ನು ಹೇಳಬಂದಿರುವೆನು. ಈ ಸಮೀಪದಲ್ಲಿ ಅನ್ಯರಾರೂ ಇಲ್ಲವಷ್ಟೇ?" ಎಂದು ಕೇಳಿ ಹಕೀಮನು ಅಲ್ಲಿ ಹಾಸಿರುವ ರತ್ನಗಂಬಳಿಯ ಮೇಲೆ ಕುಳಿತು ಅಬದುಲ್ಲನನ್ನು ಕೈಹಿಡಿದು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡನು.

"ಬಿಡಿರಿ ಮೆಹರ್ಬಾನ್! ತಮ್ಮಂಥ ಕುಲೀನರಾದ ಸರದಾರರ ಸಮೀಪದಲ್ಲಿ ಕುಳಿತುಕೊಳ್ಳುವದು ನನ್ನಂಥ ಪಾಮರನ ಯೋಗ್ಯತೆಯೇ? ತಮ್ಮ ಪಾದರಕ್ಷಗಳ ಬಳಿಯಲ್ಲಿ ಕುಳಿತುಕೊಳ್ಳುವವನು ನಾನು!" ಎಂದು ಅಬದುಲ್ಲನು ಹಿಂಜರಿಯುತ್ತ ನುಡಿದನು

"ದೋಸ್ತ, (ಮಿತ್ರರೆ) ನೀವೀಗ ನಿಮ್ಮ ಕೀಳು ತರಗತಿಯನ್ನು ಕಳೆದುಕೊಂಡಿರುವಿರಿ. ಶಹಾಜಾದಿ ರೋಶನಾರಾ ಬೇಗಮ್ ಸಾಹೇಬರ ಕೃಪಾಪಾತ್ರರಾದ ನೀವು ನಮ್ಮಂಥವರ ತೊಡೆಗೆ ತೊಡೆ ಹಚ್ಚಿಯೇ ಕುಳ್ಳಿರತಕ್ಕವರು." ಎಂದು ಹಕೀಮ ದಾವುದನು ಮುಗುಳುನಗೆ ನಗುತ್ತ ಹೇಳಿದನು.

ರೋಶನಾರೆಯ ಹೆಸರು ಕೇಳುತ್ತಲೆ ಅಬದುಲ್ಲನು ನೆಲದ ಮಣ್ಣು ತೆಗೆದುಕೊಂಡು ತನ್ನ ಗಡ್ಡಕ್ಕೆ ಹಚ್ಚಿ ಅನೇಕಾವರ್ತಿ ಪ್ರಣಾಮ ಮಾಡಿ

"ಏನು ಹೇಳಿದಿರಿ ಸರದಾರಸಾಹೇಬ?" ಎಂದು ಆಶ್ಚರ್ಯಚಕಿತನಾಗಿ ಕೇಳಿದನು.

"ಅಬದುಲ್ಲಸಾಹೇಬ, ರಾಜಕಾರಣದ ಒಂದಾನೊಂದು ಕೆಲಸವನ್ನು ಹೇಳಿದರೆ ಅದನ್ನು ನೀವು ವಿಶ್ವಾಸದಿಂದಲೂ ದಕ್ಷತೆಯಿಂದಲೂ ಮಾಡಬಲ್ಲಿರೆಂಬ ವರ್ತಮಾನವು ರೋಶನಾರಾ ಬೇಗಮ್ಮರವರ ಕಿವಿಗೆ ಬಂದಿರುವದರಿಂದ ಆ ಜಗತ್‌ಪ್ರದೀಪರಾದ ರಾಜನಂದಿನಿಯವರು ನಿಮ್ಮೊಡನೆ ಒಂದು ಆಲೋಚನೆಯನ್ನು ಮಾಡಲಿಚ್ಛಿಸಿದ್ದಾರೆ. ಅವರಾಜ್ಞೆಯಂತೆ ನಡಕೊಳ್ಳಲು ನೀವು ಒಪ್ಪುವಿರೋ?"

"ಯಾ ಸುಭಾನಲ್ಲಾ! ಈ ಪಾಮರನು ಜನ್ಮ ತೆಗೆದುಕೊಂಡದ್ದೇ ಏತಕ್ಕೆ? ಬೇಗಮ್‌ಸಾಹೇಬರ ಆಜ್ಞೆಯೇ ಪ್ರಮಾಣವು!" ಎಂದು ಆ ಲಂಬೋದರನು ಮುಂಬರಿದು ಪ್ರಣಾಮಮಾಡಿ ನುಡಿದನು.

"ವಾಃ! ಈ ನಿಮ್ಮ ರಾಜನಿಷ್ಠೆಯ ನುಡಿ ಕೇಳಿ ನೀವು ವಿಶ್ವಾಸಕ್ಕೆ ಪಾತ್ರರೆಂಬುವ ಮಾತು ಸರಿಯಾದದ್ದೆಂದು ನಾನೀಗ ಮನಗಂಡೆನು. ಅಬದುಲ್‌ಮಜೀದ, ನೀವು ದೈವ ತೆಗೆದಿರಿ! ಇಲ್ಲಿ ನೋಡಿರಿ, ಬೇಗಮ್‌ಸಾಹೇಬರು ನಿಮ್ಮ ಕಾರ್ಯಕ್ಷಮತೆಯನ್ನರಿತು ನಿಮಗೆ ಈ ಸುವರ್ಣರಾಶಿಯನ್ನು ಕೊಡಲು ನನಗೆ ಆಜ್ಞಾಪಿಸಿರುವರು." ಎಂದು ನುಡಿದವನೇ ಹಕೀಮ ದಾವುದನು ಒಂದು ಸಾವಿರ ಅಕಬರೀ ಮೋಹರುಗಳನ್ನು, ಆ ಲೋಭಿಯಾದ ಕಟಕನ ಕಣ್ಣು ಕುಕ್ಕುವಂತೆ ಕಂಬಳಿಯ ಮೇಲೆ ಸುರಿದನು.

ಒಂದೇ ಮೋಹರಿಗಾಗಿ ಸಮಗ್ರ ಒಂದು ತಿಂಗಳದ ವರೆಗೆ ಬಗಲಲ್ಲಿ ತಿಳಿನೀರು ಸುರಿಯುವ ಹಾಗೆ ದುಡಿಯುತ್ತಿರುವ ಆ ಅಡಿಗೆಯವನು ತನ್ನ ಎದುರಿಗೆ ರಾಶಿಯಾಗಿ ಬಿದ್ದಿರುವ ಆ ಸುವರ್ಣನಾಣ್ಯಗಳನ್ನು ಕಂಡು ಬೆರಗಾಗಿ ಹೋದನೆಂಬದಕ್ಕೆ ಸಂದೇಹವೇನು? ಅವನು ಆ ಬಂಗಾರದ ಬಟ್ಟಲವನ್ನು ಮುಟ್ಟಲು ಧೈರ್ಯ ಸಾಲದೆ "ಈ ಧನವೇಕೆ ಹಕೀಮ ಸಾಹೇಬ, ಬೇಗಮ್ಮಸಾಹೇಬರು ಹಾಗೆಯೇ ಆಜ್ಞಾಪಿಸಿದ್ದರೂ ಈ ದಾಸನು ತನ್ನ ತಲೆ ಕಡಿದು ಕೊಡಲಿಕ್ಕೆ ಬದ್ಧನಲ್ಲವೆ?" ಎಂದು ಆ ಮೋಹರುಗಳಲ್ಲಿಯೇ ದೃಷ್ಟಿಯನ್ನಿಟ್ಟು ನುಡಿದನು.

“ಹಾಗಲ್ಲ. ದಿಲ್ಲಿಯ ಸಾರ್ವಭೌಮರ ಚಿರಂಜೀವಿಯಾದವರು, ಏನೂ ಕೊಡದಲೆ ಯಾರ ಕೈಯಿಂದಾದರೂ ಕೆಲಸ ಮಾಡಿಸಿಕೊಳ್ಳುವ ದಿಲ್ಲ. ಅಂಥವರು ಕೈಯೆತ್ತಿ ಕೊಡಬಂದರೆ ಕಾಸೆರಡು ಕಾಸು ಕೊಡು ವರೆ? ಅಬದುಲ್ಲ ಸಾಹೇಬ, ಈಗ ಕೊಟ್ಟದ್ದು ಏನೂ ಅಲ್ಲ, ಕಂಡಿರಾ! ಬೇಗಮ್ ಸಾಹೇಬರವರ ಮನಸ್ಸಂತೋಷವಾಗುವಂತೆ ನೀವು ಕೆಲಸ ಮಾಡಿದರೆ ಅವರು ನಿಮ್ಮನ್ನು ಮನಸಬದಾರರನ್ನಾಗಿ ಮಾಡುವರು” ಎಂದು ಹಕೀಮನು ಹೇಳಿದನು.

ಈ ಮಾತು ಕೇಳಿ ಅಬದುಲ್ಲನಿಗೆ ಸ್ವರ್ಗವು ಮೂರೇ ಬೊಟ್ಟು ಉಳಿದಂತಾಯಿತು. ತನ್ನ ಮುಂದೆ ಬಿದ್ದಿರುವ ಧನರಾಶಿಯನ್ನೂ ಮುಂದೆ ತನಗೆ ಪ್ರಾಪ್ತವಾಗುವ ಐಶ್ವರ್ಯವನ್ನೂ ಕಂಡು ಅವನು ಲೋಭಪರವಶನಾಗಿ ಹೋದನು. ಮೊದಲೇ ಗೊಗ್ಗರದನಿಯುವನಾದ ಆ ಗಂಡಕನ ಕುತ್ತಿಗೆಯು ಹರ್ಷಾತಿರೇಕದ ಭರಕ್ಕಾಗಿ ಉಬ್ಬಿದ್ದರಿಂದ ತಾನು ಪಟ್ಟಿರುವ ಕೃತಜ್ಞತೆಯನ್ನು ವ್ಯಕ್ತಪಡಿಸಲು ಅವನಿಗೆ ಬಾಯಿ ಬರಲೊಲ್ಲದು. ಅಂತಿಂತು ಮಾಡಿ ಪ್ರಯಾಸದಿಂದ ಅವನು ನುಡಿದದ್ದು: “ಬೇಗಮ್ಮ ಸಾಹೇಬರ ಕೃಪೆಗೆ ಪಾತ್ರನಾದವನು ಸುಲ್ತಾನನಾಗಬಹುದು. ಈ ದಾಸನು ಅವರೊಡನೆ ಕೇವಲವಾದ ವಿಶ್ವಾಸದಿಂದ ವರ್ತಿಸುವನು. ಈ ಅಬದುಲ್ಲನು ವಚನಕೊಟ್ಟಬಳಿಕ ಪ್ರಾಣಹೋದರೂ ತಿರುಗಿ ಬೀಳುವವನಲ್ಲ. ಶಹಾಜಾದಿ ರೋಶನಾರಾ ಬೇಗಮ್ಮಸಾಹೇಬರು ಎಂಥ ಬಿಕ್ಕಟ್ಟಿನ ಕೆಲಸವನ್ನು ಹೇಳಿದರೂ ಮಾಡಲಿಕ್ಕೆ ಹಿಂಜರಿಯುವವನು ನಾನಲ್ಲ. ಅವರದೇನು ಕೆಲಸ?”

“ವಿಶ್ವಾಸದ ಕೆಲಸವಂತೆ! ಅದನ್ನು ರೋಶನಾರಾ ಬೇಗಮ್ಮರವರು ನನ್ನ ಮುಂದೆ ಹೇಳುವರೆ? ಸಂಜೆಗೆ ನೀವು ನನ್ನ ಮನೆಗೆ ಬನ್ನಿರಿ. ನಾನು ನಿಮ್ಮನ್ನು ಕರಕೊಂಡು ಹೋಗಿ ಬೇಗಮ್ಮಸಾಹೇಬರ ಸಂದರ್ಶನವನ್ನು ಮಾಡಿಸುವೆನು.”

ಇಷ್ಟಾದ ಬಳಿಕ ಆ ಅಡಿಗೆಯುವನು ಯಜಮಾನರ ಮನೆಯಲ್ಲಿ ಕದ್ದಿಟ್ಟ ರುಚಿಕರವಾದ ಕೆಲವು ಒಡೆಗಳನ್ನೂ ಚೀನೀ ಹೂಜಿಯ ತುಂಬ ಸರಾಯಿಯನ್ನೂ ಹಕೀಮ ದಾವುದನ ಮುಂದಿರಿಸಿ ತೆಗೆದುಕೊಳ್ಳಬೇಕೆಂದು ಬಹುಪರಿಯಾಗಿ ಆಗ್ರಹಮಾಡಿ ಹೇಳಿದನು. ಆ ಸರದಾರನು

ಅನಿವಾರ್ಯಹಕ್ಕಾಗಿ ಅವುಗಳನ್ನು ಸ್ವೀಕರಿಸಿದಂತೆ ಮಾಡಿದನು. ಆಮೇಲೆ ಆ ಹಕೀಮನು ಅಬದುಲ್ಲನನ್ನು ಕುರಿತು "ಸಂಜೆಗೆ ತಪ್ಪದೆ ನನ್ನ ಮನೆಗೆ ಬರಬೇಕು ಕಂಡಿರೋ!" ಎಂದು ಶಾಸನಗೈದು ಹೊರಟೆದ್ದು ತನ್ನ ಮನೆಗೆ ಹೋದನು.

ಸಾಯಂಕಾಲದಲ್ಲಿ ವಜೀರನ ಭೋಜನವಾದ ಕೂಡಲೆ ಅಬದುಲ್ಲ ಮಜೀದನು ಗಲಿಬಿಲಿಯಿಂದ ತನ್ನ ಕೋಣೆಗೆ ಬಂದು ಪೆಟ್ಟಿಗೆಯಲ್ಲಿರುವ ತನ್ನ ಉತ್ತಮವಾದ ಪೋಷಾಕು ತೆಗೆದು ಮೈಮೇಲೆ ಹಾಕಿಕೊಳ್ಳ ಲಾರಂಭಿಸಿದನು. ದಿನದ ಗಳಿಗೆ-ಚಲ್ಲಣವನ್ನು ತೆಗೆದೊಗೆದು ಖಡಖಡಿ ಸುವ ಕೆಂಪು ಕುತನಿಯ ಚಲ್ಲಣವನ್ನು ತೊಟ್ಟುಕೊಂಡನು. ಮೊಣಕಾಲು ಗಳನ್ನು ಮುಚ್ಚುವಷ್ಟು ಉದ್ದವಾದ ಹಸರು ರೇಸಿಮೆಯ ಡಗಲೆಯು (ನಿಲುವಂಗಿಯು) ಅವನ ಸ್ಥೂಲವಾದ ಕಾಯುವನ್ನು ಹೇಗೋ ಮುಚ್ಚಿತು. ಅವನು ತಲೆಗೆ ಹಾಕಿಕೊಂಡಿರುವ ಟೊಪ್ಪಿಗೆಯು ಇಂದ್ರ ಧನುವಿನ ಬಣ್ಣದ್ದಾಗಿದ್ದು ಅದಕ್ಕೆ ನರಿಯ ಬಾಲದಂಥ ಪ್ರಚಂಡವಾದ ರೇಸಿಮೆಯ ಗೊಂಡೆ ಇತ್ತು. ಕನ್ನಡಿಯನ್ನು ಮುಂದಿಟ್ಟುಕೊಂಡು ಕಡ್ಡಿಯಿಂದ ಕಣ್ಣಿಗೆ ಕಾಡಿಗೆ ಹಚ್ಚಿ ಅವನು ತುಪ್ಪಳದಂತಿರುವ ತನ್ನ ಗಡ್ಡಮಿಾಸೆಗಳನ್ನು ತಿದ್ದಿ, ಎಲ್ಲವೂ ಸರಿಯಾಗಿದೆ ಎಂಬ ಮನವರಿಕೆಯಾದ ಬಳಿಕ ಎದ್ದು ದಪ್ಪಾದ ಚಢಾವು (ಒಂದು ಪ್ರಕಾರದ ಜೋಡು) ಮೆಟ್ಟಿ ಕೊಂಡು ರಂಪ್ಪರಂಪ್ಪೆಂಬ ಸಪ್ಪಳದೊಂದಿಗೆ ಹಕೀಮನ ಮನೆಯ ಹಾದೀ ಹಿಡಿದು ನಡೆದನು.

ಬೆಳಕು ಮುಂತಾದದ್ದು ತೆಗೆದುಕೊಳ್ಳದೆ ಹಕೀಮನು ಅಬದುಲ್ಲ ನನ್ನು ಕರೆದುಕೊಂಡು ಕತ್ತಲೆಯಲ್ಲಿ ಸಣ್ಣಸಣ್ಣ ಸಂದಿಗಳೊಳಗಿಂದ ಹಾಯ್ದು ರೋಶನಾರಾ ಬೇಗಮ್ಮಳ ಮಂದಿರದ ಕಡೆಗೆ ನಡೆದನು.

ಹಕೀಮ ದಾವ್ಪದನನ್ನು ಕಾಣುತಲೆ ರೋಶನಾರೆಯು ಉತ್ಸುಕ ಳಾಗಿ "ಸರದಾರ ತಕ್ರೆಬಖಾನ, (ಇವನಿಗೇ ಜನರು ಹಕೀಮನೆಂದು ಕರೆಯುತ್ತಿದ್ದರು.) ನಿಮ್ಮ ಆಳು ಬಂದಿತೇನು?" ಎಂದು ಕೇಳಿದಳು.

ಹಕೀಮನು ರೋಶನಾರೆಗೆ ಪ್ರಣಾಮಮಾಡಿ "ಬೇಗಮ್ಮ ಸಾಹೇಬರೆ, ನಾನು ಅರೆವಾಸಿಯಾಗಿ ಕೆಲಸ ಮಾಡುವವನೇ? ನೀವು ಹೇಳಿದ

ಮನುಷ್ಯನನ್ನು ಒಡಂಬಡಿಸಿಕೊಂಡು ಬಂದಿದ್ದೇನೆ" ಎಂದು ಹೇಳಿದನು.

"ಶಾಬ್ಬಾಸ! ಅವನನ್ನು ಬೇಗನೆ ಒಳಕ್ಕೆ ಕರೆತನ್ನಿರಿ."

ಹಕೀಮ ದಾವುದನು ಅಬದುಲ್ಲ ಮಜೀದನನ್ನು ರೋಶನಾರೆಯ ಸನ್ನಿಧಾನಕ್ಕೆ ಕರೆತಂದು "ಸ್ವಾಮಿನಿ, ತಮ್ಮ ಕೃಪೆಗೆ ಪಾತ್ರನಾದ ನನ್ನ ಮಿತ್ರನು ತಾವು ಹೇಳಿದ ಕೆಲಸವನ್ನು ಹಿಂದುಮುಂದು ನೋಡದೆ ಮಾಡಿಕೊಡುವನು. ಇವನು ವಿಶ್ವಾಸಕ್ಕೆ ಪಾತ್ರನಾಗಿರುವನೆಂಬುದಕ್ಕೆ ನಾನೇ ಹೊಣೆಗಾರನು!" ಎಂದು ಎದೆಗೆ ಕೈಯಿಟ್ಟುಕೊಂಡು ಹೇಳಿದನು.

ಅಬದುಲ್ಲ ಮಜೀದನು ರೋಶನಾರೆಗೆ ಲೀನತೆಯಿಂದ ಪ್ರಣಾಮ ಮಾಡಿ "ಅನೇಕರನ್ನು ಪೋಷಿಸುವಂಥ ನನ್ನ ತಾಯಿಯವರೆ, ಈ ದಾಸನು ತನ್ನ ಹಣೆ ಕೊಯ್ದು ಮಣೆ ಮಾಡಿಕೊಡಲಿಕ್ಕೂ ಸಿದ್ಧನಿರುವನು. ಬೇಗಮ್ಮಸಾಹೇಬರವರು ನಿಶ್ಚಿಂತರಾಗಿ ಆಜ್ಞೆಗೈಯಬೇಕು." ಎಂದು ಬೆಸಗೊಂಡನು.

ವಾಃ! ಅಬದುಲ್ಲಸಾಹೇಬ, ಆಡಿದಂತೆಯೇ ನೀನು ಮಾಡಬಲ್ಲಿಯೆಂಬದಕ್ಕೆ ಸಂದೇಹವಿಲ್ಲ. ಹರವೆಯಂತೆ ವಿಸ್ತಾರವಾದ ನಿನ್ನ ಹೊಟ್ಟೆಯಲ್ಲಿ ಬೇಕಾದಷ್ಟು ವಿಶ್ವಾಸದ ಮಾತುಗಳು ಹಿಡಿಸಬಲ್ಲವು. ಅದಕ್ಕಾಗಿಯೇ ಸಾಮುದ್ರಿಕ ಲಕ್ಷಣವನ್ನು ಬಲ್ಲವರು, ಸ್ಥೂಲಕಾಯದವರಲ್ಲಿ ನಿಶ್ಚಿಂತೆಯಿಂದ ನಂಬಿಗೆಯನ್ನಿಡಬಹುದೆಂದು ಹೇಳುತ್ತಾರೆ" ಎಂದು ರೋಶನಾರೆಯು ಆ ಜ್ಞಾನಶೂನ್ಯನ ಅಪಹಾಸಮಾಡಿ ನುಡಿದರೂ ಅವನು ಅದೆಲ್ಲ ನಿಜವೇ ಎಂದು ನಂಬಿ, ಬ್ರಹ್ಮಾಂಡದಂತಿರುವ ಹೊಟ್ಟೆಯನ್ನು ದೇವರು ತನಗೆ ದಯಪಾಲಿಸಿದ್ದು ದೊಡ್ಡ ಉಪಕಾರವೇ ಎಂದು ನೆನೆದನು.

"ಮನುಷ್ಯನ ಹೊಟ್ಟೆಯಲ್ಲಿ ಕೈಹಾಕಿ ತೆಗೆದಂತೆ, ಬೇಗಮ್ಮಸಾಹೇಬರು ಅವನ ಅಂತರಂಗವನ್ನು ಕಂಡುಕೊಳ್ಳುವದರಲ್ಲಿ ಬಹು ಜಾಣರು. ಚತುರರಾದ ರಾಜನಂದಿನಿಯರೆ, ನಮ್ಮ ಅಬದುಲ್ಲಸಾಹೇಬನ ಹೊಟ್ಟೆಯಲ್ಲಿ ಬೇಕಾದ ವಸ್ತುಗಳು ಯಥೇಷ್ಟವಾಗಿ ಹಿಡಿಸಬಲ್ಲವಾದರೂ ಅದರಲ್ಲಿ ಎಳ್ಳಷ್ಟಾದರೂ ಕಪಟಕ್ಕೆ ಅವಕಾಶವಿಲ್ಲ ಕಂಡಿರಾ!"

ಎಂದು ತಕ್ರೀಬಖಾನನು (ಹಕೀಮ ದಾವುದನು) ಗಹಗಹಿಸಿ ನಕ್ಕು ನುಡಿದನು.

ಇದೆಲ್ಲ ಸ್ತುತಿಯೇ ಎಂದು ನಂಬಿ ಅಬದುಲ್ಲನು ರೋಶನಾರೆಗೂ ತಕ್ರೀಬನಿಗೂ ಅನೇಕಾವರ್ತಿ ಪ್ರಣಾಮಮಾಡಿ "ದೇವರೂ, ಬಾಯಿಯಿಂದ ಹೆಮ್ಮೆಯ ಮಾತುಗಳನ್ನಾಡುವವನು ನಾನಲ್ಲ! ಬೇಗಮ್ಮಸಾಹೇಬರ ಆಜ್ಞೆಯಾಗುವದೊಂದೇ ತಡ, ಈ ದಾಸನು ಅದನ್ನು ಹೇಗೆ ನೆರವೇರಿಸುವನೋ ನೀವೇ ಮನಗಾಣುವಿರಿ." ಎಂದು ನುಡಿದನು.

ಈ ಮಾತಿಗೆ ರೋಶನಾರೆಯು ನಕ್ಕು "ಕೇಳಿದಿರಾ ತಕ್ರೀಬಖಾನಜೀ, ಈ ನಿಮ್ಮ ಸ್ನೇಹಿತನ ಮಾತುಗಳನ್ನು! ಅವನು ಮಾಡುವ ಉತ್ತಮೋತ್ತಮ ಪಕ್ವಾನ್ನಗಳಿಗಿಂತಲೂ ಸವಿಯಾಗಿವೆ!" ಎಂದು ತನ್ನ ಅಭಿಪ್ರಾಯವನ್ನು ಹೇಳಿ ಅಬದುಲ್ಲನನ್ನು ಕುರಿತು—"ಅಬದುಲ್ಲ ಮಜೀದ, ಯಾವನಾದರೊಬ್ಬ ಮನುಷ್ಯನು ನನ್ನ ಜೀವಕ್ಕೆ ಗಂಡಾಂತರವನ್ನು ತರಲು ಹವಣಿಸುತ್ತಿದ್ದರೆ ನೀನೇನು ಮಾಡಬಲ್ಲಿ?" ಎಂದು ಕೇಳಿದಳು.

"ಜಗಜ್ಜ್ಯೋತಿಯಾಗಿದ್ದ ನನ್ನ ಮಾತೆಯವರೆ, ತಮ್ಮ ಜೀವಕ್ಕೆ ಗಂಡಾಂತರನನ್ನು ತರಲಿಚ್ಛಿಸುವವನ ಹೆಸರು ಹೇಳಿರಿ; ಎಲೆಗೆ ಸುಣ್ಣವನ್ನು ಹಚ್ಚುವಷ್ಟರಲ್ಲಿಯೇ ಅವನ ಕಡಿದ ತಲೆಯನ್ನು ಈ ಪಾದಗಳಿಗೆ ತಂದು ಸಮರ್ಪಿಸುವೆನು. ಇದಕ್ಕೆ ವಿಚಾರವೇಕೆ?"

"ಸ್ವಾಮಿನಿಯವರು ಕೇಳಿದಿರೇನು?" ಎಂದು ಹಕೀಮನು ಒಳ್ಳೇ ಸಂತೋಷವನ್ನು ತಾಳಿ ಕೇಳಿದನು.

"ಕೇಳಿದೆನು. ಆದರೆ ಬಾಯಿಯಿಂದ ಆಡುವದಕ್ಕೂ ಕೈಯಿಂದ ಮಾಡುವದಕ್ಕೂ ಹೆಚ್ಚು ಕಡಿಮೆ ಬಹಳಾಗಿರುವದು."

"ಮೆಹಬಾರ್ನ್, ಈ ಅಬದುಲ್ಲನು ಆಡಿದಂತೆ ಮಾಡಲಿಕ್ಕೆ ತಪ್ಪಿದರೆ ತಾವು ಈ ನನ್ನ ಕುತ್ತಿಗೆಯನ್ನು ಕಡಿದು ಹಾಕಿದರೂ ಒಪ್ಪುವೆನು." ಎಂದು ಪಶುತುಲ್ಯನಾದ ಗೋಘಾತಿಯು ನುಡಿದನು.

"ತಿಳಿದು ನೋಡಿ ಮಾತಾಡು ಅಬದುಲ್! ನನ್ನ ವೈರಿಯು ನನ್ನ ತಂದೆಯವರಾದ ಬಾದಶಹರೇ ಇರಬಹುದು! ಅವರ ವಜೀರರೇ ಇರ

ಬಹುದು! ಇಲ್ಲವೆ ನನ್ನ ಅಣ್ಣತಮ್ಮಂದಿರಲ್ಲಿ ಒಬ್ಬನಾದ ಸುಲ್ತಾನನಿರಬಹುದು!" ಎಂದು ರೋಶನಾರೆಯು ಆ ಪಾಪಕರ್ಮಿಯನ್ನು ಬೆದರಿಸಿ ನೋಡಿದಳು.

ಅಬದುಲ್ಲನು ಎಳ್ಳಷ್ಟಾದರೂ ಯೋಚಿಸದೆ "ಬೇಗಮ್ಮಸಾಹೇಬರ ಆಜ್ಞೆಯಾದರೆ ಮೇಲೆ ಹೇಳಿದ ಜನರಲ್ಲಿ ಒಬ್ಬನನ್ನೇಕೆ ಎಲ್ಲರನ್ನೂ ಸಾಲುಹಿಡಿದು ನಿಲ್ಲಿಸಿ ಕಡಿದು ಚೆಲ್ಲುವೆನು" ಎಂದು ಘುಡಘುಡನೆ ನುಡಿದನು.

"ನೋಡು! ಅಬದುಲ್ಲಮಜೀದ, ಇನ್ನೊಂದಾವರ್ತಿ ಚನ್ನಾಗಿ ತಿಳಿದುನೋಡಿ ಮಾತಾಡು! ನನ್ನ ವೈರಿಯಾರೆಂದು ನಾನು ಹೆಸರುಗೊಂಡು ಹೇಳಿದ ಬಳಿಕ, ಇಂಥವನು ನನ್ನ ರಾಜನು, ಇಂಥವನು ನನ್ನ ಹಡೆದ ತಂದೆಯು, ಇಂಥವನ ಉಪ್ಪು ನಾನು ಉಂಡಿದ್ದೇನೆ, ಮುಂತಾದ ನೆವಗಳನ್ನು ಹೇಳಿ ನೀನು ಹೇಳಿದಂತೆ ಮಾಡಲು ಹಿಂಜರಿದರೆ, ನಿನ್ನೀ ಅಕ್ರಾಳವಿಕ್ರಾಳವಾದ ದೇಹವನ್ನು ನಾನು ನುಚ್ಚುನೂರಾಗಿ ಕಡಿಸಿ ಚೆಲ್ಲುವೆನು. ಗೊತ್ತಿರಲಿ!"

"ಸಹಸ್ರಾವಧಿ ಗೋಗಳ ವಧವನ್ನು ಮಾಡಿದವರ ಹೊಟ್ಟೆಯಲ್ಲಿ ಹುಟ್ಟಿದವನಾದ ನಾನು ಸ್ವತಃ ಈ ಕೈಗಳಿಂದ ಅನೇಕ ಜನರ ಕೊಲೆಗಳನ್ನು ಮಾಡಿದ್ದೇನೆ. ನನಗಿನ್ನು ಒಬ್ಬ ಮನುಷ್ಯನನ್ನು ಕೊಂದು ಹಾಕುವದೆಂದರೆ ಹೆಚ್ಚಿನ ಮಾತಲ್ಲ. ಬೇಗಮ್ಮಸಾಹೇಬರ ವೈರವನ್ನು ಸಂಪಾದಿಸಿಕೊಂಡಿರುವ ಹತಭಾಗ್ಯನಾರು? ಹೇಳಬೇಕು."

"ಶಾಬಾಸ! ಇದು ನಿಶ್ಚಯವೇ?" ಎಂದು ರೋಶನಾರೆಯು ಉಬ್ಬಿನಿಂದ ಕೇಳಿದಳು.

"ನಿಶ್ಚಯ! ನಿಶ್ಚಯ!! ಪರ್ವತದಂತೆ ನಿಶ್ಚಲವಾದ ನಿಶ್ಚಯ!!!"

"ಇನ್ನೇನು ಚಿಂತೆಯಿಲ್ಲ. ಅಬದುಲ್, ನಾನು ಹೇಳಿದ ಕಾರ್ಯವನ್ನು ನೀನು ಮಾಡಿಕೊಟ್ಟೆಯಾದರೆ ನಿನ್ನನ್ನು ಸಾವಿರ ಕುದುರೆಯ ಸರದಾರನನ್ನಾಗಿ ಮಾಡುವೆನು. ಇದು ನೋಡು, ಈ ಕೊಳವೆಯಲ್ಲಿ ಸಾಕ್ಷಾತ್ ಪಯುಗಂಬರವರ ಗಡ್ಡದ ಕೂದಲು ಇದೆ. ಇದನ್ನು ಕೈಯಲ್ಲಿ ತೆಗೆದುಕೊಂಡು ಆಣೆ ಮಾಡಿ ಹೇಳು."

ಶಹಾಜಾದಿಯು ಕೊಟ್ಟ ಬಂಗಾರದ ಕೊಳಿವೆಯನ್ನು ಅಬದುಲ್ಲನು ಕೈಯಲ್ಲಿ ತೆಗೆದುಕೊಂಡು ಅದನ್ನು ಭಕ್ತಿಪುರಸ್ಸರವಾಗಿ ಚುಂಬಿಸಿ ಆ ಕಪಟಪುಂಜಳಾದ ರಾಜಕುಮಾರಿಯು ಹೇಳಿದ ಮೇರೆಗೆ ಆಣೆ ಮಾಡಿದನು.

"ಹುಲಿಯುಹುದೋ! ನನ್ನ ಚಿಂತೆಯನ್ನು ದೂರಮಾಡಲು ಸಿದ್ಧನಾಗಿರುವ ಶೂರ ಪುರುಷನೆ, ನೀನು ಸರದಾರನಾಗಲಿಕ್ಕೆ ಸರ್ವಥಾ ಯೋಗ್ಯನಾಗಿರುವಿ. ನೀನಿನ್ನು ನಿನ್ನ ಮನೆಗೆ ಹೋಗು. ಈ ನಮ್ಮ ಹಕೀಮ ಸಾಹೇಬರಿಗೆ ನನ್ನ ವೈರಿ ಯಾರೆಂಬದು ಗೊತ್ತುಂಟು. ಅವರು ಆ ವೈರಿಯನ್ನು ಸಂಹರಿಸುವ ಉಪಾಯವನ್ನಾದರೂ ನಿನಗೆ ಹೇಳಿಕೊಡುವರು. ಅವರು ಹೇಳಿದಂತೆ ಮಾಡಿತೋರಿಸಿದಿಯಾದರೆ ನಾಳೆಗೆ ನಿನ್ನ ಮನೀಷೆಗಳೆಲ್ಲವನ್ನು ನಾನು ಪೂರೈಸಿಕೊಡಲು ಸಿದ್ಧಳಿದ್ದೇನೆ." ಎಂದು ಹೇಳಿ ರೋಶನಾರೆಯು ತನ್ನ ಅಂತಃಪುರದಲ್ಲಿ ಸೇರಿಕೊಂಡಳು.

## ೧೧

## ಸಂದರ್ಶನ

ಔರಂಗಜೇಬ ಸುಲ್ತಾನನು ತನ್ನ ಸುಭೇದಾರಿಯ ಕೆಲಸಕ್ಕೆ ಹೋಗಲು ಕಟ್ಟಕಡೆಗೆ ಒಂದು ದಿವಸ ಹೊರಟನು. ಅವನ ಪ್ರಯಾಣದ ನಿಮಿತ್ತವಾಗಿ ಆ ದಿವಸ ಆಗ್ರಾ ಪಟ್ಟಣವೆಲ್ಲ ಗಜಬಜಿಸಿ ಹೋಯಿತು. ಸರದಾರ ಸೈನಿಕರೂ, ಮಾವುತ ರಾವುತರೂ, ಮೇಣೆ ಪಲ್ಲಕ್ಕಿಯವರೂ, ನಗಾರಿ ನೌಬತ್ತಿನವರೂ, ಒಳ್ಳೇ ಲಗುಬಗೆಯಿಂದ ತಮ್ಮತಮ್ಮ ಸಿದ್ಧತೆಗಾಗಿ ಓಡಾಡುತ್ತಿದ್ದರು. ಆ ದಿವಸ ಔರಂಗಜೇಬನಿಗಂತೂ ಉಸುರಾಡಿಸಲು ಅವಕಾಶವೇ ಇದ್ದಿಲ್ಲ. ಅವನು ಹಾಸಿಗೆಯಿಂದೇಳುವಷ್ಟರಲ್ಲಿಯೇ ನವಾಬ ಶಾಇಸ್ತೇಖಾನ್, ಸರದಾರ ದಾನಿಶ್‌ಮುಂದಖಾನ್, ಕಲಿಲ ಉಲ್ಲಾಖಾನ್, ಹಕೀಮ ದಾವುದ ಮುಂತಾದ ದೊಡ್ಡದೊಡ್ಡ ವ್ಯಕ್ತಿಗಳು ಆ ಸುಲ್ತಾನನ ಮಂದಿರಕ್ಕೆ ಬಂದು ಕೆಲಹೊತ್ತು ಅವನೊಡನೆ ಆಪ್ತಾ

ಲೋಚನೆಯನ್ನು ಮಾಡಿದರು. ಆಮೇಲೆ ಅವನು ತನ್ನ ಅಕ್ಕಳಾದ ಬೇಗಮ್ಮಸಾಹೇಬರ ಸಂದರ್ಶನವನ್ನು ಮಾಡಿಕೊಂಡು ಅವಳೊಡನೆ ಅನೇಕವಾದ ಸಲಿಗೆಯ ಮಾತಾಡಿದನು.

ಉಪಹಾರವಾದ ನಂತರ ಆ ನಟನು ತನ್ನ ಶುಭ್ರವಾದ ಪೋಷಾಕು ಮಾಡಿಕೊಂಡು ಅಣ್ಣನಾದ ದಾರಾಸುಲ್ತಾನನ ಮನೆಗೆ ಬಂದನು. ಔರಂಗಜೇಬನು ಕಪಟಿಯೂ, ತನ್ನನ್ನು ಮನಃಪೂರ್ವಕವಾಗಿ ದ್ವೇಷಿಸುವವನೂ ಎಂಬದು ಸುಲ್ತಾನ ದಾರಾಶಹನಿಗೆ ಸಂಪೂರ್ಣವಾಗಿ ತಿಳಿದಿದ್ದರೂ ಈ ಸಮಯದಲ್ಲಿ ಆವನು (ಔರಂಗಜೇಬನು) ತನ್ನ ಮನೆಗೆ ಕಾಲಿಲೆ ನಡೆಯುತ್ತ ಬಂದು ಬಹು ವಿನೀತನಂತೆ ಕುಳಿತದ್ದು ಕಂಡು ದಾರಾನಿಗೆ ಸಮಾಧಾನವೂ ಸಂತೋಷವೂ ಆಯಿತು.

“ ಮುಹಮ್ಮದ ಮುಹಿಯುದ್ದಿನ್. ( ಇದು ಔರಂಗಜೇಬನ ತೊಟ್ಟಿಲದಲ್ಲಿಯ ಹೆಸರು ) ಅಷ್ಟೇಕೆ ದೂರ ಕುಳಿತಿ? ಹೀಗೆ ಮೇಲಕ್ಕೆ ಬಾ ” ಎಂದು ನಿಷ್ಕಪಟಿಯಾದ ದರಾಯುಸನು ಬಂಧುಪ್ರೇಮದಿಂದ ತಮ್ಮನನ್ನು ಕೈಹಿಡಿದು ಮೇಲಕ್ಕೆ ಕುಳ್ಳಿರಿಸಿಕೊಂಡನು.

ಔರಂಗಜೇಬನು ಗಟ್ಟಿಯಾಗಿ ಅಣ್ಣನ ಕಾಲು ಹಿಡಿದು ನಮಸ್ಕರಿಸಿ “ ಸುಲ್ತಾನ ದರಾಯುಸರೆ, ಇಂದು ನಾನು ದೌಲತಾಬಾದಿಗೆ ಹೊರಡತಕ್ಕವನಿರುವದರಿಂದ ತಮ್ಮ ಆಜ್ಞೆಯನ್ನು ಪಡಕೊಂಡು ಹೋಗಬೇಕೆಂದು ಬಂದಿದ್ದೇನೆ. ಅಣ್ಣಾ, ನಾನೆಷ್ಟಾದರೂ ತಮಗಿಂತಲೂ ಚಿಕ್ಕವನು. ಅಜ್ಞಾನದ ಮೂಲಕವಾಗಿ ನನ್ನಿಂದ ಏನಾದರೂ ಅಪರಾಧಗಳಾಗಿದ್ದರೆ ಪಿತೃಸಮಾನರಾದ ತಾವು ನನ್ನನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇನೆ ” ಎಂದು ನುಡಿದು ಕಣ್ಣಿಗೆ ಹೇಗೆ ನೀರು ತಂದನೋ ದೇವರೇ ಬಲ್ಲ !

“ ಪ್ರಿಯ ಬಂಧುವೆ, ನನಗೆ ಅಪರಾಧಗಳ ಸ್ಮರಣವೇ ಕಡಿಮೆ. ಅಪರಾಧಿಯು ನಿನ್ನೆ ಮಾಡಿದ ತಪ್ಪುಗಳು ಇಂದು ನನ್ನ ನೆನಪಿನಲ್ಲಿ ಇರುವದಿಲ್ಲ. ನಿನ್ನ ಅಪರಾಧಗಳನ್ನು ನಾನು ಕ್ಷಮಿಸುತ್ತೇ ಬಂದಿರುವೆನು. ತೊಳೆದು ಹೋದ ಅಪರಾಧಗಳನ್ನು ಪುನಃಪುನಃ ಕ್ಷಮಿಸುವದೆಂತು? ಆಗಲಿ, ನೀನು ದಕ್ಷಿಣಕ್ಕೆ ಹೋಗಿ ನಿನ್ನ ಅಧಿಕಾರದ ಕೆಲಸವನ್ನು ಒಳ್ಳೇ

ದಕ್ಷತೆಯಿಂದಲೂ ಜಾಣ್ಮೆಯಿಂದಲೂ ಮಾಡಿ ಪ್ರಜರಿಗೂ ನಮ್ಮ ಬಾದಶಹರಿಗೂ ಸಂತೋಷವನ್ನು ಕೊಡತಕ್ಕದ್ದು ಕಂಡಿಯಾ?" ಎಂದು ದಾರಾಸುಲ್ತಾನನು ಮಮತೆಯಿಂದ ಹೇಳಿದನು.

"ಅಣ್ಣಾ, ತಮ್ಮಿಂದ ನಾನು ತುಂಬಾ ಉಪಕೃತನಾದೆನು. ನಾನು ದಕ್ಷಿಣಕ್ಕೆ ಹೋದ ಬಳಿಕ ಅಲ್ಲಿ ಏನಾದರೂ ಬಿಕ್ಕಟ್ಟಿನ ರಾಜಕಾರಣಗಳು ಉದ್ಭವಿಸಿದರೆ ನಾನು ತಮ್ಮ ಅಭಿಪ್ರಾಯವನ್ನು ಕೇಳಿಕೊಳ್ಳುವೆನು. ರಾಜಕಾರಣಧುರಂಧರರಾದ ತಾವು ನನಗೆ ಯೋಗ್ಯವಾದ ಮಾರ್ಗನಿರ್ದೇಶವನ್ನು ಕೊಡುವಿರೆಂದು ಆಶಿಸುತ್ತೇನೆ."

"ಚಿಂತೆ ಬಿಡು ದಕ್ಷಿಣದಲ್ಲಿ ಉದ್ಭವಿಸಿದ ರಾಜಕಾರಣಗಳೆಂದರೆ ಸಾಮ್ರಾಜ್ಯದ ರಾಜಕಾರಣಗಳೇ ಅಲ್ಲವೆ?"

"ಇನ್ನೊಂದು ಪ್ರಾರ್ಥನೆ ಇದೆ! ಬಾದಶಹರ ಪ್ರಕೃತಿಯು ಅಸ್ವಸ್ಥವಾಗುತ್ತ ನಡೆದಿದೆ. ಪ್ರಿಯ ಬಂಧು, ಅವರ ಪ್ರಕೃತಿಗೆ ಆರಾಮವಾಗುವಂತೆ ನೀವು ಕಾಲಕಾಲಕ್ಕೆ ಉಪಚಾರವನ್ನು ಮಾಡಿಸುವಿರೆಂದು ನಾನು ನಂಬಿಯೇ ಇರುವೆನು. ಆದರೆ ಪಿತೃವಾತ್ಸಲ್ಯಕ್ಕಾಗಿ ನಾನು ಹೇಳಿಕೊಳ್ಳುತ್ತೇನೆ." ಎಂದು ಔರಂಗಜೇಬನು ಮತ್ತೆ ಕಣ್ಣಿಗೆ ನೀರು ತಂದು ನುಡಿದನು.

"ವಾಃ! ಪಿತೃಭಕ್ತಿಪುರಸ್ಸರನಾಗಿ ನೀನು ಹೀಗೆ ನನಗೆ ಸೂಚನೆ ಕೊಟ್ಟದ್ದು ಸಹಜವೇ. ಆದರೂ ಯೋಚಿಸಬೇಡ. ನಮ್ಮ ಹಿರಿಯರ ಜೀವಕ್ಕೆ ಆರಾಮವಾಗುವಂತೆ ಸಕಲವಾದ ಪ್ರಯತ್ನಗಳನ್ನು ನಾನು ಆಸ್ಥೆಯಿಂದ ಮಾಡುವೆನು."

ಔರಂಗಜೇಬನು ಎದ್ದು ನಿಂತು ತನಗಿನ್ನು ಅಪ್ಪಣೆ ಕೊಡಬೇಕೆಂದು ಕೇಳಿಕೊಂಡನು. ದರಾಯುಸನು ತಮ್ಮನನ್ನು ಅಪ್ಪಿಕೊಂಡು ದಕ್ಷಿಣದಲ್ಲಿ ಒಳ್ಳೇ ದಕ್ಷತೆಯಿಂದ ಕೆಲಸ ಮಾಡತಕ್ಕದ್ದೆಂದು ಮತ್ತೆ ಸೂಚಿಸಿ ತಮ್ಮನಿಗೆ ಹೋಗಲಪ್ಪಣೆಯಿತ್ತನು. ಆಗಲಾ ಕಪಟಿಯಾದ ತಮ್ಮನು ಧ್ವನಿ ತಗ್ಗಿಸಿ "ಅಣ್ಣಾ, ನೀವಾದರೂ ಮೈ ತುಂಬ ಕಣ್ಣುಳ್ಳವರಾಗಿ ಇರತಕ್ಕದ್ದು ಕಂಡಿರಾ! ಹೊರಗೂ ಅರಮನೆಯಲ್ಲಿಯೂ ಕೂಡಿಯೇ ದ್ರೋಹಿಗಳಿರುವರು. ಕೆಲವರು ಬಾದಶಹರ ಕಿವಿಯೂದಿ ನಿಮ್ಮ ವಿರುದ್ಧ

ವಾಗಿ ಅವರ ಮನಸ್ಸು ಕೆಡಿಸಲು ಯತ್ನಿಸುತ್ತಿರುವರೆಂಬ ವಾರ್ತೆ ನನ್ನ ಕಿವಿಗೆ ಮುಟ್ಟಿದೆ.” ಎಂದು ಬಹು ಕಳವಳಗೊಂಡವನಂತೆ ನಟಿಸಿ ಸೂಚಿಸಿದನು.

“ಔರಂಗಜೇಬ, ನಿನ್ನಿಂದ ನಾನು ಉಪಕೃತನಾಗಿರುವೆನು. ಆದರೆ ನನ್ನಲ್ಲಿ ದೃಢವಾಗಿರುವ ಬಾದಶಹರ ಪ್ರೇಮವನ್ನು ಕೆಡಿಸಲು ಮಾನವರಿಂದ ಆಗುವ ಮಾತಲ್ಲ. ಪಿತಾ-ಪುತ್ರರ ಪವಿತ್ರವಾದ ಪ್ರೇಮವು ದೇವರಿಂದ ದಯಪಾಲಿಸಲ್ಪಟ್ಟ ವಸ್ತುವು.” ಎಂದು ಸೌಜನ್ಯಯುತವಾದ ತನ್ನ ಸುಮುಖದಲ್ಲಿ ದಾರಾಶಹನು ಮಂದಹಾಸವನ್ನು ತಳೆದು ನುಡಿದನು.

ಔರಂಗಜೇಬನು ಅಣ್ಣನ ಆಜ್ಞೆಯನ್ನು ತೆಗೆದುಕೊಂಡು ಹೊರಗೆ ಬಂದು: “ಈ ಮೃದುತರವಾದ ಶಿರೀಷ ಕುಸುಮವು ನನ್ನ ಮಾರ್ಗದಲ್ಲಿಯ ಕಂಟಕವೇ? ಇದನ್ನು ಬಿಸುಟಿ ಒಗೆಯುವದಾಗಲಿ, ಎಲ್ಲಿ ಇದ್ದಲ್ಲಿ ಕಾಲಿನಿಂದ ತಿಕ್ಕಿಬಿಡುವದಾಗಲಿ ಅತಿ ಸುಲಭವಾದ ಮಾತು. ದಾರಾಶಹ, ಮುಕುಟಪ್ರಾಪ್ತಿಯ ಹವಣಿಕೆಗೆ ಬಿದ್ದು ವ್ಯರ್ಥವಾಗಿ ರಣಯಜ್ಞದ ಹೋಮದಲ್ಲಿ ಸುಟ್ಟುಹೋಗುವಿಯಲ್ಲವೆ?” ಎಂದು ತನ್ನಷ್ಟಕ್ಕೆ ವಿಚಾರಗೈಯುತ್ತ ತನ್ನ ಹಾದೀ ಹಿಡಿದು ನಡೆದನು.

ಅಲ್ಲಿಂದ ಸುಲ್ತಾನ ಸಾಹೇಬರವರು ವಜೀರ ಸಾದುಲ್ಲಾಖಾನರ ಮನೆಗೆ ದಯಮಾಡಿಸಿದರು.

ರಾಜಕುಮಾರನು ತನ್ನ ದರ್ಶನಕ್ಕಾಗಿ ಹೀಗೆ ಅಕಸ್ಮಾತ್ತಾಗಿ ತನ್ನ ಮನೆಗೆ ಬಂದದ್ದು ಕಂಡು ವಜೀರನು ಸನ್ಮಾನಪೂರ್ವಕವಾಗಿ ಎದ್ದು ಬಾಗಿಲದ ವರೆಗೆ ಹೋಗಿ ಔರಂಗಜೇಬನನ್ನು ಆದರದಿಂದ ಕರತಂದು ಉಚ್ಚಾಸನದಲ್ಲಿ ಕುಳ್ಳಿರಿಸಿದನು. ಔರಂಗಜೇಬನಾದರೂ ವಜೀರನಿಗೆ ಬಹು ವಿನಯದಿಂದ ಪ್ರಣಾಮ ಮಾಡಿ ಮುಗುಳುನಗೆ ನಕ್ಕು “ಕಾಕಾಜೀ, ಇನ್ನು ಮೇಲೆ ನೀವು ನನ್ನ ಮೇಲೆ ಸಿಟ್ಟಾಗುವಂತಿಲ್ಲ. ಇಂದೆಯೇ ನಾನು ದೌಲತಾಬಾದಿಗೆ ಹೋಗಲು ಸಿದ್ಧನಾಗಿರುವೆನು. ತಮ್ಮ ಆಜ್ಞೆಯನ್ನು ಪಡಕೊಂಡು ಹೋಗಬೇಕೆಂದು ನಾನಿಲ್ಲಿಗೆ ಬಂದಿರುವೆನು.” ಎಂದು ಹೇಳಿದನು.

“ಸಂತೋಷ! ಸುಲ್ತಾನಸಾಹೇಬ, ತಡವಾದರೂ ಚಿಂತೆಯಿಲ್ಲ,

ನೀವು ಬಾದಶಹರ ಆಜ್ಞೆಯು ಮೇರೆಗೆ ನಡಕೊಂಡದ್ದು ಕಂಡು ನನಗೆ ಪರಮಾವಧಿಯ ಸಮಾಧಾನವಾಯಿತು.''

“ ವಜೀರಸಾಹೇಬ, ನನಗೆ ಬಾದಶಹರವರ ಆಜ್ಞೆಗಳೆಂದರೂ ಒಂದೇ, ಅವರ ಪ್ರತಿನಿಧಿಗಳಾದ ತಮ್ಮ ಆಜ್ಞೆಗಳೆಂದರೂ ಒಂದೇ! ತಮ್ಮ ಸೂಚನೆಯಿಲ್ಲದೆ ಬಾದಶಹರು ಯಾವ ಆಜ್ಞೆಗಳನ್ನಾದರೂ ವಿಧಿಸುವದಿಲ್ಲವಷ್ಟೆ ? ''

“ ತೋಬಾ ! ತೋಬಾ ! ಸುಲ್ತಾನಸಾಹೇಬ, ರಾಜಕಾರಣವಿಶಾರದರಾದ ನಮ್ಮ ಚಕ್ರವರ್ತಿಗಳಿಗೆ ನನ್ನಂಥವನ ಸಹಾಯದ ಆವಶ್ಯಕತೆಯೇ ಇಲ್ಲ. ನಾನೇನಾದರೂ ಸೂಚನೆಗಳನ್ನು ಮಾಡಿದ್ದಾದರೆ ಪ್ರಭುಗಳ ಅಭಿಪ್ರಾಯವನ್ನರಿತುಕೊಂಡೇ ಮಾಡುತ್ತೇನೆ. ತಮಗೆ ದಕ್ಷಿಣಕ್ಕೆ ಹೋಗಲು ಬಾದಶಹರು ಮಾಡಿದ ಆಜ್ಞೆಯನ್ನು ನಾನು ಮಾಡಿದನೆಂದು ತಿಳಿದು ತಾವು ಬೇಕಾಗಿ ತಡಮಾಡಿದ್ದಾಯಿತೇನು ? ” ಎಂದು ವಜೀರನು ತನ್ನ ಸುಲೋಚನ ( ಚಾಳೀಸು ) ಗಳೊಳಗಿಂದ ಔರಂಗಜೇಬನ ಮುಖವನ್ನು ಬಹು ಗಂಭೀರವಾಗಿ ನೋಡಿ ಕೇಳಿದನು.

ಔರಂಗಜೇಬನು ಆ ಮಂತ್ರಿಶ್ರೇಷ್ಠನಿಗೆ ಪ್ರಣಾಮ ಮಾಡಿ “ ಛೀ ! ಛೀ !! ಕಾಕಾಜೀ, ಇಂಥ ಅಪರಾಧವು ನನ್ನಿಂದ ಎಂದಿಗಾದರೂ ಆದೀತೆ? ನಮ್ಮ ಸಾಮ್ರಾಜ್ಯವನ್ನು ತೂಗಿಸುವವರಾರು ? ನೀವು ! ನಿಮ್ಮ ಆಜ್ಞೆಯನ್ನು ಮೀರುವದೆಂದರೆ ರಾಜದ್ರೋಹವೇ ಎಂದು ನಾನು ನಿಶ್ಚಯವಾಗಿ ತಿಳಿದಿರುವೆನು.” ಎಂದು ಬೆಸಗೊಂಡನು.

“ ವಾಃ ! ಮೆಹರ್ಬಾನ್, ತಮ್ಮ ಉದ್ಗಾರವನ್ನು ಕೇಳಿ ನನಗೆ ಅತ್ಯಂತವಾದ ಸಮಾಧಾನವಾಯಿತು. ರಾಜ್ಯಕ್ಕೆ ಆಧಾರಸ್ತಂಭರಾಗಿರುವವರಾದ ತಾವು ಇಂಥ ಅಭಿಪ್ರಾಯವನ್ನು ದೃಢವಾಗಿ ಕಟ್ಟಿಕೊಂಡ ಬಳಿಕ ಮತ್ತಿನ್ನೇನು ಬೇಕು ? ”

“ ಆದಿರಲಿ ! ವಜೀರರೆ, ನಮ್ಮ ಬಾದಶಹರ ಪ್ರಕೃತಿಯು ಅಸ್ವಸ್ಥವಾಗಿದೆ! ದೇವರು ಅಂಥ ಪ್ರಸಂಗವನ್ನು ತರಬಾರದೆಂದು ನಾನು ಮನಃಪೂರ್ವಕವಾಗಿ ಪ್ರಾರ್ಥಿಸುತ್ತಿದ್ದರೂ ಮರ್ತ್ಯರಾದವರ ಜೀವಿತದ ಸ್ಥಿರತೆಯೆಲ್ಲಿ ? ಅದಕ್ಕಾಗಿ ನೀವು ನಿಮ್ಮ ದಾರಾಸುಲ್ತಾನರೇ ಭಾವೀ ಚಕ್ರ

ವರ್ತಿಗಳೆಂದು ಭಾವಿಸಿಕೊಂಡು ಅವರು ಲೋಕದ ಆದರಕ್ಕೆ ಪಾತ್ರರಾಗುವಂತೆ ಮಾಡುವ ಭಾರವು ನಿಮ್ಮನ್ನೇ ಕೂಡಿದೆ. ಜನವೋ ದನವೋ ಎಂಬಂತೆ ಯಾರಾದರೂ ನಮ್ಮ ಅಣ್ಣದೇವರ ವಿರುದ್ಧವಾಗಿ ಏನಾದರೂ ದೂರು ಹೇಳಿದ್ದಾಗಿದ್ದರೆ ಅದನ್ನು ನೀವು ನಂಬಬೇಡಿರೆಂದು ನಾನು ಕೈ ಜೋಡಿಸಿ ಹೇಳಿಕೊಳ್ಳುತ್ತೇನೆ.'' ಎಂದು ಪರಾತಿಸಂಧಾನಪಟುವಾದ ಆ ರಾಜಪುತ್ರನು ನುಡಿದನು.

## ೧೨

## ವಜೀರನ ಮರಣವು

ವಜೀರ ಸಾದುಲ್ಲಾಖಾನನು ನಿತ್ಯದಂತೆ ಯಥಾಸುಖವಾಗಿ ಒಂದು ರಾತ್ರಿ ಮಲಗಿಕೊಂಡವನು ಬೆಳಗಾಗುವದರೊಳಗಾಗಿಯೇ ಕಾಷ್ಠಲೋಷ್ಟಗಳಿಗೂ ಕಡೆಯಾದ ಶವರೂಪನಾಗಿ ಹೋಗಿದ್ದನು. ಸಂಯಮಿಯಾದ ಆ ವಜೀರನು ಸೂರ್ಯೋದಯಕ್ಕೆ ಪೂರ್ವದಲ್ಲಿಯೇ ಏಳತಕ್ಕವನು ಈ ದಿವಸ ಗಳಿಗೆ ಹೊತ್ತೇರಿದರೂ ಯಾಕೆ ಏಳಲಿಲ್ಲವೆಂದು ಚಿಂತಿಸಿ ಅವನ ಹೆಂಡತಿಯು ಪತಿಯ ಪರ್ಯಂಕದ ಸಮೀಪಕ್ಕೆ ಹೋಗಿ "ಏಳುವ ಹೊತ್ತಾಗಲಿಲ್ಲವೆ?" ಎಂದು ವಿನಯದಿಂದಲೂ ಪ್ರೇಮದಿಂದಲೂ ಕೇಳಿದಳು. ಉತ್ತರವೇ ಇಲ್ಲ! ಎಂಥ ನಿದ್ದೆಯಿದು! ಎಂದು ಶಂಕಿಸಿ ಆ ಸತಿಯು, ಪರ್ಯಂಕದ ತೆರೆಯನ್ನು ಸಾರ್ಚಿ ನೋಡಿದವಳೇ ಚಿಟ್ಟನೆ ಚೀರಿ ಎದೆ ಎದೆ ಗಟ್ಟಿಸಿಕೊಂಡು ದೊಡ್ಡ ಧ್ವನಿ ತೆಗೆದು ಅತ್ತಳು. ಬೀಬೀ ಸಾಹೇಬಳು ಹಾಗೆ ಒಮ್ಮಿಂದೊಮ್ಮೆಲೆ ಆಕ್ರಂದಿಸಿ ಅಳುತ್ತಿರುವದನ್ನು ಕೇಳಿ ಪರಿವಾರದವರೆಲ್ಲರೂ ವಿಸ್ಮಯಾಕುಲರಾಗಿ ಧಡಧಡನೆ ಓಡುತ್ತ ವಜೀರರ ಶಯನಮಂದಿರಕ್ಕೆ ಬಂದರು.

ಕಬ್ಬಿನಂತೆ ತುಂಬಿದ ಮೈಯವನಾದ ವಜೀರನ ಶವವು ಮಂಚದಲ್ಲಿ ಅಸ್ತವ್ಯಸ್ತವಾಗಿ ಬಿದ್ದುಕೊಂಡಿತ್ತು! ಮಮತಾಳುವಾದ ಆತನ ಪತ್ನಿಯು ಆ ಶವದ ಮೇಲೆ ಬಿದ್ದು ಘೋರಾಡಿ ಅಳುತ್ತಿದ್ದಳು. ಕನಸು

ಮನಸುಗಳಲ್ಲಿಯೂ ತೋರದಿರುವ ಆ ಹೃದಯುದ್ರಾವಕವಾದ ನೋಟ ವನ್ನು ಅಕಸ್ಮಾತ್ತಾಗಿ ಕಂಡು ಪರಿವಾರದವರೆಲ್ಲರೂ ದುಃಖಾತಿರೇಕ ದಿಂದ ಒಂದೇ ಧ್ವನಿಯಿಂದ ಅತ್ತರು. ಸಾದುಲ್ಲಾಖಾನನ ಪ್ರೀತಿಯ ಮಗಳಾದ ಶಹರ್‌ಜಾದೆಯು ಆ ಭಯಂಕರವಾದ ನೋಟವನ್ನು ನೋಡಿ ಹಾಹಾಕಾರಿ ಧಪ್ಪನೆ ನೆಲಕ್ಕೆ ಬಿದ್ದಳು. ತಾಯಿಯು ಮಗಳನ್ನು ತೆಕ್ಕೆಯಲ್ಲಿ ಹಿಡಿದು ಇಮ್ಮಡಿಯಾದ ದುಃಖಾತಿರೇಕದಿಂದ ಕಲ್ಮರಗಳು ಕರಗುವಂತೆ ಕೊರಗಿಮರುಗಿದಳು.

ಪ್ರಧಾನರ ಮನೆಯಲ್ಲಿ ಹೀಗೆ ಒಮ್ಮೆಲೆ ಚೀರಾಟ ಗೋಳಾಟಗಳ ಕೋಲಾಹಲವೆದ್ದದ್ದು ಕೇಳಿ ನಗರವಾಸಿಗಳೆಲ್ಲರೂ ಅರಿವುಗೆಟ್ಟು ಧಾವಿಸಿ ಎಡವುತ್ತ ಮುಗ್ಗುತ್ತ ಅಲ್ಲಿಗೆ ಬಂದು ಸಾದುಲ್ಲಾಖಾನರು ತೀರಿಕೊಂಡ ರೆಂಬ ಘೋರತರವಾದ ವಾರ್ತೆಯನ್ನು ಕೇಳಿ ವ್ಯಥಿತರಾದರು. ವಜೀರ ರಿಗೆ ಬೇನೆ ಬಂದ ವರ್ತಮಾನವೇ ನಮಗಿಲ್ಲವೆಂದು ಕೆಲವರು ಉದ್ಗಾರ ತೆಗೆದರು. ಎಲ್ಲಿಯ ಬೇನೆ ಏನು ಕಥೆ!—ಎಂದು ಒಬ್ಬ ವೃದ್ಧನು ದೀನ ವದನನಾಗಿ ನುಡಿದನು. ವಜೀರನ ಮರಣದ ವಿಷಯವಾಗಿ ಒಬ್ಬನು ಒಂದು ಅಭಿಪ್ರಾಯವನ್ನು ತಳೆದನು; ಬೇರೊಬ್ಬನು ಬೇರೊಂದು ಪರಿ ಯಾಗಿ ತರ್ಕಿಸಿದನು. ಅರಮನೆಯ ಹಕೀಮರು ಕುದುರೆಯನ್ನೋಡಿ ಸುತ್ತ ಬಹು ಜಾಗ್ರತೆಯಾಗಿ ಬಂದು ವಜೀರರನ್ನು ಬದುಕಿಸಿಕೊಳ್ಳುವದು ಸಾಧ್ಯವಾಗಿರುವದೋ ಹೇಗೆಂದು ನೋಡಿದರು. ಅವರು ಸಾದುಲ್ಲಾ ಖಾನನ ನಾಡಿಯನ್ನು ಹಿಡಿದು ನೋಡಿದರು; ಎದೆಗೆ ಕಿವಿಗೊಟ್ಟು ರುಧಿ ರಾಭಿಸರಣವಿರುವದೋ ಎಂದು ಪರೀಕ್ಷಿಸಿದರು; ವಜೀರನು ನಿಜವಾದ ಪ್ರೇತವೇ ಆಗಿದ್ದನು. ವೈದ್ಯರು ಮರಣದ ಚಿಹ್ನಗಳನ್ನು ನಿರೀಕ್ಷಿಸಿ ವಿಸ್ಮಯಾಕುಲರಾಗಿ “ಯಾ ರಹೀಮ!!! ಅಲ್ಲಾ: ಪ್ರಭುಗಳೆ, ಸಾಧು ವರ್ಯನಾದ ಈ ಮನುಷ್ಯನಿಗೆ ಇಂಥ ಮರಣವೆ?” ಎಂದು ಉದ್ಗಾರ ತೆಗೆದು ಕಣ್ಣಿಗೆ ನೀರು ತಂದರು.

“ಅಷ್ಟರಲ್ಲಿ ಹಕೀಮ ದಾವುದನು ಆ ವೈದ್ಯರ ಬಳಿಗೆ ಬಂದು ಏಕಾಂತ ದಲ್ಲಿ ಕೇಳಿದ್ದು: “ಮೆಹರ್ಬಾನ್, ವಜೀರರ ಮರಣದ ಕಾರಣವೇ ನಾಗಿರಬಹುದು? ಅವರಿಗೆ ಅತಿ ತೀಕ್ಷ್ಣವಾದ ಹೊಟ್ಟೆಸೂಲಿಯಿತ್ತೆಂದು.

ನಾನು ಕೇಳಿದ್ದೇನೆ.”

“ಇನ್ನು ಕಾರಣವನ್ನು ಅರಿತುಕೊಂಡು ಮಾಡುವದೇನು ? ಆದರೂ ವಜೀರರು ಹೊಟ್ಟೆಬೇನೆಯಿಂದ ತೀರಿಕೊಳ್ಳಲಿಲ್ಲವೆಂದು ನಾನು ಖಂಡಿತ ವಾಗಿ ಹೇಳಬಲ್ಲೆನು.”

“ಯಾರಾದರೂ ದ್ರೋಹಿಗಳು ಅವರಿಗೆ ವಿಷಪ್ರಯೋಗವನ್ನು ಮಾಡಿದರೆನ್ನಬೇಕೆ ?”

“ಸರ್ವಸಾಕ್ಷಿಮಂತನಾದ ಪರಮೇಶ್ವರನಿಗೊಂದು ಗೊತ್ತು! ಹಕೀಮ ದಾವುದ, ಆದದ್ದು ಆಗಿಹೋಯಿತು. ಇನ್ನು ಹೆಚ್ಚಾಗಿ ಈ ಸಂಗತಿಯ ಬಗ್ಗೆ ಚಿಕಿತ್ಸೆ ಮಾಡಿದರೆ ಅನರ್ಥಕ್ಕೆ ಅನೇಕವಾದ ಅನರ್ಥ ಗಳ ಗಡ್ಡೆಗಳು ಉದ್ಭವಿಸಬಹುದು. ನಾನಾಡಿದ್ದು ತಿಳಿಯಿತೆ ?”

ಸಾದುಲ್ಲಾಖಾನನ ಔರ್ಧ್ವದೇಹಿಕ ವಿಧಿಗಳೆಲ್ಲ ಮುಸಲ್ಮಾನೀ ಧರ್ಮದ ಮೇರೆಗೆ ಸಾಂಗವಾಗಿ ನಡೆದವು. ಸ್ವರ್ಗದಿಂದಿಳಿದು ಬಂದ ವಿಮಾನವಿದೇನೆಂಬಂತೆ ತೋರುವ ಚಿತ್ರಮಯವಾದ ಡೋಲಿಯು ಸಂಗಡಲೇ ಸಿದ್ಧವಾಯಿತು. ವಜೀರನ ದೇಹವನ್ನು ಆಪ್ತರಿಷ್ಟರು ಸ್ವಚ್ಛ ವಾಗಿ ತೊಳೆದು ಅದಕ್ಕೆ ಪರಿಮಳಯುತವಾದ ಔಷಧಿಗಳನ್ನು ಚನ್ನಾಗಿ ಪೂಸಿ ಶುಭ್ರತರವಾದ ವಸ್ತ್ರದಿಂದ ಅದನ್ನು ಆಚ್ಛಾದಿಸಿದರು. ಮುಲ್ಲಾ ಗಳು ಕುರಾಣಾನುಸಾರವಾದ ಕೆಲವು ವಿಧಿಗಳನ್ನು ಮಾಡಿದ ಬಳಿಕ ಪ್ರಮುಖರೆಲ್ಲರೂ ಕೂಡಿ ಸಾದುಲ್ಲಾಖಾನನ ದೇಹವನ್ನು, ಚಿತ್ರವಿಚಿತ್ರ ವಾದ ಪಟಪತಾಕಗಳಿಂದಲೂ ಹೂಮಾಲೆ ತೊಂಡಿಲಗಳಿಂದಲೂ ಅಲಂ ಕೃತವಾಗಿರುವ ಡೋಲಿಯಲ್ಲಿ ಇರಿಸಿದರು.

ಪ್ರೇತವನ್ನು ಮನೆಯಿಂದ ಹೊರಗೆ ತೆಗೆದ ಬಳಿಕ ಮುಸಲ್ಮಾನರು ಬೀದಿಯಲ್ಲಿ ನೆರೆದ ಅಭದ್ರವಾದ ರೀತಿಯಿಂದೆ ಹೊಯ್ಕೊಳ್ಳು ಒಡು ಕೊಳ್ಳುವದನ್ನು ಮಾಡುವದಿಲ್ಲ. ಹೆಣ್ಣುಮಕ್ಕಳಂತೂ ಮನೆಬಿಟ್ಟು ಒರು ವದೇ ಇಲ್ಲ. ಅವರ ಸ್ಮಶಾನಯಾತ್ರೆಯು ಶಾಂತವಾಗಿಯೂ ಗಂಭೀರ ವಾಗಿಯೂ, ಬೋಧಪ್ರದವಾಗಿಯೂ ನಡೆಯುವದು. ತಮ್ಮ ಧರ್ಮ ಬಾಂಧವನೋರ್ವನು ಪರಲೋಕಕ್ಕೆ ತೆರಳಿ ನಿಂತಿರಲು ಮುಸಲ್ಮಾನರು ಅವನ ಯೋಗ್ಯತೆ ತಾರತಮ್ಯಗಳನ್ನು ಲೆಕ್ಕಿಸದೆ ಆದರದಿಂದ ನೆರೆದು

ಅವನ ಉತ್ತರಕ್ರಿಯೆಗಳಿಗೆ ನೆರವಾಗುವದುಂಟು. ಇಹಲೋಕದಲ್ಲಿ ಸತ್ಕರ್ಮಗಳನ್ನಾಚರಿಸಿ ಕೈಲಾದಮಟ್ಟಿಗೆ ಪರೋಪಕಾರವನ್ನು ಮಾಡಿ ಕೃತಕೃತ್ಯನಾದ ಮಹಾತ್ಮನು ಪರಲೋಕಕ್ಕೆ ತೆರಳಿದಲು ಅವನನ್ನು ಕಳಿಸಲು ನಾಲ್ಕು ಹೆಜ್ಜೆ ಮುಂದಕ್ಕೆ ಹೋಗದಿರುವ ಪಾಪಿಗೆ ಯಾವ ಶಿಕ್ಷೆಯೋ ಕಾಣೆವು! ಈ ವಿಷಯದಲ್ಲಿ ಸ್ವಕರ್ತವ್ಯವನ್ನರಿತವರೆಂದರೆ ಮುಸಲ್ಮಾನರೇ ಸರಿ!

ಇಂಥ ಸದ್ಬುದ್ಧಿಯು ತಿಲಾಂಶವಾದರೂ ಬ್ರಾಹ್ಮಣರಲ್ಲಿ ಇಲ್ಲ ಕಂಡಿರಾ! ಬ್ರಾಹ್ಮಣರೆಂದರೆ ವಿವೇಕದ ಆಗರಗಳಂತೆ!!! ಪೂರ್ವಕಾಲದಲ್ಲಿ ಮೃತನಾದ ಬ್ರಾಹ್ಮಣನ ಸ್ಮಶಾನಯಾತ್ರೆಯು ಹೇಗೆ ನಡೆಯುತ್ತಿತ್ತೋ ತಿಳಿದಿಲ್ಲ. ಪುಸ್ತಕಗಳಲ್ಲಿಯ ವಿಧಿಗಳನ್ನು ನೋಡಿದರೆ ಪ್ರಶಸ್ತವಾಗಿ ತೋರುತ್ತವೆ. ಆದರೆ ಈಗಿನ ಆಚರಣಗಳನ್ನು ನೋಟರೆ ಎಲ್ಲವೂ ವಿಪರೀತವೇ! ಯಜಮಾನನು ಬದುಕಿರುವಾಗ ದಾನದಕ್ಷಿಣೆ ದೇಕಾರಗಳಿಗಾಗಿ ಬ್ರಾಹ್ಮಣರು ತೆರಪಿಲ್ಲದೆ ಅವನ ಮನೆಗೆ ಓಡಾಡುವರು. ಅಧಿಕಬಾಗಣ ನನಗೆ, ದಂಪತ್ತು ಪೂಜೆ ನನಗೆ, ದೀಪದಾನ ಉದಕುಂಭ ದಾನಗಳು ನನಗೆ ಎಂದು ಹಾರುವರು ಮೇಲುಮೇಲಾಗಿ ಬರುವರು. ಆದರೆ ದೈವವಶದಿಂದ ಆ ಯಜಮಾನನು ಮರಣಹೊಂದಿದರೆ ಹೆಣವು ಸುಡುಗಾಡನ್ನು ಕಾಣುವದೋ ಇಲ್ಲವೋ ಎಂಬದಾಗಿ ಹೋಗುತ್ತದೆ. ಈ ವಿಷಯದಲ್ಲಿ ಸಂಭವಿಸಿದ ಒಂದು ಹೃದಯದ್ರಾವಕವಾದ ವೃತ್ತಾಂತವನ್ನು ನಾವು ಇಲ್ಲಿ ಹೇಳದೆ ಇರಲಾರೆವು.

ತರುಣನೂ ಸತ್‌ಶೀಲನೂ ಆದ ಒಬ್ಬ ಗೃಹಸ್ಥನು ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತಕ್ಕೆ ದೊಡ್ಡ ಅಧಿಕಾರಿಯಾಗಿ ಹೋಗಿದ್ದನು. ಗುಣಮಣಿಯಾದ ಹೆಂಡತಿಯೋರ್ವಳು ಮಾತ್ರ ಅವನ ಸಂಗಡ ಬಂದಿದ್ದಳು. ಬೇರೆ ಆಪ್ತರಿಷ್ಟರಾರೂ ಅವನಿಗೆ ಇದ್ದಿಲ್ಲ. ದೈವಗತಿಯ ವಿಚಿತ್ರವಾದ ಲೀಲೆಗನುಸರಿಸಿ ಆ ಅಧಿಕಾರಿಯು ಅಕಸ್ಮಾತ್ತಾಗಿ ಸರ್ಪದಂಶದಿಂದ ತೀರಿಕೊಂಡನು. ಅಯ್ಯೋ! ನವತರುಣಿಯಾದ ಆತನ ಹೆಂಡತಿಗೆ ಒದಗಿದ ದುಃಖಕ್ಕೆ ಇಯತ್ತೆಯೆ? ಜೀವಿತೇಶ್ವರನು ಹೀಗೆ ತನ್ನನ್ನು ನಡುನೀರಿನಲ್ಲಿ ಕೈಬಿಟ್ಟುಹೋದದ್ದು ಕಂಡು ಆ ಬಾಲೆಯು ವಿಪರೀತ

ವಾವ ಪ್ರಳಾಪವನ್ನು ಮಾಡಿ ಗೋಡೆಗೋಡೆಗೂ ಕಂಬಕಂಬಕೂ ಹಾಯ್ದು ಕೊರಗಿ ಮರಗಿ ಜರ್ಜರಳಾಗಿ ಬಿದ್ದುಕೊಂಡಳು. ಒಬ್ಬಳೇ ಒಬ್ಬಳಾಗಿರುವ ಆ ಬಡಪ್ರಾಣಿಗೆ ನಾಲ್ಕು ಸಮಾಧಾನದ ಮಾತುಗಳ ನ್ನಾದರೂ ಹೇಳುವವರು ಬಳಿಯಲ್ಲಿಲ್ಲ. ನಿತ್ಯದಲ್ಲಿಯೂ ಗಂಟೆ ಬಡಿದು ಸುಭೋಜನವನ್ನುಂಡು ಹೋಗುವ ಹಾರುವನಾಗಲೀ ಆಶ್ರಿತರಾಗಲೀ ಒಬ್ಬರೂ ಅತ್ತ ಹಣೆಯಿಕ್ಕಿ ನೋಡಲಿಲ್ಲ. ಆ ಸತಿಯು ಪ್ರಹರ ಎರಡು ಪ್ರಹರಗಳ ವರೆಗೆ ಆಕ್ರೋಶಿಸಿ ದಣುಕೊಂಡ ಬಳಿಕ ಅವಳಿಗೆ ಪ್ರೇತ ಸಂಸ್ಕಾರದ ಚಿಂತೆಯಾಯಿತು. ಸಕಲ ಸೌಭಾಗ್ಯಗಳನ್ನು ಕಳಕೊಂಡು ಆಧಾರವಿಲ್ಲದೆ ಭವಸಾಗರದ ಪ್ರಚಂಡವಾದ ತಡಸಲದಲ್ಲಿ ಇನ್ನು ಕಡು ಕೊಂಡು ಬೀಳುವವಳಾದ ಆ ದೀನೆಗೆ ತನ್ನ ಗತಿಯೇನೆಂಬ ವಿಚಾರ ಕ್ಕಿಂತಲೂ ಪತಿಯ ಪ್ರೇತಸಂಸ್ಕಾರದ ಚಿಂತೆಯೇ ಅಧಿಕವಾಯಿತು. ಸಂಜೆಯಾಗುತ್ತ ಬಂದಿತು. ಒಬ್ಬಾನೊಬ್ಬರ ಸುಳುವು ಕೂಡ ಇಲ್ಲ. 'ಅಯ್ಯೋ ದೈವವೇ!' ಎಂದು ಹಣೆಹಣೆ ಬಡುಕೊಂಡು ಆ ಚಿಕ್ಕಬಾಲೆ ಯಾದ ವಿಧವೆಯು ಲಜ್ಜೆ ಮರ್ಯಾದೆ ದುಃಖಗಳನ್ನೆಲ್ಲಾ ಒತ್ತಿಟ್ಟು ಕೊಂಡು ಬ್ರಾಹ್ಮಣರ ಮನೆಮನೆಗೆ ಹೋಗಿ ಅಂಗಲಾಚಿ ಕೈಮುಗಿದು ಹೇಳಿಕೊಂಡರೂ, ಭೂಲೋಕದಲ್ಲಿ ಧರ್ಮವನ್ನು ಉದ್ಧರಿಸಲಿಕ್ಕೆ ಅವ ತಾರವನ್ನು ತಾಳಿದ ಆ ಭೂಸುರವೃಂದಕ್ಕೆ ಎಳ್ಳಷ್ಟಾದರೂ ಕರುಣೆ ಬರ ಲಿಲ್ಲ ಕಂಡಿರಾ! ಕಡೆಗೆ ಮುನಸೀಪಾಲಿಟಿಯ (ಗ್ರಾಮಪಂಚಾಯತರ) ಎತ್ತುಬಂಡಿಗಳೇ ಆ ದುಃಖಪೀಡಿತಳಾದ ಬಾಲೆಯ ಯಾತನೆಗಳನ್ನು ಬಿಡಿಸಿದವು. ನಮಸ್ಕಾರ 'ಬ್ರಾಂಭರೆ!!!'

ಇರಲಿ. ಸಾದುಲ್ಲಾಖಾನನ ಪ್ರೇತವು ಡೋಲಿಯಲ್ಲಿ ಬಂದ ಕೂಡಲೆ, ಬಾದಶಹಾ ಸುಲ್ತಾನರೂ, ಅಮೀರ ಉಮ್ರಾವರೂ ಆಗ್ರಾ ನಿವಾಸಿ ಗಳಾದ ಮಹಾಜನರೂ ಆದರದಿಂದ ಎದ್ದು ಆ ಡೋಲಿಯನ್ನು ಹೆಗಲ ಮೇಲೆ ಹೊತ್ತುಕೊಂಡು ನಡೆದರು. ಜ್ಞಾನಿಗಳಾದ ನಾಲ್ಕುಜನ ಮುಸ ಲ್ಮಾನ ಪಂಡಿತರು ಆಧ್ಯಾತ್ಮವಿಚಾರಗಳಿಂದ ಪೂರಿತವಾದ 'ಕಲ್ಮಾ' ಎಂಬ ಮಂತ್ರವನ್ನು ಸ್ವರಪೂರ್ವಕವಾಗಿ ಪಠಿಸುತ್ತೆ, ಪ್ರೇತದ ಮುಂದೆ ಮುಂದೆ ನಡೆದಿದ್ದರು. ಮುಸಲ್ಮಾನರೆಲ್ಲರೂ ಪ್ರೇತದ ಡೋಲಿಗೆ

ಹೆಗಲು ಕೊಡತಕ್ಕದ್ದೆಂದು ಶಾಸ್ತ್ರಶಾಸನವಿರುವದರಿಂದ ಪ್ರೇತವಾಹಕರು ನಿಮಿಷನಿಮಿಷಕ್ಕೆ ಬದಲಾಗುತ್ತಿದ್ದರು. ಒಜ್ಜೊಬ್ಬನ ಪಾಲಿಗೆ ನಾಲ್ಕು ಹೆಜ್ಜೆಗಳು ಕೂಡ ಬರುತ್ತಿದ್ದಿಲ್ಲ!

ಮಹಾತ್ಮನಾದ ಪುರುಷನು ಹೊರಟುಹೋದನೆಂದು ಎಲ್ಲರೂ ವ್ಯಸನಪಟ್ಟರು. ಎಲ್ಲರೂ ಅವನ ಗುಣಾನುವಾದಗಳನ್ನು ಮಾಡಿದರು. ಬಾದಶಹನಿಗೆ ಮಂತ್ರಿಯಿಲ್ಲದಂತಾಗಿ ಚಿಂತೆಯಾಯಿತು. ಸುಲ್ತಾನ ದರಾಯುಸನ ಸಹಾಯ್ಯಕಾರಿಯು ಹೊರಟುಹೋದ್ದರಿಂದ ಅವನಮನೋರಥದ ಅಚ್ಚು ಮುರಿದಂತಾಯಿತು. 'ನಿಷ್ಪಕ್ಷಪಾತಿಯಾದ ನ್ಯಾಯಾಧೀಶನು ತೀರಿಕೊಂಡನು; ಲೋಕದಲ್ಲಿ ನ್ಯಾಯುವಿನ್ನೆಲ್ಲಿ?' ಎಂದು ಪ್ರಜರು ಹತಾಶರಾಗಿ ಮರುಗಿದರು.

## ೧೩

## ಸಂಶಯ ನಿವಾರಣವು

ಸಾದುಲ್ಲಾಖಾನನ ಮರಣಾನಂತರ ಕೆಲವು ದಿವಸಗಳ ಮೇಲೆ ಅವನ ಮನೆಯ ಮುಖ್ಯ ವ್ಯವಸ್ಥಾಪಕನಾದ ರಘುವೀರರಾಯನೆಂಬ ವೃದ್ಧನಾದ ಬ್ರಾಹ್ಮಣನೋರ್ವನು ಆ ವಜೀರನ ಮಗನಾದ ಮಹಬೂಬಖಾನನ್ನು ಕುಳ್ಳಿರಿಸಿಕೊಂಡು ತಂದೆಯ ಸ್ಥಾವರ ಜಂಗಮವಾದ ಆಸ್ತಿ ಎಲ್ಲವೂ ಎಷ್ಟಿರುವದೆಂಬದನ್ನು ಕಾಗದಪತ್ರಗಳ ಮೇಲಿಂದ ಅವನಿಗೆ ತಿಳಿಸಿಕೊಡುತ್ತಿದ್ದನು. ಅಷ್ಟರಲ್ಲಿ ಸೇವಕನೋರ್ವನು ಲಗುಬಗೆಯಿಂದ ಅವರಿದ್ದಲ್ಲಿಗೆ ಬಂದು "ಬುದ್ಧೀ, ಸುಲ್ತಾನಸುಲೇಮಾನರವರ ಮೇಣೆಯು ನಮ್ಮ ಮನೆಯ ಮುಂದೆ ಬಂದಿಳಿದಿರುವದು" ಎಂದು ಸೂಚಿಸಿದನು. ಸಂಗಡಲೆ ರಘುವೀರರಾಯನು ಮಹಬೂಬಖಾನನ್ನು ಕರೆದುಕೊಂಡು ಸುಲ್ತಾನನಿಗೆ ಸ್ವಾಗತವನ್ನೀಯಲು ಬಾಗಿಲಕ್ಕೆ ಬಂದು ಆ ರಾಜಪುತ್ರನನ್ನು ಆದರದಿಂದ ಕರೆತಂದು ಯೋಗ್ಯಾಸನದಲ್ಲಿ ಕುಳ್ಳಿರಿಸಿದನು. ತಂದೆಯನ್ನು ಕಳಕೊಂಡವನಾದ ತನ್ನನ್ನು ಮಾತಾಡಿಸಲು ಸುಲೇಮಾನನು

ಬಂದಿರುವದನ್ನರಿತು ಮುಹಬೂಬಖಾನನ ಹೊಟ್ಟೆಯಲ್ಲಿ ದುಃಖವು ಒಟ್ಟರಿಸಿ ಬಂದು ಅವನು ಪಳಪಳನೆ ಕಣ್ಣೀರು ಸುರಿಸಿದನು. ಸುಲೇಮಾನ ಸುಲ್ತಾನನಾದರೂ ಕಣ್ಣಿಗೆ ನೀರು ತಂದು "ಮುಹಬೂಬಖಾನ್, ಕೈ ಮೀರಿ ಹೋದ ಕೆಲಸಕ್ಕೆ ಇನ್ನು ದುಃಖಿಸಿ ಫಲವೇನು? ವಜೀರರ ಮರಣಕ್ಕಾಗಿ ಬಾದಶಹರಿಗೂ, ದಾರಾ ಸುಲ್ತಾನರಿಗೂ, ನನಗೂ ಅತಿಶಯವಾದ ವ್ಯಸನವಾಗಿದೆ. ನಿಮ್ಮೊಡನೆ ನಾವೆಲ್ಲರೂ ಸಮದುಃಖಿಗಳಾಗಿರುತ್ತೇವೆ." ಎಂದು ಹೇಳಿ ಕಣ್ಣೊರಸಿಕೊಂಡನು.

ಮುಹಬೂಬನು ಗದ್ಗದಿತ ಕಂಠನಾಗಿ "ಹಜರತ್, ನಾನು ಸರ್ವಥಾ ನಿರಾಧಾರನಾದೆನು! ನನ್ನನ್ನು ಇನ್ನು ಮುಂದಕ್ಕೆ ಕರೆಯುವವರಾರು? ಮಾತಾಡಿಸುವವರಾರು?" ಎಂದು ಹೇಳಿ ಕಣ್ಣೊರಸಿಕೊಂಡನು.

"ಖಾನ್, ನಿಮ್ಮ ತಂದೆಯವರು ಮಾಡಿದ ಮಹತ್ಕಾರ್ಯಗಳನ್ನು ನೆನೆದು ಬಾದಶಹರು ನಿಮ್ಮನ್ನು ತಮ್ಮ ಕೃಪಾಪಾತ್ರರನ್ನಾಗಿ ಮಾಡಲು ನಿಶ್ಚಯಿಸಿರುವರು. ಬಾದಶಹರ ಆಜ್ಞೆಯನ್ನೇ ನಾನು ನಿಮಗೆ ತಿಳಿಸಲು ಬಂದಿದ್ದೇನೆ. ಪರಲೋಕವಾಸಿಗಳಾದವರನ್ನು ಮರಳಿ ತಂದು ಕೊಡುವದು ಮಾತ್ರ ಯಾರಿಂದಲೂ ಆಗದು. ಆದರೆ ಪ್ರಸಾದೋನ್ಮುಖರಾದ ದಿಲ್ಲೀಶ್ವರರು ಐಹಿಕವಾದ ಸಕಲಾಭೀಷ್ಟಗಳನ್ನು ಪೂರೈಸಿಕೊಡುವರೆಂಬದಕ್ಕೆ ಸಂದೇಹವಿಲ್ಲ." ಎಂದು ಸುಲೇಮಾನನು ಬಹು ಪ್ರೇಮದಿಂದ ಹೇಳಿದನು.

ಮುಹಬೂಬನು ವಿನಯದಿಂದ ಸುಲೇಮಾನನಿಗೆ ಪ್ರಣಾಮಮಾಡಿದನು. ರಘುವೀರರಾಯನಾದರೂ ಆ ರಾಜಪುತ್ರನಿಗೆ ಪ್ರಣಾಮಮಾಡಿ "ಹುಜೂರ್, ಸಕಲ ಭೂಮಂಡಲದ ಚಕ್ರವರ್ತಿಗಳಾದ ನಮ್ಮ ಬಾದಶಹರ ದಿವ್ಯಸಂದೇಶದಿಂದ ನಾವು ತುಂಬಾ ಉಪಕೃತರಾದೆವು. ಅವರ ಸಿಂಹಾಸನಕ್ಕೆ ಅಖಂಡವಾದ ವಿಜಯವಿರಲಿ!" ಎಂದು ನುಡಿದು ಕೃತಜ್ಞತೆಯನ್ನು ವ್ಯಕ್ತಪಡಿಸಿದನು.

ಆಮೇಲೆ ಕೆಲವು ಔಪಚಾರಿಕವಾದ ಮಾತುಗಳಾದ ಮೇಲೆ ಸುಲೇಮಾನನು ರಘುವೀರರಾಯನನ್ನು ಕುರಿತು "ದಿವಾನ್‌ಜೀ, ಒಂದು ಚಿಂತಾಜನಕವಾದ ಪ್ರಶ್ನವುಂಟಾಗಿದೆ; ನೀವು ನಿಜವಾದ ಅಭಿಪ್ರಾಯ

ವನ್ನು ಕೊಡಬಲ್ಲಿರೊ ? ” ಎಂದು ಆರ್ತನಾಗಿ ಕೇಳಿದನು.

“ ಎಂಥ ಮಾತಿದು ! ಹುಜೂರ್, ಈ ಪಾದಸೇವಾನಿರತನಾದ ದಾಸನು ಯಥಾರ್ಥವನ್ನೇ ಹೇಳುವರು. ಆದರೆ ತಮ್ಮ ಚರಣಗಳಿಗೆ ಚಿಂತೆಯನ್ನುಂಟುಮಾಡಿದ ಪ್ರಶ್ನವಾವುದು ? ”

“ ವಜೀರರಿಗೆ ಒಮ್ಮೆಂದೊಮ್ಮೆಲೆ ಅಕಾಲಮೃತ್ಯುವು ಪ್ರಾಪ್ತವಾಗ ಲಿಕ್ಕೆ ಕಾರಣವೇನೆಂಬದನ್ನು ನೀವು ಅರಿತುಕೊಂಡಿರುವಿರೋ ? ”

“ ಇನ್ನು ಆ ಕಾರಣವನ್ನರಿತುಕೊಂಡು ಪ್ರಯೋಜನವೇನು ದೇವರೂ ? ” ಎಂದು ರಘುವೀರರಾಯನು ವಿಷಾದದಿಂದ ಕೇಳಿದನು.

“ ನನಗೆ ಪ್ರಯೋಜನವುಂಟೆಂದೇ ಕೇಳುತ್ತೇನೆ. ವಜೀರರು ತಮ್ಮ ಆಯುಷ್ಯದ ಕಡೆಯ ರಾತ್ರಿಯಲ್ಲಿ ಭೋಜನದ ತರುವಾಯ ದ್ರಾಕ್ಷ ಗಳನ್ನು ತಿಂದರೋ ? ”

“ ಕಾಣದು ! ನಮ್ಮ ವಜೀರರು ನಂದಿನಿಯುವರಾದ ಶಹರ್‌ಜಾದೆ ಯುವರು ಆ ರಾತ್ರಿ ಯಜಮಾನರೊಡನೆ ಭೋಜನ ಮಾಡಿ ಬಹಳ ಹೊತ್ತಿನ ವರೆಗೆ ಅವರೊಡನೆ ಮಾತಾಡುತ್ತ ಕುಳಿತಿದ್ದರಂತೆ. ಮಹಬೂಬ ಖಾನ್, ಶಹರ್‌ಜಾದೆಯುವರಿಗೆ ಆ ಬಾಗಿಲದ ತೆರೆಯಾಚೆಗೆ ಬಂದು ನಿಲ್ಲೆಂದು ಸೂಚಿಸಿರಿ. ”

ಮಹಬೂಬನು ಶಹರ್‌ಜಾದೆಯನ್ನು ಬಾಗಿಲದ ತೆರೆಯಾಚೆಗೆ ತಂದು ನಿಲ್ಲಿಸಿದನು. ಆಗ ರಘುವೀರರಾಯನು ಅವಳನ್ನು ಕುರಿತು “ ಮಗುವೆ, ಯಜಮಾನರು ಆ ರಾತ್ರಿ ದ್ರಾಕ್ಷಗಳನ್ನು ತಿಂದರೆ ? ”

“ ಇಲ್ಲ. ಯಾಕೆ ? ”

“ ಸುಲೇಮಾನ ಸುಲ್ತಾನರವರಿಗೆ ಆ ವಿಚಾರಣೆಯು ಬೇಕಾಗಿದೆ.”

ಸುಲೇಮಾನನೆಂಬ ಹೆಸರು ಕೇಳಿದಾಕ್ಷಣವೇ ಶಹರ್‌ಜಾದೆಯು ಎದೆ ಯಲ್ಲಿ ಪ್ರೇಮದ ಉದ್ರೇಕವಾದಂತಾಯಿತು. ಪಿತೃವಿಯೋಗದ ದುಃಖ ದಿಂದ ಅವಳು ಪೀಡಿತಳಾಗಿದ್ದರೂ ಸುಲೇಮಾನನ ಸುಂದರವಾದ ಮುಖ ವನ್ನು ನೋಡುವೆನೆಂಬ ಕುತೂಹಲದಿಂದ ಅವಳು ತೆರೆಯ ಜಾಳಿಗೆಯೊಳ ಗಿಂದ ದಿಟ್ಟಿಸಿ ದಿಟ್ಟಿಸಿ ನೋಡಲಾರಂಭಿಸಿದಳು. ದುಃಖಾರ್ತರ ಮುಖ ದಲ್ಲಿ ಸಕ್ಕರೆಯನ್ನು ಹಾಕಿದರೆ ಅದು ಸೀಯಾಗಿಯೇ ಹತ್ತುವದುಂಟ

ಲ್ಲವೆ ? ಕಾಮನ ಹೂಬಿಲ್ಲಿಗೆ ಹೆದೆಗಟ್ಟಿ ನಿಂತಿರುವ ಮರಿದುಂಬಿಗಳ ಝೇಂಕಾರದಂತೆ ಶಹರ್‌ಜಾದೆಯ ಮಂಜುಲವಾದ ವಾಣಿಯಿಂದ "ಇಲ್ಲ. ಯಾಕೆ?" ಎಂಬ ಎರಡೇ ಮಾತುಗಳು ಕಿವಿಗೆ ಬಿದ್ದರೂ ಸುಲೇಮಾನನು ವಿಭ್ರಮಗೊಂಡು, ಮಹಬೂಬ ರಘುವೀರರಾಯರು ತನ್ನ ಬಳಿಯಲ್ಲಿರುವರೆಂಬ ಸಂಗತಿಯನ್ನು ಮರೆತುಬಿಟ್ಟು, ತನ್ನ ಮನೋರಮಣಿಯನ್ನೇ ಕುರಿತು "ವಜೀರರು ದ್ರಾಕ್ಷಗಳನ್ನು ತಿನ್ನಲಿಲ್ಲವೆಂಬದನ್ನು ನೀವು ನಿಶ್ಚಯವಾಗಿ ಹೇಳಬಲ್ಲಿರಾ?" ಎಂದು ಔತ್ಸುಕ್ಯದಿಂದ ಕೇಳಿದನು.

ಇಂಗಿತವನ್ನರಿತವಳಾದ ಆ ಚತುರೆಯು ಸುಲೇಮಾನನ ಪ್ರಶ್ನವನ್ನು ಕೇಳಿ ಮೆಲ್ಲನೆ ನಕ್ಕು ಮೀರಿದ ನಾಚಿಕೆಗಾಗಿ ಬಲು ಮೆಲ್ಲನೆ "ಇಲ್ಲ. ಅವರು ತಿನ್ನಲಿಲ್ಲ!" ಎಂದು ಹೇಳಿದಳು.

ಸುಲೇಮಾನನು ಸಮಾಧಾನದ ಉಸುರ್ಗರೆದು "ಎದೆಯ ಮೇಲಿನ ಅರ್ಧ ಭಾರವು ಇಳಿದಂತಾಯಿತು !!" ಎಂದು ರಘುವೀರರಾಯನ ಮುಖವನ್ನು ನೋಡುತ್ತ ನುಡಿದನು.

"ಸಂಬಂಧವೇನೆಂದು ಬೆಸಗೊಳ್ಳಲು ಈ ದಾಸನಿಗೆ ಅಪ್ಪಣೆಯೆ?" ಎಂದು ರಘುವೀರರಾಯನು ಕೇಳಿದನು.

"ಏನೆಂದು ಹೇರಲಿ ದಿವಾನಜೀ! ಅರಮನೆಯ ಕಪಟ ತಂತ್ರಗಳನ್ನು ನೆನೆದರೆ ಎದೆಯೊಡೆದು ನೀರಾಗುವದು. ನಮ್ಮ ತಂದೆಯವರೇ ವಜೀರರಿಗೆ ವಿಷಪ್ರಯೋಗ ಮಾಡಿಸಿದರೆಂದು ರೋಷನಾರಾ ಬೇಗಮ್ಮರು ಬಾದಶಹರ ಮುಂದೆ ಹೇಳಿದರಂತೆ?"

"ಅಸಂಭವವಿದು! ಕುಕಲ್ಪನೆಯಿದು!! ನಾನೆಂದಿಗೂ ನಂಬುವದಿಲ್ಲ!!!" ಎಂದು ಮಹಬೂಬನು ಉದ್ರೇಕದಿಂದೆದ್ದು ಗದ್ದರಿಸಿ ನುಡಿದನು.

"ಯಾವ ಆಧಾರದಿಂದ ರೋಶನಾರಾ ಬೇಗಮ್ಮರವರು ಇಂಥ ಕುತ್ಸಿತವಾದ ಆರೋಪವನ್ನು ನಮ್ಮ ದಾರಾ ಸುಲ್ತಾನರ ಮೇಲೆ ತಂದರಂತೆ?" ಎಂದು ರಘುವೀರರಾಯನು ಗಂಭೀರವಾದ ಮುಖಮುದ್ರೆಯನ್ನು ತಳೆದು ಕೇಳಿದನು.

" ನಿಮ್ಮ ಮನೆಯ ಅಡಿಗೆಯುವನಾದ ಅಬದುಲ್ಲ ಮಜೀದನೇ ಬಾದಶಹರ ಮುಂದೆ ಸಾಕ್ಷಿಯಾಗಿ ಬಂದು ಹೇಳಿದನು."

"ಏನೆಂದು?!!!" ಎಂದು ಮಹಬೂಬನು ಚಕಿತನಾಗಿ ಕೇಳಿದನು.

"ಸುಲ್ತಾನ ದರಾಯುಸರೇ ಅವನ ಕೈಯಲ್ಲಿ ಕೆಲವು ದ್ರಾಕ್ಷಗಳನ್ನು ಕೊಟ್ಟು ವಜೀರರಿಗೆ ಕೊಡೆಂದು ಹೇಳಿದ್ದರಂತೆ?"

"ಸುಳ್ಳು! ಸುಳ್ಳು!!!" ಎಂದು ಶಹರ್‌ಜಾದೆಯು ತೆರೆಯಲ್ಲಿ ನಿಂತವಳು ಗಟ್ಟಿಸಿ ಉದ್ಗಾರ ತೆಗೆದಳು.

"ಶಹರ್‌ಜಾದೆ ಬೇಗಮ್, ನಿಮ್ಮ ಅಭಿಪ್ರಾಯವನ್ನು ಕೇಳಿ ನಾನು ಕೃತಾರ್ಥನಾದೆನು." ಎಂದು ಸುಲೇಮಾನ ರಾಜಪುತ್ರನು ತೆರೆಯ ಕಡೆಗೆ ನೋಡಿ ಪ್ರಸನ್ನಮುಖನಾಗಿ ನುಡಿದನು.

"ಹುಜೂರ್, ವಜೀರರ ಪ್ರಾಣಹಾನಿಗೆ ಬೇರೊಬ್ಬರು ಕಾರಣರೆಂಬ ಬಗ್ಗೆ ನಮ್ಮಲ್ಲಿ ಆಧಾರಗಳಿರುವವು." ಎಂದು ರಘುವೀರರಾಯನು ಹೇಳಿ ತನ್ನ ಪೆಟ್ಟಿಗೆಯೊಳಗಿಂದ ಒಂದು ಚಿಕ್ಕದಾದ ಗಂಟನ್ನು ಕಡೆಗೆತೆಗೆದು ಅದರಲ್ಲಿರುವ ಕುತನಿಯ ಚೀಲವೊಂದನ್ನು ರಾಜಪುತ್ರನಿಗೆ ತೋರಿಸಿ "ಈ ಚೀಲವಾರದು ನಿಮಗೆ ಗೊತ್ತುಂಟೇನು?" ಎಂದು ಕೇಳಿದನು.

ಸುಲೇಮಾನನು ಆ ಚೀಲವನ್ನು ಚನ್ನಾಗಿ ಪರೀಕ್ಷಿಸಿ ನೋಡಿ "ಇದು ನಮ್ಮ ರೋಶನಾರಾ ಬೇಗಮ್ಮರದು. ಮೊನ್ನೆ ಅವರ ಹುಟ್ಟಿದ ದಿವಸ ಇದೇ ಚೀಲದಲ್ಲಿ ಮೊಹರುಗಳನ್ನು ತುಂಬಿ ಬಾದಶಹರು ಅವರಿಗೆ ಕಾಣಿಕೆಯಾಗಿ ಕೊಟ್ಟಿದ್ದರು. ಇದು ನಿಮ್ಮಲ್ಲಿ ಹೇಗೆ ಬಂದಿತು?" ಎಂದು ಕುತೂಹಲದಿಂದ ಕೇಳಿದನು.

"ವಜೀರರ ಮರಣಕ್ಕೆ ಮುಂಚಿತವಾಗಿ ಹಕೀಮ ದಾವುದನು ಈ ಚೀಲದಲ್ಲಿ ಹಣವನ್ನು ತುಂಬಿ ತಂದು ನಮ್ಮಲ್ಲಿಯ ಅಡಿಗೆಯುವನಾದ ಅಬದುಲ್ಲ ಮಜೀದನಿಗೆ ಕೊಟ್ಟಿದ್ದನು." ಎಂದು ರಘುವೀರರಾಯನು ಹೇಳಿದನು.

"ಅದೇ ಹಕೀಮ ದಾವುದನು ಆ ದುರಾತ್ಮನಾದ ಗೋಘಾತಿಯನ್ನು ರೋಶನಾರಾ ಬೇಗಮ್ಮರ ಮನೆಗೆ ಕರಕೊಂಡು ಹೋದದ್ದನ್ನು ನಮ್ಮ ಖತೀಜಾ ದಾಸಿಯು ಕಂಡಿರುವಳು." ಎಂದು ಶಹರ್‌ಜಾದೆಯು

ತೆರೆಯೊಳಗಿಂದ ಮಾತಾಡಿದಳು.

" ವಜೀರರ ಮರಣದ ರಾತ್ರಿ, ಅವರು ಕುಡಿದ ಶರಬತ್ತಿನ ಪಾತ್ರೆಯಲ್ಲಿ ವಿಷವಿತ್ತೆಂದೂ, ಅಬದುಲ್ಲನ ಕೋಣೆಯಲ್ಲಿ ಸಿಕ್ಕಿದ ಕಾಗದದ ಚೀಟಿಗೆ ಅಂಟಿಕೊಂಡಿರುವ ವಿಷವೂ ಶರಬತ್ತಿನಲ್ಲಿಯ ವಿಷವೂ ಒಂದೇ ಪ್ರಕಾರದ್ದೆಂದೂ, ರಾಜವೈದ್ಯರು ಹೇಳಿದರು." ಎಂದು ಮಹಬೂಬನು ಸೂಚಿಸಿದನು.

" ಆದರೆ ಆ ವಿಷದ ಚೀಟಿಯನ್ನು ಅಬದುಲ್ಲನಿಗೆ ಯಾರು ತಂದು ಕೊಟ್ಟರೆಂಬದು ನಿಶ್ಚಯವಾಗಿ ತಿಳಿಯದಿದ್ದಲ್ಲಿ ಏನೂ ಹೇಳಲಾಗದು." ಎಂದು ಸುಲೇಮಾನನು ಅಭಿಪ್ರಾಯಪಟ್ಟನು.

" ದ್ರಾಕ್ಷದ ಸಂಗತಿಯು ಸುಳ್ಳಾದ ಬಳಿಕ ದಾರಾ ಸುಲ್ತಾನರ ಮೇಲಿನ ಆರೋಪವು ನಿರಾಧಾರವಾದದ್ದೆಂದು ಹೇಳಲಿಕ್ಕೆ ಸಂದೇಹವಿಲ್ಲ." ಎಂದು ಮಹಬೂಬನು ನುಡಿದನು.

" ವಿಷಪ್ರಯೋಗದ ಅಂತಸ್ಥವಿಚಾರವು ಔರಂಗಜೇಬರಿಗೆ ತಿಳಿದಿತ್ತೆಂದೇ, ಅಂದಿನ ರಾತ್ರಿ ವಿಷಪ್ರಯೋಗವಾಗತಕ್ಕದ್ದಾದರೆ ಅವರು ಮಧ್ಯಾಹ್ನದಲ್ಲಿಯೇ ಆಗ್ರಾ ಪಟ್ಟಣವನ್ನು ಬಿಟ್ಟು ನಡೆದರು. ಅವರ ಸಂಚಿನಲ್ಲಿರುವವರಾದ ರೋಶನಾರೆಯವರು ಆ ಘಾತಕನಾದ ಅಬದುಲ್ಲನಿಗೆ ಸಾವಿರ ಮೊಹರುಗಳನ್ನು ಕೊಟ್ಟು ಅವನನ್ನು ಕರೆಯಿಸಿಕೊಂಡು ಆಲೋಚನೆ ಮಾಡಿದರು. ವಜೀರರ ಮರಣದ ಮರುದಿವಸವೇ ಅಬದುಲ್ಲನು ಈ ಮನೆ ಬಿಟ್ಟು ಹಕೀಮ ದಾವುದನ ಮನೆಯಲ್ಲಿ ನಿಂತುಕೊಂಡನು. ಇದಕ್ಕೂ ಪ್ರಮಾಣಗಳಿನ್ನೆಷ್ಟು ಬೇಕು ?" ಎಂದು ರಘುವೀರರಾಯನು ಕೇಳಿ ನಕ್ಕನು.

ಸುಲ್ತಾನ ಸುಲೇಮಾನನು ಸಮಾಧಾನವನ್ನು ತಳೆದು, "ಸಾಕು! ಸಾಕು! ಇನ್ನು ಬಾದಶಹರ ಮನಸ್ಸಿನೊಳಗಿನ ಸಂಶಯವನ್ನು ತೆಗೆದು ಹಾಕಲಿಕ್ಕೆ ಅಡ್ಡಿಯಿಲ್ಲ. ಮಾತ್ರ ಪ್ರಸಂಗ ಬಂದರೆ ನನ್ನ ಶಹರ್‌ಜಾದೆ ಬೇಗಮ್ಮರು ಅರಿತುಕೊಂಡಿರುವ ಸಂಗತಿಗಳನ್ನು ಬಾದಶಹರಿಗೆ ನಿವೇದಿಸಲು ಅರಮನೆಗೆ ಬರಬೇಕಾಗುವದು." ಎಂದು ನುಡಿದು ಆ ತರುಣಿಯು ನಿಂತಿರುವ ತೆರೆಯ ಕಡೆಗೆ ಮುಖ ತಿರುವಿ ಮಂದಹಾಸಗೈದನು.

"ಏನೂ ಚಿಂತೆಯಿಲ್ಲ! ಶಹರ್‌ಜಾದೆಯು ತಾನು ಕಂಡಿರುವ ಸಂಗತಿಗಳನ್ನು ಬಾದಶಹರ ಚರಣಕ್ಕೆ ಅವಶ್ಯವಾಗಿ ನಿವೇದಿಸುವಳು." ಎಂದು ಮಹಬೂಬನು ಶಹರ್‌ಜಾದೆಯ ಬದಲಾಗಿ ತಾನೇ ವಚನ ವನ್ನಿತ್ತನು.

ಇಷ್ಟೆಲ್ಲ ಸಮಾಚಾರಗಳಾದ ಬಳಿಕ ಮಹಬೂಬನು ಸುಲೇಮಾನ ನಿಗೆ ವಿನಯದಿಂದ ವಂದಿಸಿ "ಹುಜೂರರವರು ನಾಳೆಗೆ ನಮ್ಮಲ್ಲಿ ಭೋಜನಕ್ಕೆ ದಯಮಾಡಬೇಕು" ಎಂದು ನಿಮಂತ್ರಣವನ್ನಿತ್ತನು. ಸುಲೇಮಾನನಿಗೆ ಈ ಮಾತು ಇಷ್ಟವೇ ಆಗಿತ್ತು. ಶಹರ್‌ಜಾದೆಯ ಸವಿ ಮಾತುಗಳನ್ನು ಕೇಳಲೂ ಅವಳ ಮನೋಹರವಾದ ಮುಖಚಂದ್ರಮ ವನ್ನು ಯಥಾವಕಾಶವಾಗಿ ನೋಡಲೂ ಅವನಿಗೆ ಬಲವತ್ತರವಾದ ಲವಲವಿಕೆಯಿದ್ದೇ ಇತ್ತು.

## ೧೪

## ಸುಲೇಮಾನನ ಪುನರಾಗಮನವು

ಕಾಲಗತಿಯೆಂಬ ಮಹಾನದಿಯ ತೀವ್ರವಾದ ಪ್ರವಾಹವು ಏಕ ಪ್ರಕಾರವಾಗಿ ಹರಿಯುತ್ತಿರಲು ಅದರ ತೆರೆಗಳೊಡನೆ ತೇಲಿಬರುತ್ತಿರುವ ಸುಖ-ದುಃಖಗಳೆಂಬ ತೆಪ್ಪಗಳು ಮನುಷ್ಯರ ದೃಷ್ಟಿಗೆ ಹೃದ್ಯವಾಗಲೀ ವ್ಯಸನಕರವಾಗಲೀ ಕಾಣುತ್ತಿದ್ದರೂ ಅವುಗಳು ನಮ್ಮನ್ನು ಬಿಟ್ಟು ಪ್ರವಾಹದೊಡನೆ ಮುಂದಕ್ಕೆ ಹರಿದು ಹೋದ ಹಾಗೆ ಅವುಗಳ ಸ್ವರೂಪವು ಅಸ್ಪಷ್ಟವಾಗಿ ಕಾಣುತ್ತ ಕಡೆಗೆ ಕಣ್ಮರೆಯಾಗಿ ಹೋಗುವದುಂಟು. ಆ ಮೇಲೆ ಹೊಸ ತೆರೆಗಳ ಗಮನಾಗಮನಗಳನ್ನು ನಿರೀಕ್ಷಿಸುವದರಲ್ಲಿ ಮನುಷ್ಯನ ಲಕ್ಷ್ಯವು ಆಸಕ್ತವಾಗುವದರಿಂದ ಹಿಂದಿನ ಸ್ಮರಣವು ಕೂಡ ಇಲ್ಲದಂತಾಗುವದು. ಇಂಥ ವಿಲಕ್ಷಣವಾದ ಭಗವಲ್ಲೀಲೆಗಾಗಿಯೇ ಈ ಸಂಸಾರಯಾತ್ರೆಯನ್ನು ನಾವು ಹೇಗೋ ನಿರ್ವಹಿಸಿಕೊಂಡು ಹೋಗುತ್ತೇವಲ್ಲವೆ?

ಸಾದುಲ್ಲಾಖಾನನು ತೀರಿಕೊಂಡು ಒಂದು ತಿಂಗಳವಾಗಿಹೋಗಿತ್ತು. ನಿನ್ನಿನ ದುಃಖವು ಇಂದಿಗಿಲ್ಲ. ಇಂದಿನ ದುಃಖದ ಭಾರವು ನಾಳಿಗೆ ಹಗುರಾಗುವದು. ಹೀಗಾಗಿ ನಿತ್ಯದ ವ್ಯಾಪಾರಗಳು ಮತ್ತೆ ಯಥಾಸ್ಥಿತವಾಗಿ ನಡೆದವು. ಸುಲ್ತಾನ ಸುಲೇಮಾನನು ಇಂದು ತಮ್ಮ ಮನೆಗೆ ಭೋಜನಕ್ಕೆ ಬರುವನೆಂದು ಮುಹಬೂಬಖಾನನು ಬಹು ವ್ಯವಸ್ಥೆಯಿಂದ ಸಮಾರಂಭವನ್ನು ಬೆಳೆಸಿದ್ದನು. ಮನೆಯ ಎಲ್ಲ ಭಾಗಗಳೂ ಬಹುಪರಿಯಾಗಿ ಅಲಂಕರಿಸಿ ಸಜ್ಜಾಗಿದ್ದವು. ಎಲ್ಲಿ ಹೋದರೂ ಹೂಗಳ ಮಕರಂದವು, ಎಲ್ಲಿ ನೋಡಿದರೂ ಚಿತ್ರ-ತಸಬೀರುಗಳ ರಮಣೀಯತೆಯು! ಉಪ್ಪರಿಗೆಯಲ್ಲಿಯ ನಡುಮನೆಗೆ ಕೂಂದಿದ್ದ ಬೇರೊಂದು ಅಂತರ್ಗೃಹದಲ್ಲಿ, ವೀಣಾ, ಮೃದಂಗ, ಸಾರಂಗ ಮುಂತಾದ ವಾದ್ಯಗಳ ಸ್ವರಸಂಯೋಗವು ಬಹು ಗಂಭೀರವಾಗಿಯೂ ಇಂಪಾಗಿಯೂ ಕೇಳಬರುತ್ತಿತ್ತು.

ಸುಲೇಮಾನಸುಲ್ತಾನರು ಈಗಲೇ ದಯಮಾಡಿಸುವರೆಂದು ಒಬ್ಬ ರಾಹುತನು ಬಂದು ಮುಹಬೂಬಖಾನನಿಗೆ ಸೂಚಿಸಿದನು. ರಾಜಪುತ್ರನ ಸ್ವಾಗತಕ್ಕಾಗಿ ಮುಹಬೂಬಖಾನನು ಒಳ್ಳೇ ಪೋಷಾಕು ಮಾಡಿಕೊಂಡು ಸಿದ್ಧನಾಗಿ ಪಡಸಾಲೆಯಲ್ಲಿ ನಿಂತುಕೊಂಡನು. ದಾಸ ದಾಸಿಯರೂ ಕಾರಕೂನ ಗುಮಾಸ್ತರೂ ಸುಲ್ತಾನನನ್ನು ಕಾಣುವ ಲವಲವಿಕೆಯಿಂದ ಅಂದವಾದ ಬಟ್ಟೆಗಳನ್ನು ಧರಿಸಿ ಅತ್ತಿತ್ತ ಓಡಾಡುತ್ತಿದ್ದರು. ಪ್ರತ್ಯಕ್ಷ ವಜೀರನ ಬೀಬೀಸಾಹೇಬಳು (ಹೆಂಡತಿಯು) ತನಗೊದಗಿದ ವಿಪತ್ತನ್ನು ಬದಿಗಿಟ್ಟು ಉಪ್ಪರಿಗೆಯ ಮೇಲಿನ ಒಂದು ಭಾಗದಲ್ಲಿ ತೆರೆಯನ್ನು ಕಟ್ಟಿಕೊಂಡು ಮಗಳೊಡನೆ ಸುಲೇಮಾನನ್ನು ನೋಡುವ ಕುತೂಹಲದಿಂದ ಕುಳಿತಿದ್ದಳು.

ಸಾದುಲ್ಲಾಖಾನನಿರುವಾಗ ಅವನು ತನ್ನ ಮಗಳಾದ ಶಹರ್‌ಜಾದೆಯನ್ನು ಸುಲೇಮಾನನಿಗೆ ಕೊಡುವ ಆಲೋಚನೆಯನ್ನು ಮಾಡಿದ್ದನಷ್ಟೆ? ಸುಲೇಮಾನನ ಮನಸ್ಸಿಗಾದರೂ ಆ ಸಂಬಂಧವು ಪ್ರಿಯವಿತ್ತು. ವಜೀರನು ತೀರಿಕೊಂಡ ಬಳಿಕ ತಮ್ಮ ಮನೆತನದ ಆಢ್ಯತೆಯನ್ನು ಕಾಪಾಡಿಕೊಳ್ಳಬೇಕಾದರೆ ಶಹರ್‌ಜಾದೆಯನ್ನು ಸುಲೇಮಾನನಿಗೆ ಕೊಡುವದೇ ವಿಹಿತವಾದ ಮಾರ್ಗವೆಂದು ಬೀಬೀಸಾಹೇಬಳಿಗೆ ತೋರಿದ್ದರಿಂದ ಅವಳು

ಬುಪಸ್ಥ್ಯ ಆ ರಾಜಪುತ್ರನನ್ನು ತನ್ನ ಮನೆಗೆ ಭೋಜನದ ನೆವದಿಂದ ಕರೆಸಿ ಕೊಂಡಿದ್ದಳು. ಇಂಥ ಸುಸಂಬಂಧವು ಮಹಬೂಬನಿಗಾದರೂ ಇಷ್ಟ ವಾಗಿ ತೋರಿದ್ದರಿಂದ ಅಂದಿನ ಸಮಾರಂಭವನ್ನು ಅವನೊಳ್ಳೇ ಮನಸ್ಸು ಕೊಟ್ಟು ಬೆಳೆಸಿದ್ದನು.

ಸುಲೇಮಾನನ ಮೇಣೆಯು ಬಂದಿತು. ಮಹಬೂಬನು ಬಗಬಗೆ ಯಿಂದ ಮೇಣೆಯ ಬಾಗಿಲಕ್ಕೆ ಹೋಗಿ ಭರತಖಂಡದ ಯುವರಾಜನ ಜ್ಯೇಷ್ಠಪುತ್ರನಿಗೆ ಕರಾವಲಂಬನವನ್ನಿತ್ತು, ಒಳಕ್ಕೆ ಕರಕೊಂಡು ಬಂದನು. ಆಜಾನುಬಾಹುವಾದ ಆ ರಾಜಪುತ್ರನ ಮುಖಕಮಲದಲ್ಲಿ ತೋರುತ್ತಿ ರುವ ಪ್ರಸನ್ನತೆಯು ಪ್ರೇಕ್ಷಕರ ಮನಸ್ಸಿನಲ್ಲಿ ಆದರವನ್ನೂ ಭಕ್ತಿಯನ್ನೂ ಉಂಟುಮಾಡುತ್ತಿತ್ತು. ಸುಲೇಮಾನನು ನೀಲವರ್ಣದ ಜರತಾರಿಯ ನಿಲುವಂಗಿಯನ್ನು ತೊಟ್ಟು ತಲೆಗೆ ಅತಿಶುಭ್ರವಾದ ಜರದ ಮುಂದೀಲ ವನ್ನು ಒಳ್ಳೇ ಸೊಬಗಿನಿಂದ ಸುತ್ತಿದ್ದನು. ರತ್ನಖಚಿತವಾದ ಹಿಡಿಕೆ ಯುಳ್ಳ ಖಡ್ಗವನ್ನು ಹಿಡಿದಿರುವ ಆ ನವತರುಣನ ತೋರಬೆರಳಿನಲ್ಲಿರುವ ವಜ್ರದ ಅನರ್ಘವಾದ ಉಂಗುರವು ಶುಕ್ರನ ತೇಜಸ್ಸಿನಿಂದ ಮೆರೆದು ತೋರುತ್ತಿತ್ತು. ಶಹಾಜಹಾನ್ ಬಾದಶಹನ ಸಿಂಹಾಸನಕ್ಕೆ ಅಧಿಕಾರಿ ಯಾದ ಆ ಮದನಸುಂದರನು ಗಂಭೀರವಾದ ನಡಿಗೆಯಿಂದ ಬರುತ್ತಿರು ವದನ್ನು ಕಂಡು ಸಾದುಲ್ಲಾಖಾನನ ಹೆಂಡತಿಯು ಮುಗುಳುನಗೆಯಿಂದ ಶಹರ್‌ಜಾದೆಯ ಮುಖವನ್ನು ನೋಡಿ "ಶಹರ್‌ಜಾದೆ, ಭಗವದಿಚ್ಛಾನು ಸಾರವಾಗಿ ನೀನು ಈ ಭೂಮದನನ ಹೆಂಡತಿಯಾದರೆ ನಿನ್ನಷ್ಟು ಭಾಗ್ಯ ಶಾಲಿಯಾದ ಸ್ತ್ರೀಯು ಈ ಭೂಲೋಕದಲ್ಲಿ ಮತ್ತೊಬ್ಬಳಿಲ್ಲವೆಂದು ನಾನು ಹೇಳುವೆನು.' ಎಂದು ಅಕ್ಕರತೆಯಿಂದ ನುಡಿದಳು. ಮಗಳ ಲಕ್ಷ್ಯವೆಲ್ಲ ರಾಜಪುತ್ರನ ದಿವ್ಯಾಂಗವನ್ನು ನಿರೀಕ್ಷಿಸುವದರಲ್ಲಿ ತೊಡಗಿ ದ್ದರಿಂದ ತಾಯಿಯು ಆಡಿದ ಅಭಿಪ್ರಾಯವನ್ನು ಚನ್ನಾಗಿ ಅರಿತುಕೊಳ್ಳದೆ "ಅಹುದು!" ಎಂದು ಹೇಳಿದಳು. ಬೀಬೀಸಾಹೇಬಳು ಮಗಳ ಚಿತ್ತ ವೃತ್ತಿಯನ್ನರಿತು ನಕ್ಕು ಸುಮ್ಮನಾದಳು.

ಮಹಬೂಬನು ಸುಲೇಮಾನ ಸುಲ್ತಾನನನ್ನು ಅಟ್ಟದ ಮೇಲೆ ಕರ ಕೊಂಡು ಬಂದು ಅಲ್ಲಿರುವದೊಂದು ವಿಸ್ತಾರವಾದ ಮಂದಿರದಲ್ಲಿರಿಸಿದ

ಅಲಂಕೃತವಾದ ಮಂಚದ ಮೇಲೆ ಕುಳ್ಳಿರಿಸಿದನು. ಸೇವಕರು ಮಯೂರ ಪಿಚ್ಛಗಳಿಂದ ಭೂಷಿತವಾದ ತಾಲವೃಂತಗಳಿಂದ ರಾಜಕುಮಾರನಿಗೆ ಗಾಳೀ ಹಾಕುತ್ತಿರುವಾಗ ಅವನು ಆ ಮಂದಿರದ ಶೋಭೆಯನ್ನು ಸಹಜವಾದ ದೃಷ್ಟಿಯಿಂದ ನೋಡುತ್ತಿದ್ದನು. ಅಷ್ಟರಲ್ಲಿ ಇದಿರಿಗಿದ್ದ ಜಾಗಿಲದ ತೆರೆಯನ್ನು ಮೆಲ್ಲನೆ ನೂಕಿ ರೂಪವತಿಯಾದ ದಾಸಿಯೋರ್ವಳು ಶರಬತ್ತಿನ ರತ್ನಖಚಿತವಾದ ಹೂಜೆಯನ್ನು ಬಂಗಾರದ ತಳಿಗೆಯಲ್ಲಿರಿಸಿ ಅದನ್ನು ರಾಜಪುತ್ರನ ಮುಂದಿರಿಸಿ ಪ್ರಣಾಮ ಮಾಡಿದಳು. ಮಹಬೂಬನು ವಿನಯದಿಂದೆದ್ದು ಹೂಜೆಯಲ್ಲಿಯ ಪೇಯವನ್ನು ಚಿತ್ರಮಯವಾದ ಬಟ್ಟಲಿಗೆ ಹಾಕಿ ಅದನ್ನು ಸುಲೇಮಾನನಿಗೆ ಸಮರ್ಪಿಸಿ ಪ್ರಣಾಮ ಮಾಡಿ ಸ್ವೀಕರಿಸಬೇಕೆಂದು ಬೆಸಗೊಂಡನು. ಸುಲೇಮಾನನು ಎದ್ದು ನಿಂತು ಮಹಬೂಬನಿಗೆ ಪ್ರಣಾಮ ಮಾಡಿ ನೀವು ಮೊದಲು ತೆಗೆದುಕೊಳ್ಳಬೇಕೆಂದು ಮಂದಹಾಸದಿಂದ ಹೇಳಿದನು. ಮಹಬೂಬನು ರಾಜಪುತ್ರನಿಗೆ ನೆಲಮುಟ್ಟಿ ಪ್ರಣಾಮ ಮಾಡಿ "ಹಾಗಲ್ಲ ದೇವರೂ, ತಾವೇ ಮೊದಲು ತೆಗೆದುಕೊಳ್ಳಬೇಕು." ಎಂದು ವಿನಯದಿಂದ ಹೇಳಿಕೊಂಡನು. ಹೀಗೆ 'ತಾವು ತೆಗೆದುಕೊಳ್ಳಬೇಕು' 'ತಾವು ತೆಗೆದುಕೊಳ್ಳಬೇಕು' ಎಂಬ ವಿನಯೋಕ್ತಿಗಳೂ ಅನ್ಯೋನ್ಯ ಪ್ರಣಾಮಗಳೂ ಎಡೆಬಿಡದೆ ನಡೆದಿದ್ದವು. ಆಗಲಾ ನಿಪುಣೆಯಾದ ದಾಸಿಯು ಚಪಲತೆಯಿಂದ ಬೇರೆ ಎರಡು ಬಟ್ಟಲಗಳನ್ನು ತಂದು ಶರಬತ್ತನ್ನು ತುಂಬಿ ಅವುಗಳನ್ನು, ಅಗ್ರಮರ್ಯಾದೆಯನ್ನೊಲ್ಲದವರಾದ, ಆ ತರುಣರೀರ್ವರಿಗೂ ಸಮರ್ಪಿಸಿದಳು. ಸುಲೇಮಾನನು ಮಂದಹಾಸದಿಂದ ನಕ್ಕು "ವಾಃ! ಅಮೀನಾ, ನ್ಯಾಯವನ್ನು ಚನ್ನಾಗಿ ಮುರಿದಿ! ಇಲ್ಲದಿದ್ದರೆ ಬಾಯಾರಿಕೆಯನ್ನಿಟ್ಟುಕೊಂಡು ನಾವೀರ್ವರೂ ತಾವು ತಾವೆಂದು ಶುಷ್ಕೋಪಚಾರದಲ್ಲಿ ಕಾಲ ಕಳೆಯುತ್ತಿದ್ದೆವು." ಎಂದು ಹೇಳಿ ಅಮೃತೋಪಮವಾದ ಆ ಪೇಯವನ್ನು ಸಾವಕಾಶವಾಗಿ ಕುಡಿಯುತ್ತ ಮಹಬೂಬನಿಗೂ ಕುಡಿಯ ಹೇಳಿದನು. ಕುಡಿಯುವದಾದ ಬಳಿಕ ಸುಲೇಮಾನನು ಸಂತುಷ್ಟನಾಗಿ ತನ್ನ ಬಟ್ಟಲವನ್ನು ಕೆಳಗಿರಿಸಿ "ಅಮೀನಾ, ಪಾನಕವು ಬಹು ಸ್ವಾರಸ್ಯಮಯವಾದದ್ದು. ಇದನ್ನು ನೀನೇ ಸಿದ್ಧಪಡಿಸಿದಿಯೊ?" ಎಂದು

ಕೇಳಿದನು.

ಅಮೀನೆಯು ಪ್ರಣಾಮ ಮಾಡಿ ಮುಗುಳುನಗೆ ನಕ್ಕು "ಹಜರತ್, ಇದನ್ನು ನಾನು ಸಿದ್ಧಮಾಡಲಿಲ್ಲ. ನನ್ನ ಒಡತಿಯವರಾದ ಶಹರ್‌ಜಾದಾ ಬೇಗಮ್ಮರ ಕೈ ಮುಟ್ಟದಿದ್ದರೆ ಇಂಥ ಪೀಯೂಷಸಮವಾದ ಪೇಯವು ಸಿದ್ಧವಾಗುವದುಂಟೆ?" ಎಂದು ಹೇಳಿದಳು.

"ಎಂದೇ ಇದಿಷ್ಟು ಮಧುರವಾಗಿದೆ! ಅಮೀನಾ, ಮೀಸಲವಾಗಿ ಉಳಿದಿರುವ ಆ ಮೂರನೆಯ ಬಟ್ಟಲವನ್ನು ಹೀಗೆ ಕೊಡು. ಅದನ್ನು ಕುಡಿದು ಶಹರ್‌ಜಾದೆಯವರನ್ನು ಕೊಂಡಾಡುವೆನು." ಎಂದು ಹೇಳಿ ಆಮೀನೆಯ ಕೈಯೊಳಗಿನ ಬಟ್ಟಲವನ್ನು ತೆಗೆದುಕೊಂಡು ಅದರಲ್ಲಿಯ ದಿವ್ಯರಸವನ್ನು ಒಂದೇ ಗುಟುಕು ಮಾಡಿ ಕುಡಿದುಬಿಟ್ಟನು.

ಅದೇ ಸಮಯಕ್ಕೆ ರನ್ನದುಂಗುರಗಳಿಂದ ಅಲಂಕೃತವಾಗಿರುವ ಗೌರವರ್ಣದ ಸರಲ ಕರಾಂಗುಲಿಗಳುಳ್ಳ ಅತಿ ಮೋಹಕವಾದ ಹಸ್ತವು ಕಂಕಣಗಳ ಝಣತ್ಕಾರದೊಂದಿಗೆ ಬಾಗಿಲದ ತೆರೆಯನ್ನು ಸಾರ್ಚಿದಂತಾಯಿತು. ಸುಲೇಮಾನನ ದೃಷ್ಟಿಯು ಆ ತೆರೆಯ ಕಡೆಗೇ ಇದ್ದಿತು. ಶರದಭ್ರದ ಮರೆಗಿರುವ ಚಂದ್ರಮಂಡಲದ ಶೋಭೆಯನ್ನಾಂತಿರುವ ತರುಣಿಯೋರ್ವಳ ಮುಖಮಂಡಲವು ಜಗ್ಗನೆ ಕಂಗೊಳಿಸಿತು. ಆ ಮನೋಹರವಾದ ಮುಖದಲ್ಲಿ ಮಿನುಗಿದೆಳೆನಗೆಯೂ, ಇಂದೀವರದ ಪ್ರಭೆಯನ್ನು ಕದ್ದುಕೊಂಡಿರುವ ಅವಳ ಸುಮನೋಹರವಾದ ನೇತ್ರಗಳ ಕಟಾಕ್ಷಕ್ಷೇಪವೂ, ನಮ್ಮ ತರುಣನಾದ ರಾಜಪುತ್ರನ ಮರ್ಮವನ್ನು ಒಳಿತಾಗಿ ಭೇದಿಸಿದವು. "ಮನಕಿನಿದಾದ ಜವ್ವನಕೆ ತಕ್ಕ ವಿಲಾಸತೆ, ತದ್ವಿಲಾಸಮಂಗಘನಮೆನೆ ಮಾಳ್ಪ ಜಾಣ್ಮೆ"ಗಳುಳ್ಳ ಯುವತಿಯ ಪ್ರೇಮಕ್ಕೆ ವಶವಾಗದವರಾರು? ತಮ್ಮೀರ್ವರಲ್ಲಿ ಅನ್ಯೋನ್ಯ ಪ್ರೇಮವು ನೆಲಸಿರುವದೆಂದು ಅವರೀರ್ವರೂ ಮನಗಂಡರು.

"ಅಮೀನಾ, ಶಹರ್‌ಜಾದೆಗೆ ವೀಣೆಯನ್ನು ತೆಗೆದು ಕೊಡು. ಒಂದು 'ಚೀಜ್' (ಲಲಿತವಾದ ಪದ) ಹೇಳೆಂದು ಹೇಳು" ಎಂದು ಮಹಬೂಬಖಾನನು ಆ ದಾಸಿಗೆ ಆಜ್ಞಾಪಿಸಿದನು.

ಅಣ್ಣನ ಸೊಲ್ಲು ಕೇಳಿದ ಕೂಡಲೆ ಶಹರ್‌ಜಾದೆಯು ಚಕಿತಳಾಗಿ

ಕೋಲುಮಿಂಚು ಮೇಘಮಂಡಲದಲ್ಲಿ ಅಡಗಿಕೊಳ್ಳುವಂತೆ ಥಕ್ಕನೆ ತೆರೆಯ ಮರೆಯಲ್ಲಿ ಅಂತರ್ಧಾನಳಾದಳು. ಸುಲೇಮಾನನಾದರೂ ಸಮವೃತ್ತಿಯಾಗಿ ಮಹಬೂಬಖಾನನೊಡನೆ ಮಾತಾಡುವದರಲ್ಲಿ ತೊಡಗಿದನು. ಅಷ್ಟರಲ್ಲಿ ಅಂತರ್ಗೃಹದಲ್ಲಿ ವೀಣಾ-ಮೃದಂಗಾದಿ ವಾದ್ಯಗಳ ಇಂಪಾದ ಸ್ವರಸಂಯೋಗವೆಸಗಿತು. ಸಂಗಡಲೆ ಮಂಜುಲವಾಣಿಯು ರೀರ್ವರು ಉಚ್ಚಸ್ವರದಿಂದ "ಬ್ರಿಜಮೇದಧಿ ಚೇಚನ ಜಾತ ಸಖಿ" ಎಂಬ ಪದವನ್ನು ಸಾರಂಗ ರಾಗದಲ್ಲಿ ಬಹು ಸುಶ್ರಾವ್ಯವಾಗಿ ಹಾಡ ತೊಡಗಿದರು. ಧ್ವನಿ ಸಾಲದಕ್ಕಾಗಿ ಓರ್ವಳು ನಡುನಡುವೆ ನಿಲ್ಲುತ್ತಿದ್ದಳು. ಅವಳು ಅಮೀನೆಯೆಂದು ಸುಲೇಮಾನನು ಗುರುತು ಹಿಡಿದನು. ಮತ್ತೊಬ್ಬಳು ಅವಿರತವಾಗಿ ಆಲಾಪಗಳನ್ನು ತೆಗೆದುಕೊಂಡು ಮೂರನೆಯ ಸಪ್ತಕದ ವರೆಗೆ ಸ್ವರವನ್ನೆತ್ತಿ ನಿರಾಯಾಸವಾಗಿಯೂ ಸವಿಕಟ್ಟಾಗಿಯೂ ಹಾಡುತ್ತಿರುವಾಗ ಮಹಬೂಬ ಸುಲೇಮಾನರು ಆಗಾಗ್ಗೆ "ವಾಃ ವ್ವಾ! ಶಾಬಾಸ್!' ಎಂದು ಕೊಂಡಾಡಿ ತಲೆದೂಗಿದರು. ಆ ಗಾನದ ಮಾಧುರ್ಯವೂ ತುಂಬಿಬರುವ ಸ್ವರೋಚ್ಚಯವೂ, ರಸಭಾವಗಳ ಆವಿಷ್ಕರಣವೂ, ಗಾಯಕಿಯ ವಯೋಮಾನ, ಅಂಗಸೌಷ್ಠವ ಲೀಲಾವಿಲಾಸಗಳನ್ನು ಕಣ್ಣಿಗೆ ಕಟ್ಟುವಂತಿದ್ದವು.

"ಮಹಬೂಬಖಾನ್, ಈ ಗಾನನಿಪುಣೆಯು ನಿಮ್ಮ ಪ್ರಿಯ ಭಗಿನಿಯಾದ ಶಹರ್‌ಜಾದೆಯೇ ಅಹುದೇನು?" ಎಂದು ಸುಲೇಮಾನನು ಮಿತಭಾಷಿಯಾಗಿ ಕೇಳಿದನು.

"ಅಹುದು. ಅವಳ ಸ್ವರಾವರ್ತಾದಿಗಳು ಸರಿಯಾಗಿರುವವಷ್ಟೆ?"

"ಅತ್ಯಂತವಾಗಿ ಮಧುರವಾಗಿವೆ! ಬಹು ಸಶಾಸ್ತ್ರವಾಗಿವೆ!" ಎಂದು ಸುಲೇಮಾನನು ಮಹಬೂಬನ ಹಸ್ತಸ್ಪರ್ಶವನ್ನು ಮಾಡಿ ಆದರದಿಂದ ಹೇಳಿದನು.

"ತಮ್ಮ ಅಭಿಪ್ರಾಯವು ನನ್ನಲ್ಲಿ ಅಭಿಮಾನವನ್ನು ಉಂಟುಮಾಡಿತು."

"ಈ ನಿಮ್ಮ ಅಭಿನವ ಕಲಾನಿಪುಣೆಯಾದ ಸೋದರಿಯು ನಮ್ಮ ನೂರಜಹಾನ್ ಬಾದಶಾಹಿಣಿಯವರಿಗೆ ಸಮಾನಳಾದ ರೂಪವತಿಯೂ

ವಿದುಷಿಯೂ ಆಗಿರುವಳೆಂಬ ಖ್ಯಾತಿಯು ನಮ್ಮ ಬಾದಶಹರವರ ಕಿವಿಗೆ ಮುಟ್ಟಿದಂತೆ ಕಾಣುತ್ತದೆ. ಇವಳಿಗೆ ತಕ್ಕವನಾದ ವರನನ್ನು ಹುಡುಕು ವದು ನಿಮ್ಮ ಕರ್ತವ್ಯವಾಗಿದೆ."

"ಬಾದಶಹರೇ ಅವಳಿಗೊಬ್ಬ ವರನನ್ನು ಗೊತ್ತುಮಾಡಿಟ್ಟಿದ್ದಾರು." ಎಂದು ಶಹರ್‌ಜಾದೆಯ ಅಣ್ಣನು ವ್ಯಂಗ್ಯೋಕ್ತಿಯನ್ನಾಡಿ ಸುಲೇಮಾನನ ಮುಖವನ್ನು ನೋಡಿ ನಕ್ಕನು

ಸುಲೇಮಾನನು ತನ್ನ ಮುಖದಲ್ಲಿ ಕಿಂಚಿತ್ ಲಜ್ಜೆಯು ಛಟಿಯು ನ್ನಾಂತು "ಅದು ಸರಿ! ವಜೀರರು ಗೊತ್ತುಮಾಡಿದ ಸ್ಥಳದಲ್ಲಿ ನೀವು ನಿಮ್ಮ ಪ್ರಿಯ ಭಗಿನಿಯನ್ನು ಕೊಡಲೊಪ್ಪುವಿರೋ ಇಲ್ಲವೋ ಎಂಬದೇ ಸಂಕೋಚವು." ಎಂದು ನುಡಿದನು.

ಮುಹಬೂಬನು ಎದ್ದು ನಿಂತು "ಹುಜೂರ್, ಇಂದು ನಾನು ಕೃತಾರ್ಥನಾದೆನು. ಈ ಸಂತೋಷದಾಯಕವಾದ ಅಭಿಪ್ರಾಯವನ್ನು ಕೇಳಿ ಇಂದಿಗೆ ನಮ್ಮ ವಜೀರರು ತೀರಿಕೊಂಡ ದುಃಖದ ಪರಿಮಾರ್ಜನ ವಾದಂತಾಯಿತು." ಎಂದು ಹೇಳಿ ರಾಜಪುತ್ರನ ಚರಣಕ್ಕೆರಗಿದನು.

ಸುಲೇಮಾನನು ಮುಹಬೂಬನನ್ನು ಆದರದಿಂದೆತ್ತಿ ಬಿಗಿದಪ್ಪಿ ಕೊಂಡು "ಖಾನ್‌ಸಾಹೇಬ, ಇಂದಿಗೆ ನೀವು ನನ್ನ ಬಂಧುಗಳಾದಿರಿ. ದೇವಾಂಗನಾ ಸದೃಶಳಾದ ನಿಮ್ಮ ಶಹರ್‌ಜಾದೆಯ ಪಾಣಿಗ್ರಹಣವನು ಮಾಡುವ ಪುಣ್ಯವು ನನ್ನದಾದರೆ, ಈ ಜಗತ್ತಿನಲ್ಲಿ ನಾನೇ ಧನ್ಯನು!" ಎಂದು ನುಡಿದನು.

ಶಹರ್‌ಜಾದೆಯು ಮತ್ತೊಂದು ರಾಗದಲ್ಲಿ ಹಾಡತೊಡಗಿದಳು. ಆಗ ಮುಹಬೂಬನು ತಂಗಿಯನ್ನು ಕುರಿತು "ಶಹರ್‌ಜಾದೆ, ಒಳ್ಳೇ ಎಚ್ಚರದಿಂದ ಹಾಡತಕ್ಕದ್ದು ಕಂಡಿಯಾ! ಸುಲೇಮಾನ್ ಸುಲ್ತಾನರು ಇದುವರೆಗೆ ನಿನ್ನ ಸ್ತುತಿ ಮಾಡಿದ್ದು ವ್ಯರ್ಥವಾಗಕೂಡದು." ಎಂದು ಹೇಳಿದನು.

ಈ ಮಾತು ಕೇಳಿ ಶಹರ್‌ಜಾದೆಯು ಬಳಿತಾಗಿ ಹಿಗ್ಗಿದಳು. ತೆರೆ ಯಾಚೆಗೆ ತಾನು ಏಕಾಕಿನಿಯಾಗಿದ್ದರೂ ಆ ತರುಣಿಯು ಲಜ್ಜೆಯಿಂದ ತಲೆಬಾಗಿಸಿಕೊಂಡು ನಿಂತಳು. ಅವಳ ಗಾನವು ಅಲ್ಲಿಗೇ ನಿಂತಿತು.

“ ಯಾಕೆ? ಗಾನವು ನಿಂತಿತೇಕೆ? ” ಎಂದು ಮಹಬೂಬನು ಕೇಳಿದನು.

“ ಅಣ್ಣಾ, ಈ ಮೊದಲು ಸಿಕ್ಕಿದಷ್ಟು ಸ್ತುತಿಯಿಂದ ತೃಪ್ತಳಾಗಿರುವದೇ ಲೇಸಲ್ಲವೆ? ಹೆಚ್ಚಿನ ಆಶೆ ಮಾಡಿ ಅಪ್ರತಿಷ್ಠೆಗೀಡಾಗುವದು ಸರಿಯಲ್ಲ ! ”

“ ಶಹರ್‌ಜಾದೆ ಬೇಗಮ್, ಬೇಕಾದರೆ ಹೆಚ್ಚಾದ ಸ್ತುತಿಯನ್ನು ಮುಂಗಡವಾಗಿಯೇ ಮಾಡುತ್ತೇವೆ. ಆಮೇಲಾದರೂ ಹಾಡುವಿರೊ ಇಲ್ಲವೊ? ” ಎಂದು ಸುಲೇಮಾನನು ಸಂಕೋಚಪಿಲ್ಲದೆ ನುಡಿದನು. ಅವನಿಗೆ ಇನ್ನೇತರ ಅಂಜಿಕೆ?

ಸುಲೇಮಾನ ಮಹಬೂಬರ ನಡುವೆ ನಡೆದ ಸಂಕೇತವು ಶಹರ್‌ಜಾದೆಗೆ ತಿಳಿದಿದ್ದಿಲ್ಲವಾದ್ದರಿಂದ, ಸುಲೇಮಾನನು ಹೀಗೆ ಬಾಯಿ ಬಿಚ್ಚಿ ಮಾತಾಡಿದ್ದನ್ನು ಅರಿತು ಅವಳಿಗೆ ವಿಸ್ಮಯವಾಯಿತು. ತನಗೆ ಪ್ರಿಯನಾದವನು, ಬಾಯಿಬಿಚ್ಚಿ ಯಾಕೆ, ನಿಷ್ಠುರವಾಗಿ ನುಡಿದಿದ್ದರೂ ಪ್ರಣಯಿನಿಗೆ ಅದು ಪ್ರಿಯವೇ ಸರಿ. ಆದರೂ ವಿನಯಶೀಲನಾದ ಆ ರಾಜಪುತ್ರನು ಹೀಗೆ ಸ್ವಚ್ಛಂದವಾಗಿ ಮಾತಾಡಿದ್ದು ಹೇಗೆಂದು ಅವಳು ಬೆರಗಾಗಿ ನಿಂತಳು. ಕಡೆಗೆ ಅವಳು ತನ್ನ ಅಣ್ಣನನ್ನು ಕುರಿತು “ ಮಹಬೂಬ, ಹಾಡಲೇಬೇಕೇನು? ” ಎಂದು ಕುಗ್ಗಿದ ಧ್ವನಿಯಿಂದ ಕೇಳಿದಳು.

“ ಹಾಡಲೇಬೇಕು! ಗತ್ಯಂತರವೇ ಇಲ್ಲ. ಗುಣಗಳಿಗೆ ಲುಬ್ಧರಾದ ರಾಜಪುತ್ರರಿಗೆ ನಿನ್ನ ಗಾನದಲ್ಲಿ ತಪ್ಪಿದ್ದರೂ ಅವರಿಗನ್ನು ತಿಳಿಯುವಂತೆ ಇಲ್ಲ. ”

“ ಏನೋ ಹೆಚ್ಚು ಕಡಿಮೆಯಿರಲಿಕ್ಕೆ ಸಾಕು! ಸುಲ್ತಾನರು ತಮ್ಮ ಪ್ರೇಮವನ್ನು ಅಣ್ಣನ ಮುಂದೆ ಪ್ರಕಟಗೊಳಿಸಿರುವರೊ ಏನೋ! ” ಎಂದು ಆ ಚತುರೆಯು ತರ್ಕಿಸಿದ್ದು ಸರಿಯಾದದ್ದಲ್ಲವೆ? ಮತ್ತೊಂದು ಮಾತಾಡದೆ ಶಹರ್‌ಜಾದೆಯು ಒಳ್ಳೇ ಮನಸ್ಸುಗೊಟ್ಟು ಹಾಡಿದಳು. ಆ ಗಾನದ ಇಂಪಾದ ನಿನಾದವು ಮನೆತುಂಬ ತುಂಬಿತು. ಶ್ರೋತೃಗಳ ಶ್ರವಣೇಂದ್ರಿಯಗಳಲ್ಲಿ ಸೂಸಿ ಹರಿಯಿತು ಹೃದಯದಲ್ಲಿಯೂ ರಕ್ತವಾಹಿನಿಗಳಲ್ಲಿಯೂ, ಮಿದುಳು ಮಜ್ಜೆಗಳಲ್ಲಿಯೂ ತುಂಬಿಕೊಂಡು

ಅಲ್ಲಲ್ಲಿ ಪ್ರತಿಧ್ವನಿಗೊಂಡಿತು. ಸ್ತುತಿಗಳ ಘನವೃಷ್ಟಿಯಾಯಿತು. ಶಹರ್ ಜಾದೆಗೆ ತನ್ನ ಅಭೀಷ್ಟೆಯು ಪೂರಿತವಾಯಿತೆಂದು ತುಂಬಾ ನಂಬಿಗೆ ಯುಂಟಾಯಿತು.

ಗಾನದ ತರುವಾಯ, ಭೋಜನದ ವ್ಯವಸ್ಥೆಯನ್ನು ನೋಡಿಕೊಂಡು ಬರುವೆನೆಂದು ಮಹಬೂಬನು ಸುಲೇಮಾನನ ಅಪ್ಪಣೆಯನ್ನು ತೆಗೆದು ಕೊಂಡನು. ಆಗ ಸುಲೇಮಾನನು, “ಖಾನಸಾಹೇಬ, ಹಿಂದಕ್ಕೆ ನಾನು ಬಂದಾಗ ನಿಮ್ಮ ಪ್ರದರ್ಶನಾಲಯುವನ್ನು ನೋಡಿ ಆಶ್ಚರ್ಯಗೊಂಡೆನು. ನೀವು ಹೋಗಿ ಬರುವಷ್ಟರಲ್ಲಿ ಅದೇ ಪ್ರದರ್ಶನಾಲಯುವನ್ನು ಇನ್ನೊಮ್ಮೆ ನೋಡಬೇಕೆನ್ನುವೆನು.” ಎಂದು ಸೂಚಿಸಿದನು. ಮಹಬೂಬನು ಹಾಗೆಯೇ ಆಗಲೆಂದು ಹೇಳಿ ತನ್ನ ಭಾವೀ ಮೈದುನನಿಗೆ ಪ್ರದರ್ಶನಾ ಲಯುದ ಮಾರ್ಗವನ್ನು ತೋರಿಸಿ, ತಾನು ತನ್ನ ಕೆಲಸಕ್ಕೆ ಹೊರಟು ಹೋದನು.

## ೧೫

## ಬಾದಶಹಾ ಬೇಗಮ್ಮರ ಸಂವಾದವು

ಜಗತ್ತಿನಲ್ಲಿ ಮನುಷ್ಯನು ಉಚ್ಚನೀಚವಾದ ಸ್ಥಿತಿಯಲ್ಲಿರುವದು ಅನೇಕಾಂಶಗಳಲ್ಲಿ ದೈವಾಧೀನವಾದ ಸಂಗತಿಯಾಗಿದ್ದರೂ, ಸುಖಿಯೂ ಮಾನ್ಯನೂ ಆಗಿರುವದಾದರೂ ಅನೇಕಾಂಶಗಳಲ್ಲಿ ಅವನ ಸ್ವಾಧೀನ ವಾದ ಮಾತು ಎಂದು ಹೇಳಬಹುದು. ಒಬ್ಬ ಪೋರನು ಜಹಾಂಗೀರನ ಹೊಟ್ಟೆಯಲ್ಲಿ ಹುಟ್ಟಿ ಶಹಾಜಹಾನ್ ಬಾದಶಹನಾದರೆ, ಅದೇ ದಿವಸವೇ ಮತ್ತೊಬ್ಬ ಪೋರನು ಓರ್ವ ಒಡತೆಯಲ್ಲಿ ಹುಟ್ಟಿ ಮಧ್ಯಾಹ್ನದ ಕೂಳಿ ಗಾಗಿ ಅಖಂಡವಾಗಿ ದುಡಿಯುತ್ತಿರಬಹುದು. ಆದರೆ ಸಾಹಸ, ಉದ್ಯಮ, ಸದಸದ್ವಿವೇಕ, ಅಲ್ಪ ಸಂತೋಷ ಮುಂತಾದ ಸ್ವಾಯತ್ತವಾದ ಸಾಧನ ಗಳಿಂದ ಮನುಷ್ಯನು ಸುಖಿಯಾಗಿಯೂ ಜನವಂದ್ಯನಾಗಿಯೂ ಇರ ಬಲ್ಲನು. ವಿಚಾರವಂತನು ಎಲ್ಲಿ ಹೋದರೂ ಸುಖಿಯೇ ; ಅವಿಚಾರಿಯು

ಎಲ್ಲಿ ಹೋದರೂ ದುಃಖಿಯೇ. ಅಲ್ಪ ಸಂತುಷ್ಟನಾದ ಮನುಷ್ಯನು ಯಾವಾಗಲು ಸಂತುಷ್ಟನಾಗಿದ್ದು ಜಗಚ್ಚಾಲಕನಾದ ಪರಮಾತ್ಮನು ಹೆಚ್ಚಾಗಿ ಕೊಟ್ಟ ಸುಖಗಳನ್ನು ಆದರದಿಂದ ಸ್ವೀಕರಿಸಿ ಅಹಂಕಾರವಿಲ್ಲದೆ ಅವುಗಳನ್ನು ಭುಂಜಿಸುವನು; ಭಗವದಿಚ್ಛೆಯಿಂದ ಪ್ರಾಪ್ತವಾದ ದುಃಖ ಗಳನ್ನು ಧೈರ್ಯದಿಂದ ಸಹಿಸಿಕೊಂಡು ಪಾರಾಗುವನು. ಅವ್ಯವಸ್ಥಿತನು ತನ್ನ ದೋಷಗಳನ್ನೂ ದೈವದ ದೋಷಗಳನ್ನೂ ಕೂಡಿಯೆ ದೈವದ ಮೇಲೆ ಹೊರಿಸಿ ದುಃಖಿಯಾಗುತ್ತಾನೆ. ಇಂದಿನ ಸ್ಥಿತಿಯನ್ನೇ ನಾಳಿಗೆ ಇಟ್ಟುಕೊಳ್ಳುವೆನೆನ್ನಲು ಮನುಷ್ಯನು ಅಸ್ವತಂತ್ರನಲ್ಲವೆ? ಭಗವದಿಚ್ಛೆಯು ಹೊರತಾಗಿ ತೃಣಾಂಕುರವು ಕೂಡ ಅಲ್ಲಾಡಲರಿಯದು. ಹೀಗಿರಲು ನಾನನುಭವಿಸುತ್ತಿರುವ ವೈಭವವೂ ನನ್ನದಲ್ಲ, ನನ್ನ ವಿಪತ್ತಾದರೂ ಸ್ಥಿರ ವಾದುದಲ್ಲವೆಂದು ತಿಳಿದು ತನ್ನ ಕರ್ತವ್ಯವನ್ನು ಮಾಡುತ್ತಿರುವ ಪುರು ಷನೇ ಜಾಣನು. ಅವನೇ ಸುಖಗಳನ್ನು ಅನುಭವಿಸತಕ್ಕ ರಸಿಕನು.

ಈ ವಿಚಾರವನ್ನರಿಯದೆ, "ಸಂಸಾರವು ನನ್ನಿಂದಲೇ ಸಾಗಿರುವದು, ನಾನು ಸತ್ತುಹೋದರೆ ನನ್ನ ಹೆಂಡರು ಮಕ್ಕಳ ಗತಿಯು ನಿಶ್ಚಯವಾಗಿ ಕೆಟ್ಟು ಹೋಗುವದು," ಎಂದು ಮನುಷ್ಯನು—ತಾನೇ ಜಗತ್ತಿನ ನಿಯಾಮಕನಾಗಿರುವಂತೆ— ಚಿಂತಿಸುತ್ತಾನೆ. ಇದಕ್ಕೂ ಆಶ್ಚರ್ಯ ಕರವಾದ ಮಾತೆಂದರೆ, ವೃದ್ಧನೂ, ವಿಕಲೇಂದ್ರಿಯನೂ, ಊರೆಯ ಕಡ್ಡಿ ಯನ್ನೆತ್ತಿ ಅಡೆಗಡಲು ಅಸಮರ್ಥನೂ ಆಗಿರುವ ಮುದಿಹುಚ್ಚನು ತಾನು ಬದುಕಿರುವದರಿಂದಲೇ ಈ ಸಂಸಾರವೆಂದು ನಂಬಿ ತನ್ನ ಪಶ್ಚಾತ್ ತನ್ನ ಮನೆಯವರ ಗತಿಯೇನೆಂದು ವ್ಯಸನಪಡುತ್ತಿರುವನಲ್ಲವೆ?

ಗತವಯಸ್ಕನೂ, ಭೋಗಾತಿರೇಕದಿಂದ ಕ್ಷೀಣನಾದವನೂ ಆದ ಶಹಾಜಹಾನ್ ಬಾದಶಹನು ಚಿನ್ನದ ಹರಿವಾಣದಲ್ಲಿರಿಸಿದ ಪಕ್ವಾನ್ನಗಳಲ್ಲಿ ರುಚಿಗಾಣದೆ, ಅಡಿಗೆಯವನನ್ನೂ ರಾಜವೈದ್ಯನನ್ನೂ ಶಾಪಿಸುತ್ತ ಕೈ ದೊಳೆದು ಸುಖಾಸನದಲ್ಲಿ ಅಸುಖಿಯಾಗಿ ಕುಳಿತು ಪರಿಮಳಯುತವಾದ ಧೂಮ್ರಪಾನವನ್ನು ಮಾಡಲೆಸಗಿ ಅಖಂಡವಾಗಿ ಖೊಯ್, ಖೊಯ್ಯೆಂದು ಕೆಮ್ಮುತ್ತಲಿದ್ದನು ಚಿಂತಾಗ್ರಸ್ತನಾಗಿರುವ ಆ ವೃದ್ಧನಾದ ಬಾದಶಹನು ಕಡೆಗೆ ಹಾಸಿಗೆಯಲ್ಲುರುಳಿ ಮಂದಿರದ ಮೇಲ್ಕಟ್ಟಿನಲ್ಲಿ ದೃಷ್ಟಿಯು

ನ್ನಿಟ್ಟವನಾಗಿ ಬಾಯಿಯಲ್ಲಿ ವಟವಟಿಸುತ್ತಿದ್ದದ್ದೇನಂದರೆ:—

"ಏನು ಅನರ್ಥಗಳಿವು! ಸಿಂಹಾಸನದ ಹಂಬಲಕ್ಕೆ ಬೆಂಕೀ ಹಾಕಲಿ! ದುರಳರಾದ ನನ್ನ ಮಕ್ಕಳು ಮಂತ್ರಿಶ್ರೇಷ್ಠನಾದ ಸಾದುಲ್ಲಾಖಾನನನ್ನು ಕೊಂದು ನನ್ನ ಕಣ್ಣು ಕಳೆದಂತೆ ಮಾಡಿಟ್ಟರು. ಇನ್ನು ನನ್ನ ರಾಜ್ಯವು ನಡೆಯುವದು ಹೇಗೆ? ದಾರಾಸುಲ್ತಾನನು ನನ್ನ ವಜೀರನನ್ನು ಕೊಲ್ಲಿಸಿದನೆಂದು ರೋಶನಾರೆಯು ಹೇಳುತ್ತಾಳೆ. ಔರಂಗಜೇಬನೂ ರೋಶನಾರೆಯೂ ಕೂಡಿ ಆ ಘೋರತರವಾದ ಪಾತಕವನ್ನು ಮಾಡಿದರೆಂದು ನನ್ನ ಪ್ರಿಯನಾದ ಸುಲೇಮಾನ ಕುಮಾರನು ಹೇಳುತ್ತಾನೆ! ಔರಂಗಜೇಬ ದರಾಯರಲ್ಲಿ ಒಬ್ಬನು ವಜೀರನನ್ನು ಕೊಲ್ಲಿಸಿದವನೆಂಬ ಒಗ್ಗೆ ಸಂದೇಹವಿಲ್ಲ. ಇವರಿಬ್ಬರಿಗೂ ನಾನು ನನ್ನ ರಾಜ್ಯವನ್ನು ಕೊಡುವದಿಲ್ಲ. ಪ್ರತ್ಯಕ್ಷ ನನ್ನನ್ನೇ ಪಟ್ಟದಿಂದ ತಳ್ಳಿ ತಾವು ಸಿಂಹಾಸನಾಪನ್ನರಾಗಬೇಕೆಂದು ಹವಣಿಸಿ ನನ್ನೀ ಮಕ್ಕಳು ಕೊಲೆಯಂಥ ಪಾತಕಕ್ಕೆ ಹೇಸಲಿಲ್ಲ. ಅಪ್ಪನಿಗೆ ಅಪ್ಪನೆನ್ನದವರಾದ ಈ ಉನ್ಮತ್ತರು ನನ್ನ ಪಶ್ಚಾತ್ ಹಿಂದುಸ್ಥಾನದ ಪ್ರಜರ ಹಿತವನ್ನು ಹೇಗೆ ಬಗೆಯುವರು? ನಾನಿಷ್ಟು ಅಶಕ್ತನಾಗದಿದ್ದರೆ ಈ ರಾಜ್ಯದ ವ್ಯವಸ್ಥೆಯನ್ನು ಚನ್ನಾಗಿ ನಡೆಯಿಸಿ ನನ್ನ ಮರಿರಾದ ಸುಲ್ತಾನನಿಗೆ ರಾಜ್ಯವನ್ನು ಒಪ್ಪಿಸುತ್ತಿದ್ದೆನು. ಆದರೆ ಈ ಮಾತು ಉಪಾಯವಿಲ್ಲದ್ದಾಗಿದೆ. ಆದಿ ಪಿತೃಗಳಾದ ಹವ್ವಾ ಆದಮರು ನಿಷಿದ್ಧವಾದ ವೃಕ್ಷದ ಫಲವನ್ನು, ದೇವರು ಬೇಡೆಂದು ಹೇಳಿದರೂ, ಆಸ್ವಾದಿಸಿ ತಾವು ಮರಣಕ್ಕೆ ಗುರಿಯಾದದ್ದಲ್ಲದೆ ಸಮಗ್ರವಾದ ಮನುಷ್ಯಜಾತಿಗೇ ಅಲ್ಪಾಯುಷ್ಯವನ್ನು ತಂದಿಟ್ಟರು. ಅಮಮಾ! ಇಂಥ ಮಧ್ಯಾಹ್ನದಲ್ಲಿ ನನಗೆ ಇಷ್ಟು ಚಳಿಯೇ? ಯಾರಲ್ಲಿ? ಬೇಗಮ್ ಸಾಹೇಬ!"

ಬಾದಶಹನು ಕುಳಿತಿದ್ದ ಮಂದಿರಕ್ಕೆ ತಗಲಿದ್ದ ಮಂದಿರದಲ್ಲಿಯೇ ಕುಳಿತಿದ್ದ ಬೇಗಮ್ ಸಾಹೇಬಳು ಲಗುಬಗೆಯಿಂದ ತಂದೆಯ ಬಳಿಗೆ ಬಂದು "ಏನಾಜ್ಞೆ?" ಎಂದು ಕೇಳಿದಳು.

"ಬೇಗಮ್, ನನಗೊಂದು ಶಾಲು ತಂದು ಹೊದಿಸಬಾರದೆ? ಚಳಿಯಾಗುತ್ತದೆ."

ಬೇಗಮ್ಮಳು ಬೇಗನೆ ಹೋಗಿ ಅತ್ಯುತ್ತಮವಾದ ಶಾಲು ತಂದು

ತಂದೆಯ ಮೈಮೇಲೆ ಹಾಕಿ "ಅಪ್ಪಾ, ಚಳಿಯಾಗುತ್ತಿದೆಯೇ? ಮನಸ್ಸಿಗೂ ಸಂತಾಪವಾಗಿರುವಂತೆ ನಿಮ್ಮ ಮುಖದ ಮೇಲಿಂದ ಊಹಿಸಬಲ್ಲೆನು. ಸಂತಾಪದ ಕಾರಣವೇನೆಂದು ಕೇಳಲೆ?'' ಎಂದು ಬಹು ವಿನಯದಿಂದ ಬೆಸಗೊಂಡಳು.

"ಮತ್ತಿನ್ನಾವ ವಿಚಾರ ಬೇಗಮ್! ದಾರಾ ಔರಂಗಜೇಬರ ಮೇಲೆ ವಜೀರರನ್ನು ಕೊಂದ ಆರೋಪವಿರುವದಷ್ಟೆ? ಈ ದುಷ್ಕರ್ಮಕ್ಕಿನ್ನೇನು ಮಾಡಲಿ? ಈ ನನ್ನ ಸಿಂಹಾಸನಕ್ಕೆ ಅವರಿಬ್ಬರೂ ಅಯೋಗ್ಯರು."

"ಪ್ರಾಣಹಿಂಸಕನು ಸಿಂಹಾಸನಕ್ಕೆ ಅಯೋಗ್ಯನು ಸರಿ. ಆದರೆ ದಾರಾ ಔರಂಗಜೇಬರಿಬ್ಬರೂ ಕೂಡಿ ಆ ಪಾಪಕೃತ್ಯ ಮಾಡಲಿಲ್ಲ. ಅವರಲ್ಲಿ ಒಬ್ಬನು ಮಾತ್ರ ಮಾಡಿರಬಹುದು. ಒಬ್ಬನು ಸಹಜವಾಗಿ ನಿರ್ದೋಷಿಯೇ."

"ಯಾರು ನಿರ್ದೋಷಿಯೆಂದು ಹೇಳಲಿ ಬೇಗಮ್? ದಾರಾಯನೇ ದ್ರಾಕ್ಷದಲ್ಲಿ ವಿಷ ಹಾಕಿ ವಜೀರನಿಗೆ ಕೊಡಹೇಳಿದನೆಂದು ಆ ವಜೀರನ ಅಡಿಗೆಯವನು ಹೇಳುತ್ತಾನೆ. ಔರಂಗಜೇಬ ರೋಶನಾರೆಯರು ಅಂಥ ಘೋರತರವಾದ ಕರ್ಮವನ್ನು ಮಾಡಿದರೆಂಬ ಬಗ್ಗೆ ತನ್ನಲ್ಲಿ ಪ್ರಮಾಣಗಳುಂಟೆಂದು ನನ್ನ ಸುಲೇಮಾನನು ಹೇಳುತ್ತಾನೆ.''

"ಸುಲೇಮಾನನು ಹೇಳುವದೇ ನಿಜವಾದ ಸಂಗತಿಯೆಂದು ನನಗೆ ತೋರುತ್ತದೆ. ಅಯ್ಯೋ! ನಿಮಗೆ ಹೇಳುವದನ್ನೇ ಮರೆತೆನು!! ವಜೀರನ ಮಗಳಾದ ಶಹರ್‌ಜಾದೆಯನ್ನು ಕರೆಸೆಂದು ನೀವು ನನಗೆ ಆಜ್ಞಾಪಿಸಿದ್ದಿರಲ್ಲೆ? ಅವಳು ಬಂದಿರುವಳು. ಅವಳಿಗೇನು ಕೇಳುವದನ್ನು ಕೇಳಿರಿ."

"ಅಹುದು ಬೇಗಮ್. ಆ ಹುಡುಗಿಯನ್ನು ಹೀಗೆ ಕರೆದುಕೊಂಡು ಬಾ!"

ಬೇಗಮ್ಮಳು ಶಹರ್‌ಜಾದೆಯನ್ನು ಕರಕೊಂಡು ಬಂದಳು. ಬಾದಶಹನು ಅವಳ ಸೌಂದರ್ಯವನ್ನು ನೋಡಿ ಚಕಿತನಾಗಿ "ಬೇಗಮ್, ಈ ತರುಣಿಯು ನಮ್ಮ ನೂರ್‌ಜಾಹಾನ್ ಬಾದಶಾಹಿಣಿಯ ರೂಪದಷ್ಟೇ ರೂಪವತಿಯಾಗಿರುವಳು! ಮಗುವೆ ಶಹರ್‌ಜಾದೆ, ನಾಚಬೇಡ! ನಾನು

ನಿನ್ನ ಮುತ್ತಾತನಂತಿರುವೆನು.'' ಎಂದು ನುಡಿದು ನಕ್ಕನು.

ಬಳಿಕ ಶಹರ್‌ಜಾದೆಯು ಬೇಗಮ್ ಸಾಹೇಬಳ ಸೂಚನೆಯ ಮೇರೆಗೆ, ರೋಶನಾರೆಯೂ, ಹಕೀಮ ದಾವುದನೂ ಕೂಡಿ ವಜೀರರ ಪ್ರಾಣಹಿಂಸೆಗಾಗಿ ಮಾಡಿದ ಒಳಸಂಚಿನ ಸಂಗತಿಗಳನ್ನು ತನಗೆ ತಿಳಿದಷ್ಟರ ಮಟ್ಟಿಗೆ ಹೇಳಿ ರೋಶನಾರೆಯು ಹಣದ ಚೀಲವನ್ನೂ ವಿಷದ ಚೀಟನ್ನೂ ತೋರಿಸಿ, ಸರಬತ್ತಿನಲ್ಲಿ ವಿಷವು ಬೆರೆತಿರುವ ಸಂಗತಿಯನ್ನೂ ಹೇಳಿದಳು. ಬಾದಶಹನು ತುಸು ಹೊತ್ತು ಆಲೋಚಿಸಿ "ಶಹರ್‌ಜಾದೆ, ನೀನು ಹೇಳುವದು ಸತ್ಯವಾಗಿ ತೋರುತ್ತದೆ. ನಾನು ಇನ್ನೊಮ್ಮೆ ಸುಲೇಮಾನನೊಡನೆ ಆಲೋಚಿಸಿ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವೆನು." ಎಂದು ಹೇಳಿದನು.

"ನನ್ನ ತಾತರೆ, ವಜೀರರಿರುವಾಗಲೇ ಈ ತರುಣಿಯನ್ನು ನಮ್ಮ ಸುಲೇಮಾನ ಸುಲ್ತಾನನಿಗೆ ಕೊಡುವೆವೆಂದು ತಮಗೆ ಅರಿಕೆಮಾಡಿಕೊಂಡಿದ್ದಿಲ್ಲವೆ?'' ಎಂದು ಬೇಗಮ್‌ಳು ಕೇಳಿದಳು.

"ಅಹುದು ಬೇಗಮ್ಮ! ವಜೀರರಿರುವಾಗಲೇ ಈ ಕಾರ್ಯವನ್ನು ನಾವು ಮಾಡಲಿಲ್ಲ. ಅದೊಂದು ತಪ್ಪೇ ಆಯಿತು. ಇನ್ನಾದರೂ ಈ ಮಾತಿನ ಬಗ್ಗೆ ನಾನು ಆಲೋಚಿಸುವೆನು." ಎಂದು ನುಡಿದು ಬಾದಶಹನು ಶಹರ್‌ಜಾದೆಯನ್ನು ಕುರಿತು "ಹೇಗೆ ಶಹರ್‌ಜಾದೆ, ವರನು ನಿನ್ನ ಮನಸ್ಸಿಗೆ ಬಂದನೇನು?'' ಎಂದು ಕೇಳಿದನು.

ಶಹರ್‌ಜಾದೆಯು ಸಲಜ್ಜಸ್ಮಿತಳಾಗಿ ತಲೆಬಾಗಿಸಿಕೊಂಡು ನಿಂತು, ಬೇಗನೆ ತನ್ನ ಅವಗುಂಠನವನ್ನು (ಬುರಖೆಯನ್ನು) ಹೊದ್ದುಕೊಂಡಳು.

"ಹುಡುಗೀ, ಸವಿನಗೆಯೇ ನಿನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿತು. ನಿನ್ನ ಮರ್ಯಾದೆಶೀಲತೆಯು ನನ್ನಲ್ಲಿ ನಿನ್ನ ವಿಷಯವಾಗಿ ಆದರವನ್ನುಂಟುಮಾಡಿತು. ಹೋಗಿ ಬಾ! ಬೇಗನೆ ನೀನು ನಮ್ಮ ಸೊಸೆಯಾಗುವಿ. ಆಯಿತೆ?'' ಎಂದು ಹೇಳಿ ಶಹಾಜಹಾನನು ಶಹರ್‌ಜಾದೆಗೆ ಅಪ್ಪಣೆಯಿತ್ತನು.

ಶಹರ್‌ಜಾದೆಯನ್ನು ಮೇಣೆಯಲ್ಲಿ ಕುಳ್ಳಿರಿಸಿ ಕಳಿಸಿ ಬೇಗಮ್ಮಳು ಮತ್ತೆ ತಂದೆಯ ಬಳಿಗೆ ಬಂದು "ತಾತರೆ, ಇನ್ನಾದರೂ ದಾರಾಶಹನು

ನಿರ್ದೋಷಿಯೆಂದು ನಿಮಗೆ ತಿಳಿಯಿತಲ್ಲವೆ? ಸಿಂಹಾಸನಕ್ಕೆ ಅವನು ಅಯೋಗ್ಯನಾಗಿಲ್ಲವೆಂದು ನಾನು ನಂಬುತ್ತೇನೆ.'' ಎಂದು ನುಡಿದಳು.

" ಈಗಲೇ ಹೇಗೆ ಹೇಳಲಿ?'' ಎಂದು ಶಹಾಜಹಾನನು ವ್ಯಗ್ರನಾಗಿ ಕೇಳಿದನು.

" ನಿಮ್ಮ ಸಂಶಯದ ವೃತ್ತಿಯು ನಮ್ಮ ಮನೆತನವನ್ನು ಹಾಳು ಮಾಡಿ ಬಿಡುವದು. ಹೀಗೆ ನೀವು ಮೀನ ಮೇಷ ಮಾಡುತ್ತಿರುವದನ್ನು ಕಂಡೆಯೇ ಸುಜಾ, ಔರಂಗಜೇಬ, ಮುರಾದ ಮುಂತಾದವರು ಉತ್ತೇಜನವನ್ನು ತಾಳಿ ಸಿಂಹಾಸನಕ್ಕಾಗಿ ವ್ಯಾಜ್ಯಮಾಡಲಾರಂಭಿಸಿದ್ದಾರೆ. ಈ ಕಲಹಾಗ್ನಿಯು ಬರಬರುತ್ತ ಪ್ರದೀಪ್ತವಾಗಿ ಸಮಗ್ರವಾದ ಹಿಂದುಸ್ಥಾನವನ್ನು ಸುಟ್ಟು ಬೂದಿಯಾಗಿ ಮಾಡುವದು ಕಂಡಿರೋ?''

" ನಾನೇನು ಮಾಡಲಿ ನೀನೇ ಹೇಳು! ದಾರಾಶಹನು ಹಿರಿಯನಾದರೂ, ಅವನಲ್ಲಿ ಅನೇಕವಾದ ದುರ್ಗುಣಗಳಿವೆಯೆಂದು ಪ್ರತ್ಯಕ್ಷ ಶಾಇಸ್ತೇಖಾನರೂ ದಾನಿಶ್‌ಮಂದಖಾನರೂ ಸೂಚಿಸುತ್ತಿರುವರು. ಔರಂಗಜೇಬನು ಯೋಗ್ಯನಾಗಿ ಕಂಡರೂ ಅವನು ಹಿರಿಯನವನಲ್ಲ.''

" ಔರಂಗಜೇಬನಲ್ಲಿ ಏನು ಕಂಡಿರುವಿರೆಂದು ಅವನು ಯೋಗ್ಯನೆಂದು ಹೇಳುವಿರಿ? ನಿಮ್ಮ ವಜೀರರನ್ನು ಕೊಲ್ಲಿಸಿದವನೇ ಅವನು!''

" ಹಾಗೇಕೆ ಬೇಗಮ್? ಸಾದುಲ್ಲಾಖಾನನು ಸತ್ತ ದಿವಸ ಔರಂಗಜೇಬನು ಆಗ್ರಾ ಪಟ್ಟಣದಲ್ಲಿಯೇ ಇರಲಿಲ್ಲ." ಎಂದು ಶಹಾಜಹಾನನು ಉತ್ತರವನ್ನಿತ್ತನು.

" ಅನ್ಯರಿಗೆ ವಜೀರರನ್ನು ಕೊಲ್ಲ ಹೇಳಿ ತಾನು ಬೇಕಾಗಿ ಊರು ಬಿಟ್ಟು ಹೊರಗೆ ಹೋದ ಕಪಟಿಯು ನಿರ್ದೋಷಿಯೇ? ಸಾದುಲ್ಲಾಖಾನನು ದರಾಯುಸನ ಪಕ್ಷವನ್ನು ವಹಿಸತಕ್ಕವನೆಂದು ತಿಳಿದು ಕ್ರೂರನಾದ ಔರಂಗಜೇಬನು ಆ ವಜೀರರನ್ನು ಕೊಲ್ಲಿಸಿದನಲ್ಲವೆ?''

ಈ ಮಾತು ಕೇಳಿ ಶಹಾಜಹಾನನು ಕಿಂಚಿತ್ ಚಕಿತನಾಗಿ ಕೆಳಮೋರೆ ಮಾಡಿ " ಅದಿರಲಿ ಬೇಗಮ್, ಔರಂಗಜೇಬನಂಥ ಶೂರನು ಈ ಹಿಂದುಸ್ಥಾನದಲ್ಲಿ ಯಾರಿರುವರು ಹೇಳು!'' ಎಂದು ಕೇಳಿ ಮಗಳ ಮುಖವನ್ನು ನೋಡಿದನು.

"ಔರಂಗಜೇಬನು ಶೂರನಾದರೆ ನನ್ನ ಅಣ್ಣನಾದ ದಾರಾ ಸುಲ್ತಾನನು ಔರಂಗಜೇಬನಿಗೆ ಇಮ್ಮಡಿಯಾದ ವೀರನು."

"ಔರಂಗಜೇಬನು ಸತ್ಯಧರ್ಮದಲ್ಲಿ ನಿಜವಾದ ನಿಷ್ಠೆಯುಳ್ಳವನು."

"ಅವನ ನಿಷ್ಠೆಗೆ ಬೆಂಕೀ ಹಾಕಲಿ! ಪಿತ್ರಾಜ್ಞೆ ಮೀರುವದನ್ನೂ, ಕೊಲೆ ಮಾಡುವದನ್ನೂ, ಕಪಟಾಚರಣವನ್ನೂ ನಿಮ್ಮ ಔರಂಗಜೇಬನು ಕುರಾಣದಿಂದಲೇ ಕಲಿತುಕೊಂಡನೆನ್ನಬೇಕು!"

"ಹೋಗಲಿ ಬಿಡು ಬೇಗಮ್! ಈಗೀಗ ಔರಂಗಜೇಬನು ದಕ್ಷಿಣದ ಸುಭೇದಾರಿಯು ಕೆಲಸವನ್ನು ಒಳ್ಳೇ ಜಾಣ್ಮೆಯಿಂದಲೂ ಜನರು ಮೆಚ್ಚುವಂತೆಯೂ ಮಾಡುತ್ತಿರುವನೆಂದು ನಿತ್ಯದಲ್ಲಿಯೂ ನಮಗೆ ವರ್ತಮಾನಗಳು ಬರುತ್ತಲಿವೆ."

"ಅಪ್ಪಾ, ಅರಿತೂ ಅರಿಯದವರಂತೆ ಮಾತನಾಡಿದರೆ ನಾನೇನು ಹೇಳಲಿ? ಔರಂಗಜೇಬನಿಗೆ ಕಂದಾಯದ ವ್ಯವಸ್ಥೆಯನ್ನು ಕಡೆಯ ವರೆಗೂ ಮಾಡಲಿಕ್ಕೆ ಬರಲಿಲ್ಲ. ಮುರ್ಶಿದಾ ಕುಲೀಖಾನರು ಒಳ್ಳೇ ಪರಿಶ್ರಮ ಮಾಡಿ ದಕ್ಷಿಣದಲ್ಲಿ ಕಂದಾಯದ ಪದ್ಧತಿಯನ್ನು ವ್ಯವಸ್ಥಿತವಾಗಿ ಮಾಡಿ ಕೊಟ್ಟ ಬಳಿಕ ಆ ನಿಮ್ಮ ಸುಪುತ್ರನು ಆ ಪ್ರಾಂತದ ಜಮೇದಾರರನ್ನು ದೂಡಿ ಹಾಕಿ ಅವರ ಸ್ಥಳದಲ್ಲಿ ತನಗೆ ಬೇಕಾದವರನ್ನು ಇರಿಸಿಕೊಂಡಿರುವ ವರ್ತಮಾನವನ್ನು ನೀವು ಕೇಳಿಲ್ಲವೆ? ನಿಮ್ಮ ಮಗನು ಶೂರನಂತೆ! ತೋಫಖಾನೆಯನ್ನು ಹೇಗಿಡಬೇಕೆಂಬದು ಅವನಿಗೆ ತಿಳಿಯಲಿಲ್ಲಾದ್ದರಿಂದ ಇಲ್ಲಿಂದ ಮೀರಖಾಲಿಲ್ ಸಾಹೇಬರು ಹೋಗಿ ಸೈನ್ಯದ ಎಲ್ಲ ವ್ಯವಸ್ಥೆಯನ್ನು ಸುಸೂತ್ರವಾಗಿ ಮಾಡಿ ಕೊಟ್ಟ ಬಂದ ಬಳಿಕ ಗುಣಮಣಿಯಾದ ಆ ನಿಮ್ಮ ಚಿರಂಜೀವನು ಸೈನ್ಯದಲ್ಲೆಲ್ಲ ತನ್ನ ಪಕ್ಷದವರಾದವರನ್ನು ತುಂಬಿ ಭದ್ರವಾಗಿ ಕುಳಿತುಕೊಂಡಿದ್ದಾನೆ."

"ಆಗಲಿ ಬೇಗಮ್, ನಿನ್ನಿಷ್ಟೆಯಂತೆಯೇ ಆಗಲಿ. ತೀರಿತೋ ಇಲ್ಲವೋ?"

"ಹತ್ತಾವರ್ತಿ ಹೀಗೆ ಇದೇ ಮಾತಾಡಿ ಅದನ್ನು ಹತ್ತಾವರ್ತಿ ಮುರಿದಿರುವಿರಿ. ನಿಮ್ಮ ಹಿತವನ್ನು ನೀವು ನೋಡಿಕೊಳ್ಳಿರಿ! ನಾನೇನು ಹೇಳಲಿ. ನಿಮ್ಮ ಸಂಶಯದ ವೃತ್ತಿಯಿಂದಲೇ ನೀವು ನಿಮ್ಮ ಮಕ್ಕಳು

ಮೊಮ್ಮಕ್ಕಳು ಕೇಡಿಗೀಡಾದದ್ದನ್ನು ನೋಡಿ ಒಂದು ದಿನ ದುಃಖಿಸಿ ದುಃಖಿಸಿ ಸತ್ತುಹೋಗುವಿರಿ ನಿಷ್ಠುರ ಮಾತಾಡಿದ್ದಕ್ಕೆ ಸಿಟ್ಟಾಗಬೇಡಿರಿ."

"ಇನ್ನು ಮೇಲೆ ನಿಶ್ಚಯವಾಗಿ ನಾನು ದಾರಾಶಹನೇ ಈ ಸಿಂಹಾಸನಾಧಿಪತಿಯಾಗತಕ್ಕವನೆಂದು ಜನರಲ್ಲಿ ಸಾರಿ ಹೇಳುವೆನು." ಎಂದು ಬಾದಶಹನು ವ್ಯಸನಾಕುಲನಾಗಿ ನುಡಿದನು.

"ದೈವದಲ್ಲಿ ಇದ್ದಂತಾಗುವದು!" ಎಂದು ನುಡಿದು ಬೇಗಮ್ಮಳು ಹೊರಟು ಹೋದಳು.

## ೧೬

## ದೈವವೇ ಕೈಗೊಟ್ಟಿತು

ಔರಂಗಜೇಬನು ದಕ್ಷಿಣದ ಸುಭೇದಾರನಾಗಿ ದೌಲತಾಬಾದಿಗೆ ಬಂದು ಅಲ್ಲಿಯ ಕಾರಭಾರವನ್ನು ಕೈಕೊಂಡನು. ದಕ್ಷಿಣದಲ್ಲಿಯ ಸೈನ್ಯಾಧಿಕಾರಿಗಳನ್ನೂ, ಬಲವಂತರಾದ ಪಾಳ್ಯಗಾರರನ್ನೂ ಅವನು ಬಹು ಪರಿಯಾಗಿ ಅನುನಯಿಸಿ ಅವರನ್ನು ತನ್ನ ಇಚ್ಛಾನುವರ್ತಿಗಳಾಗಿರುವಂತೆ ಮಾಡಿಡಲಾರಂಭಿಸಿದನು. ಯುಕ್ತಿಪ್ರಯುಕ್ತಿಗಳಿಂದ ಅವನು ಹಣವನ್ನು ಕೂಡಿಸುವ ಕ್ರಮವನ್ನಾದರೂ ಇಟ್ಟುಕೊಂಡಿದ್ದನು. ಆದರೆ ವ್ಯಾಪಾರಕ್ಕೆ ಅನುಕೂಲವಾಗಿರುವ ಬಂಗಾಲ ಗುಜರಾಥ ಮುಂತಾದ ಪ್ರಾಂತಗಳಂತೆ ದಕ್ಷಿಣದ ಸಾಂಪತ್ತಿಕ ಸ್ಥಿತಿಯು ಚನ್ನಾಗಿರಲಿಲ್ಲವಾದ್ದರಿಂದ, ಔರಂಗಜೇಬನು ಯೋಚಿಸಿರುವ ಮಹದುದ್ಯೋಗಕ್ಕೆ ಬೇಕಾದಷ್ಟು ಹಣದ ಸಂಚಯವಾಗುವದು ಅಸಂಭವವಾಗಿತ್ತು. ದಿಲ್ಲಿಯ ಸಾಮ್ರಾಜ್ಯದ ಮಹಾ ಸಿಂಹಾಸನವನ್ನಾಕ್ರಮಿಸಬೇಕಾದರೆ ಪ್ರತಿಸ್ಪರ್ಧಿಯಾದ ಯುವರಾಜ ದಾರಾ ಸುಲ್ತಾನನೊಡನೆ ಘನಘೋರವಾದ ಸಂಗ್ರಾಮವನ್ನು ಕೈಕೊಳ್ಳದೆ ಅವನಿಗೆ ಮತ್ತೊಂದು ಮಾರ್ಗವಿದ್ದಿಲ್ಲ. ಆದರೆ ದಾರಾನೆಂದರೆ ಆ ಸಮಯದಲ್ಲಿ ಪ್ರತಿ ಬಾದಶಹನೇ. ಭರತಖಂಡದ ಯಾವತ್ತೂ ಭಾಂಡಾರವು ಅವನ ಸ್ವಾಧೀನದಲ್ಲಿ! ರಾಜ್ಯದ ಮುಖ್ಯ ಮುಖ್ಯ ಸೇನಾ

ಪತಿಗಳಾದವರು ಸಾರ್ವಭೌಮನ ಜ್ಯೇಷ್ಠ ಪುತ್ರನಾದ ದಾರಾ ಸುಲ್ತಾನನ ಸಿಂಹಾಸನಾಧಿಕಾರಕ್ಕೆ ಪ್ರತಿಕೂಲರಾದವರಲ್ಲ !

ಶಹಾಜಹಾನ ಬಾದಶಹನು ಮತ್ತೆ ಅಸಾಧ್ಯವಾದ ಬೇನೆಯಿಂದ ಮಲಗಿಕೊಂಡಿರಲು ದಾರಾಶಹನು ಸಕಲವಾದ ಅಧಿಕಾರಗಳನ್ನು ತಾನೇ ತನ್ನ ಕೈಯಲ್ಲಿ ತೆಗೆದುಕೊಂಡು ರಾಜ್ಯವನ್ನಾಳುತ್ತಿದ್ದನು. ಬುದ್ಧಿವಂತನಾದ ಆ ಯುವರಾಜನು ನೀತಿಯಿಂದಲೂ ನಿಷ್ಪಕ್ಷಪಾತವಾಗಿಯೂ ತಕ್ಕಮಟ್ಟಿಗೆ ಚಾತುರ್ಯದಿಂದಲೂ ರಾಜ್ಯಸೂತ್ರಗಳನ್ನು ನಡಿಸುತ್ತಿರುವದನ್ನು ಕಂಡು ಮಧ್ಯಸ್ಥರಾದ ಸರದಾರರು ದಾರಾ ಸುಲ್ತಾನನೇ ಬಾದಶಹನಾದರೆ ಒಳ್ಳೇದೆಂದು ಭಾವಿಸಲಾರಂಭಿಸಿದರು. ರೋಶನಾರೆ ಶಾಯಿಸ್ತೇಖಾನರು ಔರಂಗಜೇಬನ ಪಕ್ಷಕ್ಕೆ ಕೆಲಜನ ಅಧಿಕಾರಿಗಳನ್ನು ಸೇರಿಸಿಕೊಂಡಿದ್ದರೂ ರಾಜಾ ಜಸವಂತಸಿಂಗ ನವಾಬ ಕಾಸಮ್‌ಖಾನ ಜವಿನಿ, ರುಸ್ತುಮ್‌ಖಾನ ದಖನಿ ಮುಂತಾದಿ ಮಹಾನ್ ಮಹಾನ್ ಪ್ರಭೃತಿಗಳು ಕೇವಲವಾದ ರಾಜನಿಷ್ಠರಾದ್ದರಿಂದ ಅವರು ದಾರಾನ ವಿರುದ್ಧವಾಗಿ ಸರ್ವಥಾ ನಡೆಯುತಕ್ಕವರಲ್ಲ. ಸಾದುಲ್ಲಾಖಾನನ ಮರಣದ ವಾರ್ತೆಯನ್ನು ಕೇಳಿ ಔರಂಗಜೇಬನಿಗೆ ಹಾಲುಸಕ್ಕರೆ ಕುಡಿದಂತಾಗಿದ್ದರೂ ಆ ವಜೀರನ ಮರಣದಿಂದ ದಾರಾನ ಪಕ್ಷಕ್ಕೆ ಅಪ್ರತ್ಯಕ್ಷವಾದ ಹಾನಿಯಾಯಿತೇ ಹೊರತಾಗಿ ಔರಂಗಜೇಬನ ಪಕ್ಷಕ್ಕೆ ಪ್ರತ್ಯಕ್ಷವಾದ ಲಾಭವೇನೂ ಆದಂತೆ ಕಾಣಲಿಲ್ಲ. ಸಾದುಲ್ಲಾಖಾನನ ಸ್ವಂತ ಸೈನ್ಯದ ಅಧಿಕಾರಿಗಳು, ಔರಂಗಜೇಬನು ಎಣಿಸಿದಂತೆ, ಅವನ ಪಕ್ಷಕ್ಕೆ ಸೇರಲಿಲ್ಲ.

ರೋಶನಾರಾ ಹಿರಾಸುಲ್ತಾನೆಯರ ಪತ್ರಗಳು ಔರಂಗಜೇಬನಿಗೆ ಆಗಿಂದಾಗ್ಗೆ ಬರುತ್ತಿದ್ದವು. ಅವರ ಮುಖಾಂತರವಾಗಿ ರಾಜಧಾನಿಯಲ್ಲಿಯ ಅಂತರಂಗ ಬಹಿರಂಗವಾದ ಅನೇಕವಾದ ಸಂಗತಿಗಳು ಅವನಿಗೆ ತಿಳಿಯುತ್ತಿದ್ದರೂ ತನ್ನ ಸ್ವಾರ್ಥಸಾಧಕವಾದ ಜಾಲವು ಚನ್ನಾಗಿ ಹಬ್ಬಿಕೊಂಡಿರಲಿಲ್ಲವೆಂಬ ಮನವರಿಕೆಯಾಗಿ ಅವನು ಚಿಂತಾಕುಲನಾಗಿದ್ದನು. ದಾರಾಸುಲ್ತಾನನ ವಿರುದ್ಧವಾಗಿ ಮತ್ತೆ ರೋಶನಾರೆಯು ಬಾದಶಹನ ಮನಸ್ಸನ್ನು ಕಲುಷಿತವಾಗಿ ಮಾಡಲು ಪ್ರಯತ್ನ ಮಾಡು-

ವಳೆಂದರೆ ಅವಳ ಕೈ ಸಾಗದಂತಾಗಿತ್ತು. ರುಗ್ಣನಾಗಿ ಮಲಗಿರುವ ಬಾದ ಶಹನ ಸಮೀಪಕ್ಕೆ ಹೋಗುವೆನೆಂದರೆ ದಾರಾಶಹನು ಯಾರಿಗೂ ಅಪ್ಪಣೆ ಕೊಡಲೊಲ್ಲನು. ಶಹಾಜಹಾನನ ಪ್ರೀತಿಯ ಮಗಳೂ ದಾರಾನ ಹಿತೈಕ ನಿಷ್ಠಳೂ ಆದ ಬೇಗಮ್ ಸಾಹೇಬಳು, ಆಸನ್ನಮರಣನಂತಾಗಿ ಮಲಗಿದ ತಂದೆಯ ತಲೆದಿಂಬಿಗೆ ಹೊಂದಿಕೊಂಡು ಅಖಂಡವಾಗಿ ಕುಳಿತಿರುವಳು. ಇದೇ ಸಂಗತಿಯನ್ನು ಕುರಿತು ರೋಶನಾರೆಯು ತನಗೆ ಬರೆದಿರುವ ಪತ್ರ ವನ್ನು ಓದಿ ಔರಂಗಜೇನು ಚಿಂತಾಕುಲನಾಗಿ ಮನಸ್ಸಿನಲ್ಲಿಯೇ ಆಲೋ ಚಿಸುತ್ತ ತನ್ನ ವಿಶ್ರಾಮಮಂದಿರದಲ್ಲಿಯ ಶಯ್ಯೆಯಲ್ಲಿ ಮಲಗಿಕೊಂಡಿ ದ್ದನು "ನಾನು ಆಗ್ರಾಪಟ್ಟಣವನ್ನು ಬಿಟ್ಟು ಬಂದದ್ದೇ ಹೆಡ್ಡತನ ವಾಯಿತು! ವಜೀರ ಸಾದುಲ್ಲಾಖಾನನು ಕುತ್ತಿಗೆ ಹಿಡಿದು ನನ್ನನ್ನು ಇತ್ತ ನೂಕಿದನು. ಅವನಿಗೆ ತಕ್ಕ ಪ್ರಾಯಶ್ಚಿತ್ತವಾಯಿತು ಸರಿ! ಆದರೂ ಸಾಯುಸಾಯುವಾಗ ಆ ಕಪಟಿಯು ನನ್ನ ಕುತ್ತಿಗೆ ಅಡ್ಡಾಗಿ ನಿಂತನು. ಹೊರಟೆದ್ದು ಆಗ್ರಾಪಟ್ಟಣಕ್ಕಾದರೂ ಹೋಗಲಿಯಾ? ಹೋದರೆ ದಂಡೆತ್ತಿಕೊಂಡೇ ಹೋಗಬೇಕು. ಇಲ್ಲದಿದ್ದರೆ ದಾರಾಶಹನು ನನ್ನನ್ನು ಅಲ್ಲಿಯೇ ಹುಗಿದುಬಿಟ್ಟಾನು! ಏನು ಮಾಡಲಿ ದೈವವೆ!" ಎಂದು ವಿಚಾರಿಸುತ್ತ ಔರಂಗಜೇಬನು ನಿಟ್ಟುಸುರು ಬಿಟ್ಟನು.

ದೈವಕ್ಕೆ ದೂರಿಕೊಂಡ ಮಾತ್ರದಿಂದಲೋ ಏನೋ ಎಂಬಂತೆ ತತ್‌ಕ್ಷಣವೇ ಅದೇ ದೈವವು ಒಂದು ರೂಪದಿಂದ ಪ್ರತ್ಯಕ್ಷವಾಗಿ ಬಂದು ಅವನಿಗೆ ಕೈಜೋಡಿಸಿಕೊಂಡು ನಿಂತಿತು. ಯಾವನೋ ಒಬ್ಬ ಸರದಾರನು ಔರಂಗಜೇಬನ ಸನ್ನಿಧಾನಕ್ಕೆ ಬಂದು ಬಹು ವಿನೀತನಾಗಿ ಪ್ರಣಾಮ ಮಾಡಿ ಅವನ ಪಾದಪೀಠದ ಬಳಿಯಲ್ಲಿ ಅನರ್ಘ್ಯವಾದ ಕಾಣಿಕೆಗಳಿಂದ ತುಂಬಿದ ತಬಕವನ್ನೂ ಜರತಾರಿಯ ಚೀಲದಲ್ಲಿದ್ದ ಒಂದು ಪತ್ರವನ್ನೂ ಇರಿಸಿದನು. ಸುಲ್ತಾನನು ಆ ಪತ್ರವನ್ನೋದಿ ಪರಮ ಸಂತುಷ್ಟನಾಗಿ ಮುಗುಳುನಗೆ ನಕ್ಕು "ಸರದಾರ ಸಾಹೇಬರೆ, ವಜೀರ ಮೀರಜುಮ್ಲಾ ಸಾಹೇಬರವರು ಆರಾಮವಾಗಿರುವರಷ್ಟೆ?" ಎಂದು ಪ್ರಶ್ನಮಾಡಿ ಉಪ ಹಾರ ಹುಕ್ಕಾ (ಹೊಗೆಸೊಪ್ಪು ಸೇದುವ ನಳಿಕೆ) ಗಳನ್ನು ಕೊಟ್ಟು ಆ ಸರದಾರನನ್ನು ಬಹು ಪರಿಯಾಗಿ ಸಂಭಾವಿಸಿದನು. ಸಾಧಾರಣನಾದ

ಓರ್ವ ಸರದಾರನಿಗೆ ಔರಂಗಜೇಬನಂಥ ಚಕ್ರವರ್ತಿ ಸಂಭವನು ಇಂತಿಷ್ಟು ಆದರವನ್ನು ತೋರಿಸಲು, ಆ ಪತ್ರದಲ್ಲಿರುವ ಸಂತೋಷಜನಕವಾದ ಸಂಗತಿಯಾದರೂ ಯಾವದು ಎಂದು ವಾಚಕರು ಬಹು ಕುತೂಹಲ ಯುತರಾಗಿ ನಮ್ಮನ್ನು ಕೇಳಬಹುದು. ಪತ್ರವೇ ನಮ್ಮ ಬಳಿಯಲ್ಲಿರಲು ಬಾಯಿಮಾತಿನಿಂದೇಕೆ ಹೇಳೋಣ? ವಾಚಕರೆ, ನೀವೇ ಈ ಪತ್ರ ವನ್ನು ಓದಿಕೊಳ್ಳಿರಿ; ಆ ಪತ್ರವೆಂದರೆ ದೊಡ್ಡದೊಂದು ಗ್ರಂಥವೇ ಆಗಿರುವದು.

"ಹುಜೂರ್ (ಪ್ರಭುಗಳೆ), ನಾನು ಗೋವಳಕೊಂಡದ ಅಬ್ದುಲ್ಲಾ ಕುತುಬಶಹನಿಗೆ ಮಿಗಿಲಾದ ಸಹಾಯವನ್ನು ಮಾಡಿ ಅವನ ರಾಜ್ಯವನ್ನು ಸ್ಥಿರಗೊಳಿಸಿ ಹಬ್ಬಿಸಿದ ಸಂಗತಿಯು ತಮ್ಮ ಚರಣಗಳಿಗೂ ಸಕಲ ಲೋಕಕ್ಕೂ ವಿದಿತವಾಗಿರುವದಷ್ಟೆ? ಕಲ್ಯಾಣಕರ್ತನಾದ ನನಗೆ ಆ ಸುಲ್ತಾನನು ಸಂಪೂರ್ಣವಾಗಿ ಕೃತಜ್ಞನಾಗಬೇಕಲ್ಲವೆ? ಆದರೆ ಕೃತಘ್ನನಾದ ಅಬ್ದುಲ್ಲಾನು ದ್ರೋಹ ಮಾಡಿ ನನ್ನನ್ನೂ ನನ್ನ ಕುಟುಂಬದವರನ್ನೂ ವಿಪತ್ತಿನಲ್ಲಿ ನೂಕಿ ಘಾತವನ್ನು ಮಾಡುವ ಯತ್ನದಲ್ಲಿರುವನು. ರಾಜಕಾರಣಕ್ಕಾಗಿ ನಾನು ಗೋವಳಕೊಂಡದಿಂದ ಕರ್ನಾಟಕದಲ್ಲಿ ಒಂದಿರುವ ಸಂಧಿಯನ್ನು ಸಾಧಿಸಿ ಅಬ್ದುಲ್ಲಾಶಹನು, ರಾಜಧಾನಿಗೆ ಬರಲು ನನಗೆ ಪ್ರತಿಬಂಧ ಮಾಡಿದ್ದಾನೆ. ಗೋವಳಕೊಂಡವನ್ನು ಬಿಟ್ಟು ಹೊರಗೆ ಹೋಗಲು ನನ್ನ ಮಗನಿಗೂ ಕುಟುಂಬದವರಿಗೂ ಅಪ್ಪಣೆಯಿಲ್ಲ. ನನ್ನ ಪ್ರಾಣಕ್ಕೂ ಮಾನಕ್ಕೂ ಕೂಡಿಯೇ ಹಾನಿ ಬಂದೊದಗಿದಂತೆ ನಿಶ್ಚಯವಾಗಿ ತೋರುತ್ತದೆ. ನಾನು ನಿರಪರಾಧಿಯಾಗಿದ್ದರೂ ನೀಚನಾದ ಆ ಸುಲ್ತಾನನು ಬೀಭತ್ಸವಾದ ದ್ದೊಂದು ಆರೋಪವನ್ನು ನನ್ನ ಮೇಲೆ ಹೊರಿಸಿದ್ದಾನೆ. ದಿಲ್ಲೀಶ್ವರರ ಚಿರಂಜೀವರಾದ ತಾವು ಉದಾರರೂ, ಕೈಕೊಂಡ ಕಾರ್ಯವನ್ನು ಪಂಥ ದಿಂದ ನಿರ್ವಹಿಸುವವರೂ ಎಂದು ನಂಬಿ ನಾನು ಶರಣಾಗತನಾಗಿರು ತ್ತೇನೆ. ದಾಸನನ್ನು ಕಾಪಾಡಬೇಕು; ಶರಣಾಗತನಾದ ನಾನು ದಿಲ್ಲಿಯ ಸಿಂಹಾಸನಕ್ಕೆ ಯಥಾಶಕ್ತಿಯಾಗಿ ಒಂದು ಅಲ್ಪಸೇವೆಯನ್ನು ಮಾಡಿಯೇ ಔರಂಗಜೇಬ ಸುಲ್ತಾನರ ಕೃಪಾಪಾತ್ರನಾಗಬೇಕೆಂದು ಆಲೋಚಿಸಿರು ತ್ತೇನೆ ಚಿತ್ತೈಸಬೇಕು.

ಗೋವಳಕೊಂಡದ ಅನೀತಮಯವಾದ ರಾಜ್ಯವನ್ನು ಮುರಿದು ಹಾಕಿ ಅದನ್ನು ದಿಲ್ಲಿಯ ಸಾಮ್ರಾಜ್ಯಕ್ಕೆ ಸೇರಿಸಬೇಕೆಂಬ ಉದಾರವಾದ ಹೇತುವು ತಮ್ಮ ದಿವ್ಯಚಿತ್ತದಲ್ಲಿ ವಾಸಮಾಡಿಕೊಂಡಿರುವ ವರ್ತಮಾನವು ಈ ದಾಸನಿಗೆ ಕರ್ಣಪರಂಪರವಾಗಿ ತಿಳಿದಿದೆ. ನಾನಿಲ್ಲಿ ನಿವೇದಿಸಿದ ಸೂಚನೆಗಳನ್ನು ಸುಲ್ತಾನರವರು ಪರಾಮರ್ಶಿಸಿದರೆ ಕಾರ್ಯವು ನಿಷ್ಕಂಟಕವಾಗಿಯೂ ಸುಸಾಧ್ಯವಾಗಿಯೂ ನೆರವೇರುವದೆಂದು ನಂಬುತ್ತೇನೆ. ಸುಲ್ತಾನರವರು ವಿಲಂಬ ಮಾಡದೆ ನಾಲ್ಕೈದು ಸಾವಿರ ಜನ ಗಟ್ಟಿಗರಾದ ರಾವುತರನ್ನು ಕಟ್ಟಿಕೊಂಡು ಮಾರ್ಗಕ್ರಮಣದ ಶ್ರಮಗಳನ್ನು ಲೆಕ್ಕಿಸದೆ ಜಾಗ್ರತೆಯಾಗಿ ಗೋವಳಕೊಂಡದ ಮೇಲೆ ಸಾಗಿ ಹೋಗಬೇಕು. ಪಯಣದ ಮೇಲೆ ಪಯಣ ಮಾಡಿ ತೀವ್ರವಾಗಿ ನಡೆದು ಹೋದರೆ ದೌಲತಾಬಾದದಿಂದ ಗೋವಳಕೊಂಡವು ಹದಿನೈದೇ ದಿವಸಗಳ ಹಾದಿಯು. ಹೀಗೆ ಸಾಗಿ ನಡೆದಿರುವ ಸುಲ್ತಾನರವರ ಪರಿವಾರವು ಯಾರದು, ಎಲ್ಲಿಗೆ ಪ್ರಯಾಣ ಮಾಡುತ್ತಲಿದೆ? ಎಂದು ಮಾರ್ಗದಲ್ಲಿ ಯಾರಾದರೂ ಜಿಕಿತ್ಸಕರು ಪ್ರಶ್ನ ಮಾಡಿದ್ದಾದರೆ 'ಶಹಾಜಹಾನ್ ಬಾದಶಹರ ನಿಯೋಗಿಗಳಾದ ಸರದಾರರೋರ್ವರು ಕೆಲವೊಂದು ಮಹತ್ವದ ರಾಜಕಾರಣಕ್ಕಾಗಿ ಗೋವಳಕೊಂಡದ ಕುತುಬಶಹರೊಡನೆ ಮಾತುಕಥೆ ನಡಿಸಲಿಕ್ಕೆ ಪರಿವಾರದೊಂದಿಗೆ ಹೊರಟಿದ್ದಾರೆ' ಎಂಬ ಸುದ್ದಿಯನ್ನೇ ಹೇಳತಕ್ಕದ್ದು; ಹೊರತಾಗಿ ಔರಂಗಜೇಬ ಸುಲ್ತಾನರು ಬಿಜಯಮಾಡಿರುವರೆಂಬ ವಾರ್ತೆ ಕೂಡ ಯಾರಿಗೂ ಸಿಕ್ಕದಂತೆ ವ್ಯವಸ್ಥೆಯಿದ್ದರೆ, ಉಗುರಿಲೆ ಹೋಗುವದಕ್ಕೆ ಕೊಡಲಿಯನ್ನು ಹಿಡಿಯಬೇಕಾಗಲಿಕ್ಕಿಲ್ಲ.

*"ಭಾಗಾನಗರದಲ್ಲಿಯ ಡಬೀರನು.,(ಪರರಾಯರ ನಿಯೋಗಿ

---

* ಭಾಗಾನಗರ:— ಗೋವಳಕೊಂಡದ ಪೂರ್ವದ ಸುಲ್ತಾನನಾದ ಮಹಮದ ಕುಲಿ ಕುತುಬಶಹನೆಂಬವನೋರ್ವನು ತನ್ನ ರಾಜಧಾನಿಯಿಂದ ಏಳು ಮೈಲಿನ ಅಂತರದ ಮೇಲೆ ಜಲಸಮೃದ್ಧಿಯುಳ್ಳದ್ದೂ ಆರೋಗ್ಯಮಯವಾದದ್ದೂ ಆಗಿರುವದೊಂದು ಸ್ಥಾನದಲ್ಲಿ ಹೊಸದೊಂದು ನಗರಿಯನ್ನು ಕಟ್ಟಿ ಅದಕ್ಕೆ, ತನ್ನ ಪ್ರಿಯತಮೆಯಾದ ಭಾಗಮತಿಯೆಂಬ ಭೋಗಿನಿಯ ಹೆಸರಿನ ಮೇಲಿಂದ "ಭಾಗಾನಗರಿ" ಎಂಬ ಹೆಸರನ್ನಿಟ್ಟನು. ಈ ವಿಲಾಸಪುರಿಯು ಗೋವಳಕೊಂಡದ ಭದ್ರವಾದ

ಗಳಿಗೆ ಸ್ವಾಗತವನ್ನು ನೀಡಿ ಅವರಿಗೆ ರಾಜದರ್ಶನವನ್ನು ಮಾಡಿಸುವ ಅಧಿಕಾರಿಯು) ಕೇವಲವಾಗಿ ನನ್ನ ವಿಶ್ವಾಸಪಾತ್ರನು, ನನ್ನ ಸಮೀಪದ ಆಪ್ತನು, ನನ್ನಿಂದಲೇ ಮುಂದಾದವನು. ತಾವೂ ತಮ್ಮ ರಾವುತರೂ ಭಾಗಾನಗರದ ಮುಂದೆ ಹೋಗಿ ನಿಂದಿರುವದೊಂದೇ ತಡ, ಆ ಡಬೀರನೂ, ಬೇರೆ ದೊಡ್ಡ ದೊಡ್ಡ ಅಧಿಕಾರಿಗಳೂ ದಿಲ್ಲಿಯ ನಿಯೋಗಿಯ ಸ್ವಾಗತಕ್ಕಾಗಿ ಸಿದ್ಧರಾಗಿ ನಿಂತೇ ಇರುವರು. ತಿಲಮಾತ್ರವಾದರೂ ಸಂಶಯಕ್ಕೆ ಆಸ್ಪದವಾಗದೆ ತಾವು ಭಾಗಾನಗರಲ್ಲಿ ಸುಖರೂಪವಾಗಿ ಸೇರುವಿರಿ.

ಬಳಿಕ ಡಬೀರನು ತಮ್ಮನ್ನೂ ಕೆಲಜನ ಪರಿವಾರದವರನ್ನೂ ರಾಜ ದರ್ಶನಕ್ಕಾಗಿ ಕುತುಬಶಹನ ತೋಟದಲ್ಲಿರುವ ವಿಶ್ರಾಮಮಂದಿರಕ್ಕೆ ಕರೆದೊಯ್ಯುವನು. ಶಿಷ್ಟಾಚಾರದ ಮೇರೆಗೆ ಅಬ್ದುಲ್ಲಾಶಹನು ಬಾದ ಶಹರ ಆಜ್ಞಾಪ್ರದವಾದ ಸಂದೇಶಪತ್ರವನ್ನು ನಿಯೋಗಿಗಳಾಗಿ ತಮ್ಮ ಹಸ್ತದಿಂದ ಸ್ವೀಕರಿಸುವದಕ್ಕಾಗಿ ತನ್ನ ಸಿಂಹಾಸನವನ್ನು ಬಿಟ್ಟು ನಾಲ್ಕು ಹೆಜ್ಜೆ ಮುಂದೆ ಬರುವನು. ಆ ಸುಸಂಧಿಯನ್ನು ಸಾಧಿಸಿ ತಮ್ಮ ಪರಿವಾರದವರು ಆ ಹತಭಾಗ್ಯನಾದ ರಾಜನನ್ನು ಅಲ್ಲಿಗೆ ಹಿಡಿದು ಕಟ್ಟಿ ಬಂದಿಯನ್ನಾಗಿ ಮಾಡಿದ ಕೂಡಲೆ ತಮ್ಮ ರಾವುತರ ಪಡೆಯು ಅರಮನೆಗೆ ಮುತ್ತಿಗೆ ಹಾಕುವಂತೆ ಮಾಡಿದರೆ ಕುತುಬಶಾಹೀ ರಾಜ್ಯದ ಇತಿಶ್ರೀಯು ಅಷ್ಟರಿಂದಲೇ ಆಯಿತೆಂಬುದಕ್ಕೆ ಸಂಶಯುವೇ ಇಲ್ಲ.

"ಈ ಅಭಿಯೋಗಕ್ಕೆ ತಗಲುವ ವೆಚ್ಚವನ್ನೆಲ್ಲ ನಾನು ಕೊಡುವದಲ್ಲದೆ, ಔರಂಗಜೇಬ ಸುಲ್ತಾನರವರು ದೌಲತಾಬಾದದಿಂದ ಗೋವಳಕೊಂಡಕ್ಕೆ ಹೋಗಿ ಮರಳಿ ದೌಲತಾಬಾದಕ್ಕೆ ಬರುವ ವರೆಗೆ, ದಿನ ಒಂದಕ್ಕೆ ಐವತ್ತು ಸಾವಿರ ರೂಪಾಯಿಗಳಂತೆ ಹಿಡಿದಷ್ಟು ದಿವಸಗಳ ಲೆಕ್ಕ ಮಾಡಿ

---

ಕೋಟೆಯ ನಿಕಟದಲ್ಲಿಯೆ ಇರುವದರಿಂದ ಅದಕ್ಕೆ ಮಹಮದ ಕುತುಬಶಹನು ಕೋಟೆಕೊತ್ತಳಗಳನ್ನು ಕಟ್ಟಿಸಲಿಲ್ಲ. ಆ ವಿಲಾಸಿಯಾದ ಸುಲ್ತಾನನ ತರುವಾಯದವರು ಅದಕ್ಕೆ ಹೈದರಾಬಾದವೆಂಬ ಮಹಮದೀ ಹೆಸರನ್ನಿಟ್ಟರೂ ಅಲ್ಲಿಯ ನಿವಾಸಿಗಳು ಅದಕ್ಕೆ ವಾಡಿಕೆಯಲ್ಲಿ ಭಾಗಾನಗರವೆಂದೇ ಕರೆಯುತ್ತಿದ್ದರು. ಆ ಹೈದರಾಬಾದವೇ ಈಗಿನ ನಿಜಾಮಸಾಹೇಬರ ರಾಜಧಾನಿಯು.

ಹಣವನ್ನು ಕಾಣಿಕೆಯಾಗಿ ಕೊಡುವೆನು. ಶ್ರುತವಿರಬೇಕು! ತಮ್ಮ ಪಾದಸೇವಾಪೇಕ್ಷಿಯಾದ ಈ ಅಮೀರ ಜುಮ್ಲಾನಿಗೆ ನಿರಂತರ ವಾದ ಸೇವಾಸ್ಥಾನವನ್ನು ದಯಪಾಲಿಸುವದು ಸುಲ್ತಾನರನ್ನು ಸರ್ವಥಾ ಕೂಡಿದೆ.''

## ೧೭

## ಅಮೀರ ಮೀರಜುಮ್ಲಾ

ಮೊಗಲರ ಆಳಿಕೆಯಲ್ಲಿ ಪರ್ಶಿಯಾ (ಇರಾಣ) ದಿಂದ ಹಿಂದು ಸ್ಥಾನಕ್ಕೆ ಬಂದು ಸಾಧಾರಣವಾದ ಸ್ಥಿತಿಯಿಂದ ಒಳ್ಳೇ ಘನತೆಗೇರಿ ದಂಥ ಅನೇಕ ಜನರಲ್ಲಿ "ಮೀರಜುಮ್ಲಾ'' ಎಂಬವನೊಬ್ಬನಾಗಿದ್ದನು. ಮೀರಜುಮ್ಲಾನ ನಿಜವಾದ ಹೆಸರು ಸೈಯ್ಯದ ಮೀರಮುಹಮ್ಮದ ಅದ್ರಿ ಸ್ತಾನಿ ಎಂಬದಾಗಿತ್ತು. ಇಸ್ಫಾಹಾನ್ ಪಟ್ಟಣದ ಸಮೀಪದಲ್ಲಿರುವ ಅದ್ರಿಸ್ತಾನದ ನಿವಾಸಿಯು ಇವನಾಗಿದ್ದರಿಂದ ಇವನಿಗೆ ಅದ್ರಿಸ್ತಾನಿ ಎಂಬ ಅಡ್ಡ ಹೆಸರು. ಮೀರಮುಹಮ್ಮದನು ವಿದ್ಯಾವಂತನೂ ಒಳ್ಳೇ ಚತುರನೂ ಸಾಹಸಿಯಾದ ಎದೆಗಾರನೂ ಜಾತ್ಯಾ ಶೂರನೂ ಆಗಿರುವ ದನ್ನು ಕಂಡು ಪರ್ಶಿಯಾ ದೇಶದ ಧನಾಢ್ಯನಾದ ವ್ಯಾಪಾರಸ್ಥನೊಬ್ಬನು ಇವನನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಹಿಂದುಸ್ತಾನಕ್ಕೆ ಬಂದನು. ಧೂರ್ತನಾದ ಈ ಅನುಯಾಯಿಯು ಸಮಯ ದೊರೆತಾಗ ತನ್ನ ಕೈ ಸಾಧಿಸಿಕೊಂಡು ಬೇಗನೆ ಶ್ರೀಮಂತನಾದನು. ಯಜಮಾನರ ಕೆಲಸ ವನ್ನು ಉಪಕಾರಕ್ಕಾಗಿ ಮಾಡಿದವನಂತೆ ಮಾಡಿ ಮೀರಜುಮ್ಲಾನು ತಾನೊಂದು ಸ್ವತಂತ್ರವಾದ ಉದ್ಯೋಗವನ್ನು ನಡಿಸಿ ಅನೇಕ ಜನ ಸರದಾರ, ಅಮೀರ, ಉಮ್ರಾವರ ಸ್ನೇಹವನ್ನು ಗಳಿಸಿ ಹೆಸರುವಾಸಿ ಗಿಯೇ ಕುಳಿತನು.

ಮುಂದೆ ಕೆಲವೊಂದು ನಿಮಿತ್ತವಾಗಿ ಅವನು ಉತ್ತರದಿಂದ ದಕ್ಷಿ ಣಕ್ಕೆ ಬಂದು ಗೋವಳಕೊಂಡದ ರಾಜ್ಯದಲ್ಲಿ ಕಾಲೂರಿ ನಿಂತ

ಕೊಂಡನು. ಆ ಕಾಲದಲ್ಲಿ ಗೋವಳಕೊಂಡದ ಸುಲ್ತಾನನಾದ ಅಬ್ದುಲ್ಲಾ ಕುತುಬಶಹನು ಚಿಕ್ಕ ವಯಸ್ಸಿನವನಾಗಿದ್ದನು. ಬಾಲರಾಜನ ಕಾಲವೆಂದರೆ ಸ್ವಾರ್ಥಪರಾಯಣರಾದ ಧೂರ್ತರಿಗೆ ಸುಗ್ಗಿಯ ಕಾಲವೇ ಸರಿ. ಅಂಥ ಮಹಾಪರ್ವದಲ್ಲಿ ಮೀರಜುಮ್ಲಾನಂಥ ಮಹಾ ಸಾಹಸಿಯಾದ ಧೂರ್ತನು ತನ್ನ ಮಂತ್ರ-ತಂತ್ರಗಳನ್ನು ಸಾಧಿಸಿಕೊಳ್ಳದೆ ಬಿಡುವನೆ? ಅವನು ರಾಜಕಾರಣಗಳಲ್ಲಿ ಸೇರಿ ಅಲ್ಲಿಯ ಸರದಾರ ಸೇನಾಪತಿಗಳಿಗೆ ಅವಶ್ಯಕನಾಗಿದ್ದನಲ್ಲದೆ ಮೆಲ್ಲಮೆಲ್ಲನೆ ಅವರಲ್ಲಿ ಭೇದಗಳನ್ನು ಹುಟ್ಟಿಸಿ ಎಲ್ಲರಿಗೂ ಮೀರಿ ನಿಂತನು. ಮಂತ್ರಾಲೋಚನೆಗಳಲ್ಲಿ ನಿಪುಣನೂ ಯುದ್ಧಕಲೆಯಲ್ಲಿ ಪ್ರವೀಣನೂ, ಸಕ್ಕರೆಯ ಸವಿಸುಡಿಯವನೂ, ವರ್ಚಸ್ಸುಳ್ಳ ಮುಖಲಕ್ಷಣದವನೂ ಆದ ಆ ವಿಲಕ್ಷಣನಾದ ಪುರುಷನು ಗೋವಳಕೊಂಡದ ಮಂತ್ರಿಮಂಡಳವನ್ನು ಬೇಗನೆ ಹಿಂದಕ್ಕೊತ್ತಿ ತಾನೇ ಅಲ್ಲಿಯ ವಜೀರನಾದನು.

ಆಯಾಸವಿಲ್ಲದೆ ಬೇಡಿಬೇಡಿದ ಹಾಗೆ ಬಯಕೆಗಳು ಕೈಗೂಡುತ್ತ ನಡೆದಿರಲು ಮನುಷ್ಯನಲ್ಲಿ ಮಹತ್ವಾಕಾಂಕ್ಷೆಯು ಹೆಚ್ಚುತ್ತ ನಡೆಯುವದು ಸಹಜವಾದ ಮಾತು. ಮೀರಜುಮ್ಲಾನಲ್ಲಿ ಮಹತ್ವಾಕಾಂಕ್ಷೆಯು ಹೆಚ್ಚಾಯಿತು. ಅನಾಯಕವಾದ ಆ ರಾಜ್ಯದಲ್ಲಿ ಅವನು ತನ್ನದೊಂದು ಸ್ವತಂತ್ರದ ದೊಡ್ಡ ಸೇನೆಯನ್ನು ಇಟ್ಟುಕೊಂಡು ಸುಲ್ತಾನನಿಗೂ ಅಧಿಕಾರಿಗಳಿಗೂ ಭೀತಿಯನ್ನು ತೋರಿಸಿ ರಾಜ್ಯದಲ್ಲಿ ಬೇಕುಬೇಕಾದ್ದನ್ನು ಮಾಡಲಾರಂಭಿಸಿದನು. ಕರ್ನಾಟಕದಲ್ಲಿಯ ಚಿಕ್ಕದೊಡ್ಡ ರಾಜರನ್ನೂ ಪಾಳ್ಯಗಾರರನ್ನೂ ಸುಲಿದು ಅವನು ಹೇರಳವಾದ ಹಣವನ್ನೆತ್ತಿಕೊಂಡು ಒಯ್ಯುವನು. ಹಿಂದೂಜನರ ದೇವಾಲಯಗಳನ್ನು ಭ್ರಷ್ಟ ಮಾಡಿ ಮೂರ್ತಿಗಳನ್ನೊಡೆದು ಅಲ್ಲಿ ಇದ್ದದ್ದುಬಿದ್ದದ್ದನ್ನೆಲ್ಲ ತನ್ನ ಪಾಲು ಮಾಡಿಕೊಂಡನು. ರತ್ನಾಕರವೆಂದೆನ್ನಿಸಿಕೊಂಡ ಗೋವಳಕೊಂಡ ಪ್ರಾಂತದಲ್ಲಿ ಖನಿಗಳ ಕಟ್ಟಳೆಯೆಲ್ಲ ಮೀರಜುಮ್ಲಾನ ಕೈಯಲ್ಲಿಯೇ ಇದ್ದ ಮೂಲಕ ಅವನು ಅಲ್ಲಿ ಸಿಕ್ಕಿದ ಉತ್ತಮೋತ್ತಮವಾದ ರತ್ನಗಳನ್ನೆಲ್ಲ ತಾನೇ ನುಂಗಿ ನೀರು ಕುಡಿದನು. ಮೀರಜುಮ್ಲಾನ ಮನೆಯಲ್ಲಿ ಮೂವತ್ತುಮೂರು ಮಣ ವಜ್ರಗಳೇ ಇದ್ದವಂತೆ! ( ಇಪತ್ತು ರೂಪಾಯಿ

ಭಾರವುಳ್ಳದ್ದು ಒಂದು ಸೇರಾದರೆ ನಾಲ್ವತ್ತು ಸೇರಿಗೆ ಒಂದು ಮಣ) ಇಷ್ಟರ ಮೇಲಿಂದ ವಜೀರನ ಸಂಪತ್ತಿನ ಲೆಕ್ಕವನ್ನು ವಾಚಕರೆ ನೀವು ಕಟ್ಟಬಲ್ಲಿರಾ? ಮೂವತ್ತುಮೂರು ಮಣ ಇಂಗಿನ ಅಡಿಗೆ ಎಷ್ಟಾಯಿತೆಂಬದನ್ನು ನೀವೇನು ಹೇಳಬಲ್ಲಿರಿ?

ಅಬ್ದುಲ್ಲಾ ಕುತುಬಶಹನು (ಗೋವಳಕೊಂಡದ ಸುಲ್ತಾನನು) ಪ್ರಬುದ್ಧನಾದ ಬಳಿಕ ತಾನೂ ತನ್ನ ರಾಜ್ಯವೂ ಮೀರಜುಮ್ಲಾನ ಹಿಡಿಕೆಯಲ್ಲಿ ದೃಢವಾಗಿ ಸಿಕ್ಕಿರುವ ಸಂಗತಿಯನ್ನರಿತು ಒಳ್ಳೇ ಚಿಂತೆಯಲ್ಲಿ ಮುಳುಗಿ ಹೋಗಿದ್ದನು. ಹೊಟ್ಟೆಯಲ್ಲಿ ಬೆಳೆದಿರುವ ಆ ಪ್ರಬಲವಾದ ಗುಲ್ಮವನ್ನು ಸಹಸಾ ಹರಿದು ತೆಗೆಯುವದೆಂದು? ಇರಗೊಟ್ಟರೆ ನಿಶ್ಚಯವಾಗಿ ಪ್ರಾಣಕ್ಕೆ ಹಾನಿಯು! ರಾಜ್ಯದ ಮಂತ್ರಿ ಸೇನಾನಾಯಕರೆಲ್ಲ ಮೀರಜುಮ್ಲಾನ ಅನುಜೀವಿಗಳು. ಅಬ್ದುಲ್ಲಾಶಹನ ಅಂತರಂಗವೆಲ್ಲ ಮೀರಜುಮ್ಲಾನ ಕರ್ಣಪಿಶಾಚಕ್ಕೆ ತಿಳಿಯದೆ ಇರುತ್ತಿದ್ದಿಲ್ಲ. ಸುಲ್ತಾನನು ಜಾಣನೂ, ನೀತಿವಂತನೂ, ತಕ್ಕಮಟ್ಟಿಗೆ ಶೂರನೂ ಆಗಿದ್ದರೂ ವಿಲಕ್ಷಣವಾದ ವ್ಯಕ್ತಿಯಾಗಿದ್ದ ಮೀರಜುಮ್ಲಾನ ತೇಜಸ್ಸಿನ ಮುಂದೆ ಆ ದುರ್ದೈವಿಯಾದ ಸುಲ್ತಾನನ ಬೆಳಕು ಎಷ್ಟುಮಟ್ಟಿಗೂ ಬೀಳದಾಯಿತು. ಆದರೂ ಅಬ್ದುಲ್ಲಾಶಹನು ತನಗೆ ಅನುಕೂಲವಾದ ಕಾಲವು ಎಂದಾದರೂ ಬಂದೀತೆಂದು ನಂಬಿ ಸುಮ್ಮನೆ ಕಾಲಕ್ಷೇಪ ಮಾಡುತ್ತಿದ್ದನು.

ಪದಾರ್ಥವು ಮುಂಗೈಗೆ ಬರುವ ವರೆಗೆ ಅದನ್ನು ನೆಕ್ಕಬಹುದಲ್ಲದೆ ಮೊಳಕೈಗೆ ಬಂದ ಮೇಲೆ ಹಾಗೆ ಮಾಡುವದು ಸರಿಯಲವಷ್ಟೆ? ವಜೀರನ ಅತ್ಯಾಚಾರಗಳು ಮರ್ಯಾದೆಯನ್ನು ಮೀರಿದವು. ಆ ದುರಾತ್ಮನು ಉಂಡಮನೆಯ ಜಂತೆಗಳನ್ನು ಎಣಿಸಲಿಕ್ಕೆ ಹಿಂದೆ ಮುಂದೆ ನೋಡಲಿಲ್ಲ. ರಾಜಮಾತೆಯು ತಾರುಣ್ಯಾವಸ್ಥೆಯನ್ನು ದಾಟಿದವಳಾಗಿದ್ದರೂ ಸಶಕ್ತಳೂ ತುಂಬಿದ ಮೈಯುಳ್ಳವಳೂ ರೂಪವತಿಯೂ ಆಗಿರುವದರಿಂದ ಅವಳಿನ್ನೂ ವಿಲಾಸಿನಿಯಾದ ತರುಣಿಯಂತೆ ಕಾಣುತ್ತಿದ್ದಳು. ಮೀರಜುಮ್ಲಾನು ಅವಳೊಡನೆ ಸಲಿಗೆಯನ್ನು ಮಾಡಿ ಪಾತಕಿಯಾದನು. ಈ ವರ್ತಮಾನವು ಅಬ್ದುಲ್ಲಾಶಹನಿಗೆ ತಿಳಿದು ಬಂದ ಬಳಿಕ ಅವನು ಕ್ರೋಧ

ಸಂತಪ್ತನಾಗಿ ಹಾನಿ ಲಾಭಗಳನ್ನೆಣಿಸದೆ ವಜೀರನಿಗೆ ತಕ್ಕ ಶಿಕ್ಷೆಯನ್ನು ವಿಧಿಸಲೇಬೇಕೆಂದು ನಿಶ್ಚಯಿಸಿದ್ದನು. ಈ ಶಹಕ್ಕೆ * ನಾ-ಶಹವಾಗಿ ಮೀರಜುಮ್ಲಾನು ಹಿಂದಿನ ಅಧ್ಯಾಯದಲ್ಲಿ ವಿವರಿಸಿದ ಪತ್ರವನ್ನು ಬರೆದನು.

## ೧೮

## ಏಕುಚೇಕುಂಗಳೊಂದಾದವು!

ಮೀರಜುಮ್ಲಾನ ಆಚರಣ ನೀತಿಗಳಲ್ಲಿ ದೋಷಗಳೆಷ್ಟೇ ಇದ್ದರೂ, ತತ್ಕಾಲೀನರಾದ ಅತಿರಥಿ ಮಹಾರಥಿಗಳಲ್ಲಿ ಅವನ ಮೇಲೆ ಕೈಮಾಡಿ ತೋರಿಸುವವರಾದ ಪರಾಕ್ರಮಿಗಳು ಹಿಂದುಸ್ಥಾನದಲ್ಲಿ ವಿರಳರೆನ್ನುವದಕ್ಕೆ ತಿಲಮಾತ್ರವೂ ಸಂದೇಹವಿಲ್ಲ. ರಾಜನೀತಿಯಲ್ಲಿಯಾದರೂ ಆ ಪಾರಸೀಕನು ಶಕುನಿಗೆ ಸಮಾನನಾದವನು. ಅವನ ಸಂಪತ್ತಿನ ನೆಲೆಯಾದರೂ ಯಾರಿಗೆ ತಾನೆ ಚನ್ನಾಗಿ ತಿಳಿದಿತ್ತು? ಮಹತ್ವಾಕಾಂಕ್ಷಿಯಾದ ಔರಂಗಜೇಬನಿಗೆ, ಹೀಗೆ ಸರ್ವತೋಭದ್ರನಾಗಿರುವ ಮಹಾವ್ಯಕ್ತಿಯಾದ ಮೀರಜುಮ್ಲಾನ ಸಂಗ್ರಹವನ್ನು ಮಾಡುವದು ಆ ಸಮಯದಲ್ಲಿ ಕೇವಲವಾಗಿ ಅವಶ್ಯವಾಗಿರುವದರಿಂದ ಗೋವಳಕೊಂಡದ ಅಭಿಯೋಗವನ್ನು ಅವನು ಹಾಡಿಹರಿಸಿದನು.

ರಣರಂಗದಲ್ಲಿ ಸಡ್ಡು ಹೊಡೆದು ನಿಂತು ಅಪ್ರತಿಮವಾದ ಪರಾಕ್ರಮದಿಂದ ಕಾದಿ ಶತ್ರುಗಳ ಹೆಡಕು ಮುರಿಯಬಲ್ಲವನಾದ ಔರಂಗಜೇಬನಿಗೆ ಮೀರಜುಮ್ಲಾನು ತೋರಿಸಿ ಕೊಟ್ಟ ಕಾರ್ಯಕ್ರಮವು ನಾಟಕದ ಕಥಾಭಾಗದಂತೆ ವಿನೋದಪ್ರದವಾಗಿ ತೋರಿದ್ದರಿಂದ ಆ ಹೊಸ ಮಾದ

---

* ಶಹ ನಾ-ಶಹ:—ಚತುರಂಗದ ಆಟದಲ್ಲಿ ಮಾವುತ ರಾವುತನಾಗಲಿ, ಒಂಟೆಯವನಾಗಲಿ ವಿರುದ್ಧ ಪಕ್ಷದ ರಾಜನ ಮೈಮೇಲೆ ಏರಿ ಹೋಗಿರಲು ಅದಕ್ಕೆ "ಶಹ" ಎಂತಲೂ. ಆ ಸಂಕಟದ ನಿವಾರಣಾರ್ಥವಾಗಿ ಪ್ರತಿಪಕ್ಷೀಯು ಯೋಜಿಸಿದ ಉಪಾಯಕ್ಕೆ "ನಾ-ಶಹ" ಎಂತಲೂ ಆ ಆಟದ ಪರಿಭಾಷೆಯು.

ರಿಯ ಸಾಹಸದ ಕೆಲಸವನ್ನು ಅವನು ಒಳ್ಳೇ ಔತ್ಸುಕ್ಯದಿಂದ ಕೈ ಕೊಂಡನು.

ದಿಲ್ಲಿಯ ಬಾದಶಹನ ರಾಯಭಾರಿಯು ಐದಾರು ಸಾವಿರ ಜನ ರಾವುತರನ್ನು ಕಟ್ಟಿಕೊಂಡು ಕುತುಬಶಾಹೀ ರಾಜ್ಯದಲ್ಲಿ ಸೇರಿ ಪಯಣ ಗತಿಯಿಂದ ಭಾಗಾನಗರದ ಮಾರ್ಗವಾಗಿ ನಡೆದಿದ್ದನು. ಆ ನಿಯೋಗಿಗೆ ನಿಂತಲ್ಲಿ ನೀರನ್ನೂ ಕುಳಿತಲ್ಲಿ ಮಣೆಯನ್ನೂ ಗ್ರಾಮಗ್ರಾಮಗಳ ಅಧಿಕಾರಿಗಳು ಸಿದ್ಧಮಾಡಿಟ್ಟಿರುವದರಿಂದ, ಧಾವಿಸಿ ನಡೆದಿರುವರಾದ ಅವನ ಪಡೆಯುವರಿಗೆ ಮಾರ್ಗಕ್ರಮಣದ ತಾಪವೆಷ್ಟು ಮಾತ್ರವೂ ಕಂಡು ಬರಲಿಲ್ಲ. ಭಾಗಾನಗರದಲ್ಲಿಯಂತೂ ಆ ಜನರ ಸ್ವಾಗತ ಮಹೋತ್ಸವವು ಅಪ್ರತಿಮವಾಗಿಹೋಯಿತು. ರಾಯಭಾರಿಯವರು ಅಧ್ವಖೇದವನ್ನು ನೀಗಿ ಪ್ರಸನ್ನ ಮನಸ್ಸಿನವರಾದರೆಂಬ ವರ್ತಮಾನವನ್ನರಿತ ಬಳಿಕ ಡಬೀರನು ಅವರನ್ನು ಒಳ್ಳೇ ಸಂಭ್ರಮದೊಂದಿಗೆ ರಾಜದರ್ಶನಕ್ಕಾಗಿ ಕರಕೊಂಡು ಹೋದನು.

ರಾಜೋದ್ಯಾನದ ಮಧ್ಯದಲ್ಲಿ ವಿರಾಜಿಸುತ್ತಿರುವ ರಮಣೀಯವಾದ ಮಂದಿರವನ್ನು ದಿಲ್ಲಿಯ ನಿಯೋಗಿಗಳ ಸನ್ಮಾನಾರ್ಥವಾಗಿ ಬಹುಪರಿಯಾಗಿ ಅಲಂಕರಿಸಿದ್ದರು. ಸಿಂಗರಿಸಿದ ಕುದುರೆಗಳನ್ನೇರಿಕೊಂಡಿರುವ ರಾವುತರು ಆ ರಾಜಮಂದಿರದ ಬೀದಿಯ ಎರಡೂ ಮಗ್ಗಲಿಗೂ ಸಾಲುಗಟ್ಟಿಕೊಂಡು ನಿಂತಿದ್ದರು. ಅಧಿಕಾರಿಗಳು ನಿಯೋಗಿಯನ್ನೂ ಅವನ ಪರಿವಾರದವರಾದ ಹತ್ತೆಂಟು ಜನ ಸರದಾರರನ್ನೂ ಒಳ್ಳೇ ಆದರದೊಂದಿಗೆ ಮಂದಿರದಲ್ಲಿ ಕರೆತಂದರು. ಶಿಷ್ಟಾಚಾರದ ಮೇರೆಗೆ ನಮಸ್ಕಾರ ಚಮತ್ಕಾರಗಳೂ, ಕಾಣಿಕೆಗಳ ಕೊಡ ತೆಗೆದುಕೊಳ್ಳೋಣವೂ ಮುಗಿದ ಬಳಿಕ, ಇನ್ನು ಅಬದುಲ್ಲಾಶಹನು ತನ್ನ ಸಿಂಹಾಸನವನ್ನು ಬಿಟ್ಟೆದ್ದು ನಿಯೋಗಿಯ ಕೈಯಿಂದ ದಿಲ್ಲೀಶ್ವರನ ಸಂದೇಶಪತ್ರವನ್ನು ತೆಗೆದು ಕೊಳ್ಳಲುದ್ಯುಕ್ತನಾಗುವನು, ಅಷ್ಟರಲ್ಲಿ ರಾಜನ ಹಿಂಭಾಗದಲ್ಲಿ ನಿಂತಿರುವ ಬ್ರಾಹ್ಮಣ ಸರದಾರನೋರ್ವನು ಅಬುಲ್ಲಾನ ಅಂಗಿಯನ್ನು ಹಿಡಿದು ಜಗ್ಗಿ "ಪ್ರಭೋ ತಡೆಯಿರಿ! ಎನೋ ಭಯಂಕರವಾದ ಮೋಸವಿರುವದಾಗಿ ತೋರುತ್ತದೆ. ಆ ಮುದುಕನು ರಾಯಭಾರಿಯಲ್ಲ. ಅವನು

ಮುದುಕನೂ ಅಲ್ಲ. ಕಪಟಿಯಾದ ಔರಂಗಜೇಬನು ವೇಷಧಾರಿಯಾಗಿ ಬಂದಿರುವನು. ಇನ್ನು ನೀವು ನಿಮಿಷಮಾತ್ರವೂ ತಡಮಾಡದೆ ಈ ಅಂತಃಪುರದಲ್ಲಿ ಸೇರಿ ಮುಂದೆ ಕಂಡ ಹಾದಿಯನ್ನು ಕೈಕೊಂಡು ಪಾರಾಗಿ ಹೋಗಿರಿ; ಇಲ್ಲದಿದ್ದರೆ ಘಾತವಾಗುವದು" ಎಂದು ಎಳ್ಳಷ್ಟಾದರೂ ಹಾವಭಾವಗಳನ್ನು ಮಾಡದೆ ಸಹಜವಾದ ಮಾತು ಹೇಳಿದಂತೆ ಹೇಳಿದನು. ತರುಣನಾದ ಕುತುಬಶಹನು ಒಂದೇ ಹಾರಿಕೆಯಲ್ಲಿ ಅಂತಃಪುರದ ಬಾಗಿಲಕ್ಕೆ ಬಂದು ಒಳಗೆ ಹೊಕ್ಕು ಧಡಕ್ಕನೆ ಕದ ಮುಚ್ಚಿಕೊಂಡನು.

ಔರಂಗಜೇಬನಾದರೂ ವಿಲಂಬ ಮಾಡದೆ ತನ್ನ ರಾವುತರನ್ನು ಕರೆಯಿಸಿ ಅರಮನೆಗೆ ಮುತ್ತಿಗೆ ಹಾಕಿ ಎಲ್ಲ ಬಾಗಿಲಗಳನ್ನು ಮುರಿದು ಅಂತಃಪುರದ ಮರ್ಯಾದೆಯನ್ನು ಕೂಡ ಲೆಕ್ಕಿಸದೆ ಒಳಹೊಕ್ಕು ಎಲ್ಲ ಕಡೆಯಲ್ಲಿಯೂ ಅಬ್ದುಲ್ಲಾನನ್ನು ಹುಡುಕಿ ನೋಡಿದನು. ಆದರೆ ಆ ರಾಜನು ಒಬ್ಬ ರಾವುತನ ಕುದುರೆಯನ್ನು ತೆಗೆದುಕೊಂಡು ಅಡ್ಡ ಹಾದಿ ಬಿದ್ದು ಒಳ್ಳೇ ಜಾಗ್ರತೆಯಿಂದ ಗೋವಳಕೊಂಡದ ಕೋಟೆಯಲ್ಲಿ ಸೇರಿಕೊಂಡು ಬಿಟ್ಟಿದ್ದನು.

ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂಬ ವಿಷಾದದ ದಂಶದಿಂದ ಸಂತಪ್ತನಾದ ಔರಂಗಜೇಬನು ಕೋಟಿಕೊತ್ತಲಗಳ ಆಧಾರವಿಲ್ಲದೆ ನಿಂತಿರುವ ವಿಲಾಸಪುರಿಯಾದ ಭಾಗಾನಗರದಲ್ಲಿ ಹೊಕ್ಕು ಕೈಗೆ ಬಂದಂತೆ ಸುಲಿಗೆ ಮಾಡಿ ಮನಬಲ್ಲಂತೆ ಹಾವಳಿ ಮಾಡಿದನು. ಅರಮನೆಯು ಸುಟ್ಟುಹೋದದ್ದರಿಂದ ರಾಜವಿಲಾಸೋಚಿತೆಯರಾದ ಅಂತಃಪುರದ ನಾರಿಯರು ಉದ್ಯಾನದ ಗಿಡಗಂಟೆಗಳ ಮರೆಯಲ್ಲಿ ಹುದುಗಿಕೊಂಡು ಕುಳಿತು ಗಡಗಡನೆ ನಡುಗುತ್ತಿದ್ದರು. ಸೈನಿಕರು ಧನಕನಕಗಳನ್ನು ಅಪಹರಿಸಿದ್ದಲ್ಲದೆ ಅಂಗಂಗಡಿಯಲ್ಲಿಯ ಸರಕುಗಳನ್ನು ಓಣಿಗೀಡಾಡಿದರು. ಮನೆಗಳಲ್ಲಿ ಅಲಂಕಾರಕ್ಕಾಗಿ ಇರಿಸಿದ ಚಿತ್ರಪಟ ಕನ್ನಡಿಗಳನ್ನು ಒಡೆದು ಹಾಕಿದರು. ಸುವಾಸಿನಿಯರ ಮಂಗಲಸೂತ್ರಗಳನ್ನು ಕೂಡ ಬಲಾತ್ಕಾರದಿಂದ ಹರಿದುಕೊಂಡರು. ದೇವರ ಪೆಟ್ಟಿಗೆ ಪುಸ್ತಕಗಳು ಚಲ್ಲಾಪಿಲ್ಲೆಯಾಗಿ ಬಿದ್ದಿರುವದನ್ನು ಕಂಡು ಸುಶೀಲರಾದ

ಬ್ರಾಹ್ಮಣರು ವ್ಯಸನಪಟ್ಟರು. "ಅಯ್ಯೋ! ನಮ್ಮಪ್ಪಗಳಿರಾ, ವ್ರತದ ಉಪ್ಪಿನಕಾಯಿಗಳನ್ನು ದಯಮಾಡಿ ಮುಟ್ಟಬೇಡಿರಿ ಕಂಡಿರಾ!" ಎಂದು ವಿಧವೆಯರು ಬಹುಪರಿಯಾಗಿ ಹೇಳಿಕೊಂಡರೂ ಆ ಯುವನರು ಆ ಮಾತು ಲೆಕ್ಕಿಸದೆ ಗಡಿಗೆಗಳನ್ನು ಮುಟ್ಟಿ ಒಡೆದು ಹೋದರು.

ಭಾಗಾನಗರದ ಸುಲಿಗೆಯಾದ ಬಳಿಕ ಔರಂಗಜೇಬನು ಗೋವಳ ಕೊಂಡಕ್ಕೆ ಮುತ್ತಿಗೆ ಹಾಕಿಕೊಂಡು ಕುಳಿತನು. ಇಷ್ಟೆಲ್ಲ ಪ್ರತಾಪಕ್ಕೆ ಕಾರಣನಾಗಿದ್ದ ಮೀರಜುಮ್ಲಾನು ಅಲ್ಲಿ ನಡೆಯುವ ಸಮಾಚಾರಗಳನ್ನು ಪಾಳತಿಯ ಮೇಲಿಂದ ಅರಿತುಕೊಂಡು ತಾನೂ ತನ್ನ ದಂಡು ಕಟ್ಟಿ ಕೊಂಡು ಔರಂಗಜೇಬನಿಗೆ ಬಂದು ಕೂಡಿದನು. ಗೋವಳಗೊಂಡದ ಕೋಟೆಯು ಅಭೇದ್ಯವಾಗಿದ್ದರೂ ಒಳಗೆ ತಕ್ಕಷ್ಟು ಸೈನ್ಯವಿದ್ದಿಲ್ಲ. ಅನ್ನ ಸಾಮುಗ್ರಿಯಾದರೂ ಅಷ್ಟಕ್ಕಷ್ಟೆಯೇ ಆಗಿತ್ತು. ಈ ಸಮಾಚಾರವು ಮೀರಜುಮ್ಲಾನಿಗೆ ಚನ್ನಾಗಿ ತಿಳಿದಿತ್ತಾದ್ದರಿಂದ ಇಂದಿಲ್ಲ ನಾಳೆಗಾದರೂ ಕೋಟೆಯು ತಮ್ಮ ಕೈವಶವಾಗುವದೆಂದು ಆಲೋಚಿಸಿ ಔರಂಗಜೇಬನೂ ಮೀರಜುಮ್ಲಾನೂ ವಿಶೇಷವಾದ ಸಾಹಸವನ್ನು ಮಾಡಿ ದಣುಕೊಳ್ಳುವ ದೇಕೆಂದೆಣಿಸಿ ಆರಾಮವಾಗಿ ಮುತ್ತಿಗೆಯನ್ನಿಟ್ಟುಕೊಂಡು ಕುಳಿತರು. ತಿಂಗಳೆರಡು ತಿಂಗಳ ವರೆಗೆ ಮುತ್ತಿಗೆಯು ಬಿದ್ದೇ ಇತ್ತು.

ಈ ಅವಧಿಯಲ್ಲಿ ಔರಂಗಜೇಬ ಮೀರಜುಮ್ಲಾರು ಪರಸ್ಪರರ ಯೋಗ್ಯತೆಗಳನ್ನು ಚನ್ನಾಗಿ ಅರಿತವರಾಗಿ ಅವರೀರ್ವರೂ ಪರಮ ಸ್ನೇಹಿತ ರಾದರು. ಪರಸ್ಪರರು ಪರಸ್ಪರರಿಗೆ ಮನಃಪೂರ್ವಕವಾಗಿ ಸಹಾಯ ವನ್ನು ಮಾಡತಕ್ಕದ್ದೆಂದು ಅವರೀರ್ವರೂ ಆಣೆ ಕ್ರಿಯೆಗಳನ್ನು ಕುರಾಣ ಗಳನ್ನು ಬಡಿಬಡಿದು ಮಾಡಿದರು. ಏಕುಜೀಕುಗಳೊಂದಾದವು. ಔರಂಗ ಜೇಬನು ತನ್ನ ಅಭೀಷ್ಟ ಮಹತ್ವಾಕಾಂಕ್ಷೆಗಳನ್ನೆಲ್ಲ ಆ ಧುರೀಣನಾದ ಇರಾಣಿಯ ಮುಂದೆ ತೋಡಿಕೊಂಡನು. ಈರ್ವರೂ ಕೂಡಿ ಅನೇಕ ವಾದ ಯುಕ್ತಿಪ್ರಯುಕ್ತಿಗಳನ್ನು ಕಲ್ಪಿಸಿದರು. ಒಬ್ಬರ ತಲೆಮೆಟ್ಟಿ ಒಬ್ಬರು ಹಾರುವಷ್ಟು ಜಾಣರವರು. ಆದರೆ ಈರ್ವರಿಗೂ ಗುರುವಾಗ ತಕ್ಕಂಥ ಪರಮ ಗುರುವು ಆ ಕಾಲದಲ್ಲಿ ಒಬ್ಬನಾದರೂ ಹುಟ್ಟಿರಲಿಲ್ಲ ವಾದ್ದರಿಂದ ಅವರ ಮಾಡಿಟ್ಟ ಹಂಚಿಕೆಗಳೇ ನಿಶ್ಚಯವಾಗಿ ಯಶಸ್ಕರ

ವಾದ್ದ ವೆಂಬದಕ್ಕೆ ಸಂದೇಹವಿದ್ದಿಲ್ಲ.

ಔರಂಗಜೇಬನ ಹೆಗಲಿಗೆ ಹೆಗಲಾಗಿ ಬಂದು ಮಿರಜುಮ್ಲಾನು ನಿಂತನಾದ್ದರಿಂದ ಹಿಂದುಸ್ಥಾನದ ಇತಿಹಾಸವೆಂಬ ಪ್ರಚಂಡವಾದ ಪ್ರವಾಹವು ತನಗಾಗಿ ಮಾಡಿದ ಸ್ವಾಭಾವಿಕವಾದ ಪಾತ್ರವನ್ನು ಬಿಟ್ಟು, ಮಿರಜುಮ್ಲಾ ಔರಂಗಜೇಬರು ಕಡಿದಿಟ್ಟ ಕಾಲುವೆಯ ಗುಂಟ ಹರಿದದ್ದರಿಂದ ಜಗತ್ತಿನಲ್ಲಿಯ ರಾಜಕೀಯ ಸಾಮಾಜಿಕ ವಿಷಯಗಳ ಉನ್ನತಿ ಅವನತಿಗಳಲ್ಲಿ ಪ್ರಮಾಣವಿಲ್ಲದ ಹೆಚ್ಚು ಕಡಿಮೆಯಾಗಿ ಹೋಯಿತೆಂದು ಹೇಳಲಭ್ಯಂತರವಿಲ್ಲ.

## ೧೯

नूनंहिते कविवरा विपरीत बोधा ।
ये नित्यमाहुरबला इति कामिनीनां ॥

" ದರಾಯಸ್, ಗೋವಳಕೊಂಡದ ಸುಲ್ತಾನನ ಚಿಟಣವೀಸನಾದ ರಾಮಚಂದ್ರ ಪಂಡಿತನು ಬರೆದಿರುವ ಪತ್ರವನ್ನು ನೀನು ಓದಿದಿಯೇನು ? " ಎಂದು ದಾರಾ ಸುಲ್ತಾನನ ಅಕ್ಕನಾದ ಬೇಗಮ್ ಸಾಹೇಬಳು ಕೇಳಿದಳು.

" ಓದಿದೆನು. ಅದರಲ್ಲೇನಿದೆ ? ಔರಂಗಜೇಬನು ಗೋವಳಕೊಂಡದ ಸುಲ್ತಾನನನ್ನು ಯುದ್ಧದಲ್ಲಿ ಹತ್ತಿಗೆ ತಂದಿರುವನೆಂದು, ರಾಜ್ಯದ ಕಿಚ್ಚಿಗಾಗಿ ಪಂಡಿತನು ಹಾಗೆ ಬರೆದಿರುವನು. ಆದರೆ ಅವನ ಕೋರಿಕೆಯನ್ನು ಕೇಳುವವರಾರು ? " ಎಂದು ಪೂರ್ವಾಪರಗಳನ್ನು ಚನ್ನಾಗಿ ವಿಚಾರಿಸದೆ, ಸರಲಸ್ವಭಾವದವನಾದ ಯುವರಾಜನು ಉತ್ತರವನ್ನಿತ್ತನು.

" ಗೋವಳಕೊಂಡದ ಸುಲ್ತಾನರು ನಮ್ಮ ಪ್ರಭುತ್ವಕ್ಕೆ ವಿಧೇಯರಾಗಿ ನಡಕೊಳ್ಳುತ್ತಿದ್ದು ಅಪರಾಧಿಯಾಗದವನಾದ ಅಬ್ದುಲ್ಲಾಶಹನೊಡನೆ ನಾವು ಕಾಲು ಕೆದರಿ ಯುದ್ಧ ಮಾಡುವದು ಸರಿಯಾಗಿ ತೋರುವದಿಲ್ಲ " ಎಂದು ಸುಲೇಮಾನ್ ಸುಖೋನು ಅಭಿಪ್ರಾಯವನ್ನಿತ್ತನು.

" ಯಾಕೆ ಸುಲೇಮಾನ್ ! ನಮ್ಮ ಅಕಬರ ಬಾದಶಹರು ದಕ್ಷಿಣ ದಲ್ಲಿಯ ಯಾವತ್ತೂ ರಾಜ್ಯಗಳನ್ನು ಮುರಿದು ಹಾಕಬೇಕೆಂಬ ವಿಚಾರ ದಲ್ಲಿರಲಿಲ್ಲವೆ ?" ಎಂದು ದಾರಾಶಹನು ಮಗನ ಅಭಿಪ್ರಾಯವನ್ನು ಕೇಳಿ ಕೊಂಡು ಆದರದಿಂದ ಪ್ರಶ್ನಮಾಡಿದನು.

ಸುಲೇಮಾನನು ವಿನಯದಿಂದ ತಂದೆಗೆ ಪ್ರಣಾಮ ಮಾಡಿ " ಹಾಗೆ ಮಹಾತ್ಮರಾದ ಅಕಬರ ಬಾದಶಹರ ವಿಚಾರವಿತ್ತು ಸರಿ. ಆದರೆ ಆ ಸಾರ್ವಭೌಮಶ್ರೇಷ್ಠರಿಗಿಂತಲೂ ಹೆಚ್ಚಾದ ನೀತಿಯಿಂದ ನಮ್ಮ ರಾಜ್ಯ ವನ್ನಾಳುವ ಅಧಿಕಾರವು ನಮಗಿರುವದೆಂದು ನಾನು ನಂಬುತ್ತೇನೆ" ಎಂದು ನುಡಿದನು.

" ದಾರಾ, ಗೋವಳಕೊಂಡದ ಬಡ ಸುಲ್ತಾನನು ನಿಶ್ಚಯವಾಗಿ ನಿರಪರಾಧಿಯು. ಅವನು ಅಪರಾಧಿಯೇ ಎಂದು ನಾನು ಕ್ಷಣಮಾತ್ರ ಗ್ರಹಿಸಿದರೂ ಬಾದಶಹರ ಆಜ್ಞೆಯನ್ನಾಗಲಿ, ನಿನ್ನ ಆಜ್ಞೆಯನ್ನಾಗಲಿ ತೆಗೆದುಕೊಳ್ಳದೆ ಔರಂಗಜೇಬನು ಗೋವಳಕೊಂಡದ ಮೇಲೆ ದಂಡೆತ್ತಿ ಹೋದದ್ದು ಸರ್ವಥಾ ಅಕ್ಷಮ್ಯವಾದ ಮಾತು!" ಎಂದು ಬೇಗಮ್ ಸಾಹೇಬಳು ಸೂಚಿಸಿದಳು.

" ಅಕ್ಷಮ್ಯವಾದ ಮಾತು, ಸಂದೇಹವಿಲ್ಲ! ಆದರೆ ಗೋವಳ ಕೊಂಡದ ಮೇಲೆ ದಂಡೆತ್ತಿ ಹೋಗಲು ಔರಂಗಜೇಬನು ನನ್ನ ಅಪ್ಪಣೆ ಯನ್ನು ಕೇಳಿಕೊಂಡಿದ್ದರೆ ನಾನು ನಿಜವಾಗಿ ಕೊಟ್ಟೇ ಕೊಡುತ್ತಿದ್ದೆನು. ಸುಲೇಮಾನನ ಅಭಿಪ್ರಾಯವವು ಬೇರೆಯಾಗಿದ್ದರೂ ಚಿಂತೆಯಿಲ್ಲ!" ಎಂದು ಯುವರಾಜನು ಮಗನ ಮುಖವನ್ನು ನೋಡಿ ನಗುತ್ತ ನುಡಿದನು.

" ಈ ಅಭಿಯೋಗದ ಕಾರಣವನ್ನಾದರೂ ನೀನು ಕೇಳಿರುವಿ ಯೇನು ನನ್ನ ಪ್ರಿಯ ಬಂಧುವೆ?" ಎಂದು ಬೇಗಮ್ಮಳು ಕಿಂಚಿತ್ ಕುಪಿತಳಾಗಿ ಕೇಳಿದಳು.

" ಏನು? ನನಗೆ ಚನ್ನಾಗಿ ತಿಳಿದಿಲ್ಲ."

" ಸಾಧುಪುರುಷನೆ, ಔರಂಗಜೇಬನು ದಂಭಕ್ಕಾಗಿ ತೊಡುತ್ತಿ ರುವ ಫಕೀರನ ವೇಷವು ನಿನಗೆ ಚನ್ನಾಗಿ ಒಪ್ಪುತ್ತಿತ್ತು! ಗೋವಳ

ಕೊಂಡದ ಅಬ್ದುಲ್ಲಾನ ಝನಾನಾ [ ಅಂತಃಪುರ] ದಲ್ಲಿ, ಪಾಪಿಯಾದ ಮಿರಜುಮ್ಲಾನು ಹೊಕ್ಕು ಅಲ್ಲಿ ಅವನ ಮಾತೆಯೊಡನೆ ಸವಿಗಾರಿಕೆ ಮಾಡಿದ ಅಪರಾಧಕ್ಕಾಗಿ ಆ ದುಷ್ಟನಿಗೆ ಶಾಸನಗೈಯ್ಯುವದು ಅಬ್ದುಲ್ಲಾನ ಕರ್ತವ್ಯವಷ್ಟೆ ? ಮಿರಜುಮ್ಲಾನ ವ್ಯಭಿಚಾರಕ್ಕೆ ಅಬ್ದುಲ್ಲಾನು ಅನುಕೂಲನಾಗದಿದ್ದ ಅಪರಾಧಕ್ಕಾಗಿ ಔರಂಗಜೇಬನು ಆ ಬಡ ಸುಲ್ತಾನನ ಕುತ್ತಿಗೆಗೆ ಉರುಲು ತಂದಿರುವ ದುರ್ವಿಚಾರಕ್ಕೆ ನಮ್ಮ ಭಾವೀ ಚಕ್ರವರ್ತಿಗಳೇ, ನೀವು ಸಮ್ಮತಿಸುವಿರಾ ? "

" ಹೀಗಿರುವದೇನು ಬೇಗಮ್ ಸಾಹೇಬ? ನನಗೆ ಗೊತ್ತಾಗಲಿಲ್ಲ "

" ಝನಾನಾದ ಅಭದ್ರವಾದ ಸಂಗತಿಯು ಹಾಗಿರಲಿ! ನಮ್ಮ ಔರಂಗಜೇಬ ಸುಲ್ತಾನರು ಕೇವಲವಾಗಿ ಮಿರಜುಮ್ಲಾನ ರಕ್ಷಣಕ್ಕಾಗಿ ಈ ಅಭಿಯೋಗವನ್ನು ಕೈಕೊಂಡಿರಲಿಕ್ಕಿಲ್ಲ. ಮಿರಜುಮ್ಲಾನೆಂದರೆ ಅದೊಂದು ಅಸಾಧ್ಯವಾದ ವ್ಯಕ್ತಿಯು. ಅವನನ್ನು ಸಂಗ್ರಹಿಸುವದು ಅವರಿಗೆ ಈ ಕಾಲಕ್ಕೆ ಅವಶ್ಯವಾಗಿ ಬೇಕಾಗಿದೆ. ಗೋವಳಕೊಂಡದ ರಾಜ್ಯವು ಔರಂಗಜೇಬರ ಹಸ್ತಗತವಾದರೆ ಅವರೂ ಮಿರಜುಮ್ಲಾನೂ ಸಮ್ಮಿಲಿತರಾಗಿ ದಿಲ್ಲಿಯ ಸಾಮ್ರಾಜ್ಯಕ್ಕೆ ಪ್ರತಿಸ್ಪರ್ಧಿಗಳೇ ಆಗಿ ಕುಳ್ಳಿರುವರು. ಹೀಗೆ ಅನೇಕವಾದ ವಿಚಾರಗಳ ಮೂಲಕ ಗೋವಳಕೊಂಡದ ರಾಜ್ಯವನ್ನು ಸದ್ಯಕ್ಕೆ ಉಳಿಸುವದು ನಮಗೆ ಅತ್ಯವಶ್ಯವಾದ ಮಾತಾಗಿರುವದು. ಇದರ ಮೇಲೆ ಯುವರಾಜರ ಇಚ್ಛೆಯೇ ಪ್ರಮಾಣವು! " ಎಂದು ಸುಲೇಮಾನನು ಸೂಚಿಸಿದನು.

" ಇಚ್ಛೆಯೇತರದು! ಈ ಪ್ರಸಂಗದಲ್ಲಿ ದಾರಾಶಹ, ಮತ್ತೊಂದು ವಿಚಾರ ಮಾಡದಲೆ, ಗೋವಳಕೊಂಡದ ಮುತ್ತಿಗೆಯನ್ನು ಈಗಿಂದೀಗಲೆ ತೆಗೆಯತಕ್ಕದ್ದೆಂದು ನೀನು ಔರಂಗಜೇಬನಿಗೆ ಆಜ್ಞಾಪತ್ರವನ್ನು ಬರೆ. ಔರಂಗಜೇಬನು ದಕ್ಷಿಣದಲ್ಲಿ ಪ್ರಬಲನಾದರೆ ನಿನ್ನ ಕುತ್ತಿಗೆ ಮಾತ್ರ ಉಳಿಯಲಿಕ್ಕಿಲ್ಲ! ಬಾದಶಹರು ಜೀವಂತರಿರುವಾಗಲೆ ದುರ್ವಿಚಾರದವನಾದ ಆ ನಿನ್ನ ತಮ್ಮನು ನಿಮ್ಮನ್ನೆಲ್ಲರನ್ನು ಮುರಿದು ಹಾಕಿ ದಿಲ್ಲಿಯ ಸಿಂಹಾಸನವನ್ನು ಆಕ್ರಮಿಸುವ ವಿಚಾರದಲ್ಲಿರುವನೆಂದು ನಾನು ನಿನಗೆ ಅನೇಕಾವರ್ತಿ ಸೂಚಿಸಿದ್ದರೂ ನಿನಗೆ ಬುದ್ಧಿ ಬರಲೊಲ್ಲದು!" ಎಂದು

ಬೇಗಮ್‌ಳು ಒಳ್ಳೇ ಆಗ್ರಹಪೂರ್ವಕವಾಗಿ ಮಾತನಾಡಿದಳು
"ಬೇಗಮ್, ನಿನ್ನ ವಿಚಾರವು ಸರಿಯಾದದ್ದು. ಪತ್ರ ಕಂಡಾ ಕ್ಷಣವೇ ಗೋವಳಕೊಂಡದ ಮುತ್ತಿಗೆಯನ್ನು ತೆಗೆಯಬೇಕೆಂದು ನಾನೀಗಲೇ ಔರಂಗಜೇಬನಿಗೆ ಬರೆಯುವೆನು. ಕಪಟಿಯಾದ ಔರಂಗಜೇಬನು ಮೊನ್ನೆ ಇಲ್ಲಿಂದ ದಕ್ಷಿಣಕ್ಕೆ ಹೋಗುವಾಗ ನನ್ನ ಕಾಲಿಗೆ ಬಿದ್ದು ಕ್ಷಮೆ ಬೇಡಿಕೊಂಡು ಇನ್ನು ಮುಂದೆ ತಾನು ನನಗೆ ವಿಧೇಯನಾಗಿ ನಡಕೊಳ್ಳುವೆನೆಂದು ಬಹುಪರಿಯಾಗಿ ಹೇಳಿಕೊಂಡದ್ದರಿಂದ ನಾನು ಮೋಸದಲ್ಲಿ ಬಿದ್ದಿದ್ದೆನು" ಎಂದು ದಾರಾಶಹನು ಕಣ್ದೆರೆದವನಾಗಿ ನುಡಿದನು.

ಇಲಿಯು ಬಿಲದ ಬಾಯಿಗೆ ಸ್ವಸ್ಥವಾಗಿ ಕುಳಿತ ಬೆಕ್ಕಿನಂತೆ ಔರಂಗಜೇಬನು ಗೋವಳಕೊಂಡದ ಕೋಟೆಗೆ ಮುತ್ತಿಗೆ ಹಾಕಿಕೊಂಡು, ಶತ್ರುಗಳು ನಿಸ್ಸಂದೇಹವಾಗಿ ಕೈವಶರಾಗುವರೆಂಬ ನೆಚ್ಚಿಗೆಯಿಂದ ಯಥಾಸುಖವಾಗಿ ಕುಳಿತುಕೊಂಡಿದ್ದನು. ರಾತ್ರಿಯಲ್ಲಿ ಮೀರಜುಮ್ಲಾನೊಡನೆ ಆಪ್ತಾಲೋಚನಗೈಯುತ್ತಲೂ ತನ್ನ ಪಕ್ಷದವರಿಗೆ ಪತ್ರಪಳಿಗೆಗಳನ್ನು ಬರೆಯುತ್ತಲೂ, ಹಗಲು ಬೇಟೆ, ಆಟನೋಟ, ಆಹಾರವಿಹಾರಗಳಲ್ಲಿಯೂ ಆ ದೃಪ್ತಾತ್ಮನಾದ ಸುಲ್ತಾನನು ಕಾಲಕಳೆಯುತ್ತ ಚನ್ನಾಗಿದ್ದನು. ಹೀಗೆ ಔರಂಗಜೇಬನು ಮನೋಲ್ಲಾಸದ ಸುಖಮಯವಾದ ಸ್ಥಿತಿಯಲ್ಲಿ ಒಂದು ರಾತ್ರಿ ಮಲಗಿರಲು ಮಧ್ಯರಾತ್ರಿಯ ಸಮಯದಲ್ಲಿ ತನ್ನ ಪರ್ಯಂಕದ ಬಳಿಯಲ್ಲಿಯೇ ನೂಪುರ ಕಂಕಣಗಳ ಝಣತ್ಕಾರದೊಂದಿಗೆ ಯಾರೋ ನರ್ತಿಸುತ್ತಿರುವಂತೆ ಭಾಸವಾಗಿ ಅವನು ಅರೆಮರೆ ಎಚ್ಚತ್ತವನಾಗಿ ಕಣ್ದೆರೆದು ನೋಡಿದನು. ಅಪ್ಸರೆಗಿಂತಲೂ ರೂಪವತಿಯಾದ ತರುಣಿಯೋರ್ವಳು ನಿಜವಾಗಿ ನರ್ತಿಸುತ್ತಲೇ ಇದ್ದಳು. "ಬಿಚ್ಚುಗತ್ತಿಯ ಕಾವಲುಗಾರರು ಕಣ್ಣಿವೆ ಬಡಿಯದಲೆ ನನ್ನ ಶಯ್ಯಾಗೃಹವನ್ನು ಕಾಯುತ್ತಿರಲು ಈ ಲಲಿತಾಂಗಿಯು ಒಳಗೆ ಬಂದದ್ದು ಹೇಗೆ? ಸ್ವಪ್ನವೇನು?!! ಸ್ವಪ್ನಗಳಲ್ಲಿ ವಿಲಕ್ಷಣವಾದ ಸ್ಥಲಾಂತರ ಸ್ಥಿತ್ಯಂತರಗಳು ಕಂಡುಬರುವದುಂಟು. ಇದೇ ನಾನು ಮಲಗಿದ ಪರ್ಯಂಕವು; ಇವೇ ಹಾಸಿಗೆ ಹೊದಿಕೆಗಳು; ಅದೇ ದೀಪ, ಅವೇ ಸುತ್ತಲಿಸಿರಿದ ವಸ್ತುಗಳು! ಸ್ವಪ್ನವಿದಲ್ಲ! ಆದರೆ ಈ ರಮಣಿ

ಯಾರು ?" ಎಂದು ಆಲೋಚಿಸಿ ಔರಂಗಜೇಬನು ಆ ನೂತನಾಂಗಿಯನ್ನು ಸ್ವಲ್ಪ ಜದರಿಸಿ "ನೀನಾರು? ಇಲ್ಲಿಗೇತಕ್ಕೆ ಬಂದೆ? ಬಂದದ್ದಾದರೂ ಹೇಗೆ?" ಎಂದು ಕೇಳಿದನು.

ಆ ನರ್ತಕಿಯು ತಾಳಗತ್ತಿನ ಮೇಲೆ ಗಹಗಹಿಸಿ ನಗುತ್ತ ನರ್ತಿಸಿದಳೇ ಹೊರತಾಗಿ ಮಾತಾಡಲಿಲ್ಲ. ಔರಂಗಜೇಬನು ಕಿಂಚಿತ್ ಕ್ರುದ್ಧನಾಗಿ ಪರ್ಯಂಕದಲ್ಲಿಯೇ ಎದ್ದು ಕುಳಿತು "ಯಾಕೆ ಮಾತಾಡಲಿಕ್ಕೆ ಬಾಯಿಯಿಲ್ಲವೇನು? ನೀನಾರೆಂಬದನ್ನು ಹೇಳುವಿಯೋ ಇಲ್ಲವೆ ನಿನ್ನನ್ನು ಕಾವಲುಗಾರರ ವಶದಲ್ಲಿ ಕೊಡಲೋ?" ಎಂದು ಕೇಳಿದನು ಆ ಗಾಡಿಗಾರ್ತಿಯು ಭೀತಿಯ ಲೇಶವನ್ನಾದರೂ ತಳಿಯದೆ "ಏನೆಂದಿರಿ? ಔರಂಗಜೇಬ ಸುಲ್ತಾನರ ಪ್ರೀತಿ ಪಾತ್ರಳನ್ನು ಕಾವಲುಗಾರರು ಕಣ್ಣೆತ್ತಿಯಾದರೂ ನೋಡಬಲ್ಲರೆ? ಕರೆಯಿರಿ ನೋಡೋಣ!" ಎಂದು ನುಡಿದವಳೇ ಮತ್ತೆ ಗಹಗಹಿಸಿ ನಕ್ಕಳು.

ಹೀರಾಸುಲ್ತಾನೆಯ ಸುಮನೋಹರವಾದ ಸವಿನುಡಿಯ ಗುರುತು ಹತ್ತಿದ ಕೂಡಲೆ ಔರಂಗಜೇಬನು ಪರ್ಯಂಕದಿಂದ ಟಣ್ಣನೆ ಹಾರಿ ಬಂದು ಆ ಮೋಹನಾಂಗಿಯ ಮುಖಾವರಣವನ್ನು ಹರಿದೊಗೆದು ಪ್ರೇಮದುಬ್ಬಿನಿಯಿಂದ ಅವಳನ್ನು ಒಳಿತಾಗಿ ಬಿಗಿದಪ್ಪಿಕೊಂಡು ಅವಳ ಬಿಂಬಾಧರವನ್ನು ಯಥೇಷ್ಟವಾಗಿ ಚುಂಬಿಸಿದನು. ಆಲಿಂಗದ ರಭಸವು ತುಸು ಕಡಿಮೆಯಾದ ಬಳಿಕ ಆ ರಾಜ-ರಾಣಿಯರು ಪರ್ಯಂಕದಲ್ಲಿ ಜೋಡಿನಿಂದ ಕುಳಿತುಕೊಂಡರು.

"ಹೀರಾ ಸುಲ್ತಾನಾ, ಇದೇನು ಸಾಹಸವು? ಸುದ್ದಿ ಸಮಾಚಾರಗಳಿಲ್ಲದೆ ನೀನೊಮ್ಮಿಂದೊಮ್ಮೆ ಆಗ್ರಾಪಟ್ಟಣದಿಂದ ಇಲ್ಲಿಗೇಕೆ ಬಂದಿ?" ಎಂದು ಆ ನರೇಂದ್ರನು ಸುರಾಂಗನಾ ಸದೃಶಳಾದ ತನ್ನ ಪ್ರಿಯತಮೆಯ ಗದ್ದವನ್ನು ಲೀಲೆಯಿಂದ ಹಿಡಿದು ಕೇಳಿದನು.

ಹೀರಾಸುಲ್ತಾನೆಯು ಮಂದಸ್ಮಿತೆಯಾಗಿ "ರೋಶನಾರಾ ಬೇಗಮ್‌ರೂ ನಾನೂ ಒಂದು ರಾಜಕಾರಣವನ್ನು ಆಲೋಚಿಸಿ ನಮ್ಮೀರ್ವರ ಅಭಿಪ್ರಾಯವನ್ನು ನಿಮಗೆ ಅರುಹಲು ನಾನು ಸಾಹಸದೊಂದಿಗೆ ಇಲ್ಲಿಗೆ ಬಂದೆನು." ಎಂದು ಹೇಳಿದಳು.

"ರೋಶನಾರೆಯು ಪತ್ರಗಿತ್ರವನ್ನೇನಾದರೂ ಕೊಟ್ಟಿರುವಳೇನು ?"

"ನನ್ನ ಮುಖದಲ್ಲಿರುವ ನಾಲಿಗೆಯೇ ರೋಶನಾರಾ ಬೇಗಮ್‌ರು ಕೊಟ್ಟ ಪತ್ರವು. ಪತ್ರದ ಮುದ್ರೆಯನ್ನಂತೂ ಆಗಲೇ ನೀವು ನಿಮ್ಮ ದಂತಚ್ಛದಿಂದ ಒಡೆದುಬಿಟ್ಟಿರುವಿರಿ. ಹೇಗೆ ಒಡೆದಿರೋ ಹಾಗೆಯೇ ಓದಿಕೊಳ್ಳಿರಿ ಬೇಕಾದರೆ.'' ಎಂದು ಆ ಒಯ್ಯಾರೆಯು ಮೋಹಸಂಜನಕವಾದ ಮೃದುಹಾಸವನ್ನು ತಳೆದು ನುಡಿದಳು.

ಔರಂಗಜೇಬನು ವಿನೋದದಿಂದ ನಕ್ಕು "ಅಧರದ ಮುಟ್ಟಿಗೇ ನಮ್ಮ ಜ್ಞಾನವು. ಚಪಲತೆಯು ಜಿಹ್ವೆಯನ್ನು ತಡವಿ ಪಾರಾಗುವಷ್ಟು ವಿದ್ಯೆಯನ್ನು ನಮ್ಮ ಗುರುಗಳಾದ ನೀವು ಕಲಿಸಲೇ ಇಲ್ಲ. ರೋಶನಾರೆಯು ಏನು ಹೇಳಿರುವಳು ?"

"ಗೋವಳಕೊಂಡದ ರಾಜ್ಯವು ನಿಮ್ಮ ಹಸ್ತಗತವಾದರೆ ನಿಮ್ಮ ಪ್ರಾಬಲ್ಯವು ಹೆಚ್ಚಾಗಿ ತಮ್ಮ ಹಿತಕ್ಕೆ ಹಾನಿ ತಟ್ಟುವದೆಂಬ ವಿಚಾರದಿಂದ, ಗೋವಳಕೊಂಡದ ರಾಜ್ಯಕ್ಕೆ ಅಪಾಯವಾಗದಂತೆ ನಿಮ್ಮ ಸೈನ್ಯವನ್ನು ನೀವು ಮರಳಿ ತೆಗೆದುಕೊಳ್ಳತಕ್ಕದ್ದೆಂದು ದಾರಾಸುಲ್ತಾನರು ನಿಮಗೆ ಆಜ್ಞಾಪತ್ರವನ್ನು ಬರೆಸಿದ್ದಾರೆ. ಪತ್ರ ಮುಟ್ಟಿದ ದಿವಸವೇ ನೀವು ಮುತ್ತಿಗೆಯನ್ನು ತೆಗೆಯದಿದ್ದರೆ ಮುರಶಿದ್ ಕುಲಿಖಾನರು ದೊಡ್ಡ ಸೈನ್ಯದೊಂದಿಗೆ ಬಂದು ನಿಮ್ಮ ಪಾರುಪತ್ಯವನ್ನು ಮಾಡತಕ್ಕವರು.''

"ಹೀಗೇನು ?" ಎಂದು ಔರಂಗಜೇಬನು ಆಶ್ಚರ್ಯದಿಂದಲೂ ವ್ಯಸನದಿಂದಲೂ ಉದ್ಗಾರ ತೆಗೆದನು.

"ಅಹುದು. ನಾಳೆ ನಾಡಿದ್ದು ರಾಜಶಾಸನವು ನಿಮಗೆ ತಲ್ಪುವದು. ಅಷ್ಟರಲ್ಲಿ ಈ ಮುತ್ತಿಗೆಯಿಂದ ಸಾಧಿಸುವಷ್ಟು ಕಾರ್ಯವನ್ನು ನೀವು ಸಾಧಿಸಿಕೊಳ್ಳಬೇಕು. ಕುಲೀಖಾನರು ಬಂದು ನಿಮ್ಮ ಬಲವನ್ನು ಮುರಿದರೆ ಮುಂದಿನ ಕೆಲಸಗಳೆಲ್ಲ ಕೆಟ್ಟುಹೋಗುವವೆಂದು ಶಾ-ಇಸ್ತೇಖಾನ, ದಾನಿಶ್‌ಮಂದಖಾನ ಮುಂತಾದವರ ಮತವು.''

ಒಳ್ಳೇ ಸಮಯಕ್ಕೆ ಈ ಸುದ್ದಿಯನ್ನು ತಂದಿ ಪ್ರಿಯಳೇ!'' ಎಂದು ಹೀರೆಯನ್ನು ಔರಂಗಜೇಬನು ಚುಂಬನಗಳಿಂದ ಸಂಭಾವಿಸಿದನು.

ಆಮೇಲೆ ಔರಂಗಜೇಬನು ಕೆಲಹೊತ್ತು ವಿಚಾರಗಳಲ್ಲಿ ನಿಮಗ್ನ

ನಾಗಿ ಕುಳಿತುಕೊಂಡನು. ಹೀಗೆ ವಿಚಾರಗಳಲ್ಲಿ ಮುಳುಗಿರುವ ಆ ಕಲ್ಪಕನ ಮುಖಮುದ್ರೆಯು ಒಳ್ಳೇ ಗಂಭೀರವಾಗಿ ತೋರುತ್ತಿರುವ ದರಿಂದ ಅವನ ಪ್ರೇಮಾಸ್ಪದಳಾದ ಹೀರಾ ಸುಲ್ತಾನಿಗೆ ಕೂಡ ಅವನನ್ನು ಮಾತಾಡಿಸಲು ಧೈರ್ಯ ಸಾಲಲಿಲ್ಲ. ಸಿಟ್ಟಿನಿಂದ ಅವನೊಮ್ಮೆ ತನ್ನ ಮುಷ್ಟಿಯಿಂದ, ಪರ್ಯಂಕವು ಮುರಿದು ಬೀಳುವಂತೆ ಅದನ್ನು ಒಳಿ ತಾಗಿ ಗುದ್ದಿದನು. "ಬದ್‌ಮಾಷ (ಕುಮಾರ್ಗಿಗಳೆ) ನಿಮ್ಮ ಸ್ವಾರ್ಥದ ಚಿಂತೆಗಾಗಿ ಸಾಮ್ರಾಜ್ಯವನ್ನು ಹಬ್ಬಿಸಲು ನಾನು ಮಾಡಿದ ಮಹ ತ್ಕಾರ್ಯಕ್ಕೆ ವಿಘ್ನವನ್ನು ತಂದಿರಾ! ಒಳ್ಳೇದು!!" ಎಂದೊಮ್ಮೆ ಉದ್ಗಾರ ತೆಗೆದನು. ಗಡ್ಡದ ಮೇಲೆ ಕೈಹಾಕಿ 'ಹೀಗೆ' 'ಹೀಗೆ' ಎಂದು ಅವನು ಮತ್ತೇನೋ ಆಲೋಚಿಸಿದನು. ಸಿಂಹನ ಹೆಂಡತಿ ಯಾಗಲಿಚ್ಛಿಸಿದ ಇಲಿಯಂತೆ, ಹೀರಾ ಸುಲ್ತಾನೆಯು ತಾನು ಚತುರಳೂ, ರಾಜಕಾರಣಗಳಲ್ಲಿ ಓಡಾಡಿದವಳೂ ಆಗಿದ್ದರೂ, ಹುದುಗಿಕೊಂಡು ಅವನ ಕಣ್ಣಿಗೆ ಕಣ್ಣಿಟ್ಟರೇನಾಗುವದೋ ಎಂದು ಸುಮ್ಮನೆ ನೋಡುತ್ತ ಕುಳಿತಿ ದ್ದಳು. ಅರ್ಧ ತಾಸು ಔರಂಗಜೇಬನ ವಿಚಾರಸಮಾಧಿಯು ನಡೆಯಿತು. ಬಳಿಕವನು ಮನಸ್ಸಂತಾಪವನ್ನು ಕಳಕೊಳ್ಳಬೇಕಾಗಿ ಹೀರೆಯನ್ನು ಆತುರದಿಂದೆತ್ತಿ ಅವಳ ಮೃದುತರವಾದ ಕಪೋಲವು ಬಿಸಿಯಾಗಿ ಸುಡು ತ್ತಿರುವ ತನ್ನ ಗಲ್ಲಕ್ಕೆ ತಗಲುವಂತೆ ಮಾಡಿ ಅಪ್ಪಿಕೊಂಡು ಶೀತೋಷ್ಣ ವಾದ ಗಲ್ಲಗಳ ಸರಿಬೆರಿಕೆಯಾಯಿತೆಂದು ಕಂಡ ಬಳಿಕ ಅವನು ಪ್ರೇಮ ದಿಂದ ಹೀರೆಯನ್ನು ಚುಂಬಿಸಿ "ಹೀರಾ, ನೀನು ಇಲ್ಲಿಯ ವರೆಗೆ ಹೇಗೆ ಬಂದಿ, ಯಾರ ಸಂಗಡ ಬಂದಿ, ಮಾರ್ಗದಲ್ಲಿ ನಿನಗೆ ತೊಂದರೆಗಳು ಎಷ್ಟಾದವು ಮುಂತಾದ ವರ್ತಮಾನವನ್ನೇ ಹೇಳಲಿಲ್ಲವಲ್ಲ?" ಎಂದು ಕೇಳಿದನು.

ಔರಂಗಜೇಬನ ಗಾಢತರವಾದ ಆಲಿಂಗನದ ರಭಸದಿಂದ ಹೀರಾ ಸುಲ್ತಾನೆಯು ಪ್ರೇಮಪರವಶಳಾಗಿ ಹೋಗಿದ್ದಳು. ತನ್ನನ್ನು ಆಶ್ರಯಿಸಿ ಜಗಜ್ಜೇತೃವಾದ ವೀರನು ಮನಃಸಂತಾಪವನ್ನು ಕಳೆದುಕೊಂಡನೆಂದು ನೆನೆದು ತಾನು ಸ್ತ್ರೀಜನ್ಮಕ್ಕೆ ಬಂದದ್ದು ಇಂದಿಗೆ ಸಾರ್ಥಕವಾಯಿತೆಂದು ಅವಳು ನೆನೆದಳು. ಔರಂಗಜೇಬನ ಪ್ರಶ್ನಕ್ಕೆ ಉತ್ತರವನ್ನು ಕೊಡದೆ

ಹೀರೆಯು ಅವನನ್ನು ಮತ್ತಿಷ್ಟು ಬಿಗಿಯಾಗಿ ಅಪ್ಪಿಕೊಂಡಳು. ಇಷ್ಟು ಮಾತ್ರದಿಂದಲೇ ಔರಂಗಜೇಬನು ಕೃತಾರ್ಥನಾಗಿ ಸಂತೋಷದಿಂದ— "ಹೀರಾ, ಜಗಚ್ಚಾಲಕನು ನಿನ್ನಂಥ ವನಿತಾಮಣಿಗಳನ್ನು ನಿರ್ಮಿಸಿ ನಮ್ಮ ಶ್ರಮಗಳ ಪರಿಹಾರವನ್ನು ಮಾಡುತ್ತಾನೆಂದೇ ನಾವು ರಣರಂಗದ ಘೋರತರವಾದ ಪ್ರಸಂಗಗಳನ್ನು ದಾಟುತ್ತೇವೆ. ಅದಿರಲಿ! ನೀನು ನಿನ್ನ ಸಮಾಚಾರವನ್ನು ಹೇಳಲೇ ಇಲ್ಲ!" ಎಂದು ಕೇಳಿದನು.

"ನಾಳಿಗೆ ಹೇಳಿದರೆ ಆಗದೇನು? ನಾನಂತೂ ಸುರಕ್ಷಿತಳಾಗಿ ಬಂದಿರುವೆನು" ಎಂದು ಹೇಳಿ ಹೀರೆಯು ಔರಂಗಜೇಬನ ಮುಖವನ್ನು ನೋಡುತ್ತ ಮಂದಹಾಸಗೈದಳು.

ರಾತ್ರಿ ಇರುವದರೊಳಗಾಗಿಯೇ ಔರಂಗಜೇಬನು ಮೀರಜುಮ್ಲಾನನ್ನು ಕರೆಸಿದನು. ಅವನೂ ಔರಂಗಜೇಬನೂ ಕೂಡಿ ಬೆಳತನಕ ಆಲೋಚನಗೈದರು.

ಮರುದಿವಸ ಪ್ರಾತಃಕಾಲದಲ್ಲಿಯೇ ಔರಂಗಜೇಬನು ಕೋಟೆಯಲ್ಲಿರುವ ಅಬ್ದುಲ್ಲಾಶಹನಿಗೆ ಪತ್ರವನ್ನು ಬರೆದು "ಇಂದು ಸಾಯಂಕಾಲದೊಳಗಾಗಿ ನೀವು ನಮಗೆ ಶರಣಾಗತರಾದರೆ ವಿಶೇಷವಾದ ಹಾನಿ ತಟ್ಟದೆ ನಿಮ್ಮ ರಾಜ್ಯವು ನಿಮಗೆ ಉಳಿಯುವದು. ವಿಲಂಬವಾದರೆ ಅನೇಕ ಸಧನಗಳಿಂದ ಕೋಟೆಯನ್ನು ಕೆಡವಿ ನೆಲಸಮ ಮಾಡಿ ನಿಮ್ಮನ್ನು ಸ್ವರ್ಗಕ್ಕೆ ಅಟ್ಟಿ ಸಾಮಗ್ರವಾದ ನಿಮ್ಮ ರಾಜ್ಯವನ್ನು ದಿಲ್ಲಿಯ ಸಾಮ್ರಾಜ್ಯಕ್ಕೆ ಜೋಡಿಸಿಬಿಡುವೆವು." ಎಂದು ಹೇಳಿಕಳಿಸಿದನು.

ಕೋಟೆಯ ಬಲದಲ್ಲಿಯಾದರೂ ಜೀವವುಳಿದಿದ್ದಿಲ್ಲ! ಅನ್ನಸಾಮಗ್ರಿಯೆಲ್ಲ ತೀರಿಹೋಗಿತ್ತು. ನಾಳಿಗೆಯೇ ಅಲ್ಲಿಯವರಿಗೆಲ್ಲ ಏಕಾದಶಿಯು! ಕಳೆದ ಹತ್ತೆಂಟು ದಿವಸಗಳಲ್ಲಿ ಅವರು ಅರಹೊಟ್ಟೆ ಉಂಡವರಾಗಿದ್ದರಿಂದ ಅವರಲ್ಲಿ ಅನೇಕವಾದ ರೋಗಗಳ ಪ್ರಾದುರ್ಭಾವವಾಗಿತ್ತು. ಔರಂಗಜೇಬನ ಪತ್ರ ಮುಟ್ಟಿದ ಕ್ಷಣವೇ ಕುತುಬಶಹನು ಒಪ್ಪಿಗೆಯೆಂದು ಬರಕೊಂಡನು. ಮಾಡುವನೇನು!

ಸಂಜೆಯೊಳಗಾಗಿ ಒಪ್ಪಂದದ ಕ್ರಮವನ್ನೆಲ್ಲ ಮುಗಿಸಿಕೊಂಡು ಔರಂಗಜೇಬನು ದಾರಾಶಹನಿಗೆ ಯುದ್ಧದ ಕಾರಣವನ್ನು ಬರೆದು ಒಪ್ಪಂದ

ಪತ್ರಿಕೆಯನ್ನೂ ಅದರ ಸಂಗಡಲೇ ಕಳಿಸಿಕೊಟ್ಟುಬಿಟ್ಟನು. ಪ್ರತಿಷೇಧ ದ್ಯೋತಕವಾದ ರಾಜಾಜ್ಞೆಯು ಬರುವದಕ್ಕೆ ಮುಂಚಿತವಾಗಿ ಮಾಡಿದ ಒಪ್ಪಂದಕ್ಕೆ ದಿಲ್ಲಿಯ ಚಕ್ರವರ್ತಿಯಾಗಲಿ, ಆತನ ಪ್ರತಿನಿಧಿಯಾಗಲಿ ಒಪ್ಪಿಕೊಳ್ಳಲೇಬೇಕಷ್ಟೇ? ಸಂಪೂರ್ಣವಾಗಿಲ್ಲದಿದ್ದರೂ ತಕ್ಕಮಟ್ಟಿಗೆ ಯಾದರೂ ಔರಂಗಜೇಬನ ಕಾರ್ಯವು ಸಾಧಿಸಿತು.

ಒಪ್ಪಂದದ ನಿಯಮಗಳು :—

(೧) ಅಬ್ದುಲ್ಲಾಶಹನು ತನ್ನ ಖಜಾನಿಯಲ್ಲಿದ್ದಷ್ಟು ಮಣಿ ಮುಕ್ತಾಧನಕನಕಗಳನ್ನೆಲ್ಲ ಔರಂಗಜೇಬನಿಗೆ ಆ ಯುದ್ಧದ ವೆಚ್ಚಕ್ಕಾಗಿ ಕೊಡಬೇಕು.

(೨) ಮೀರಜುಮ್ಲಾನು ತನ್ನ ಕುಟುಂಬದವರನ್ನೂ ಆಸ್ತಿಯನ್ನೂ ತೆಗೆದುಕೊಂಡು ಬೇಕಾದಲ್ಲಿಗೆ ಹೋಗಲು ಪ್ರತಿಬಂಧವಿರಲಾಗದು.

(೩) ಔರಂಗಜೇಬನ ಹಿರಿಯ ಮಗನಾದ ಸುಲ್ತಾನ ಮಹಮ್ಮದ ನಿಗೆ ಅಬ್ದುಲ್ಲಾನು ತನ್ನ ಮಗಳನ್ನು ಕೊಟ್ಟು ಮದುವೆ ಮಾಡುವದಲ್ಲದೆ ಅಬ್ದುಲ್ಲಾನ ಪಶ್ಚಾತ್ ಮಹಮ್ಮದನೇ ಗೋವಳಕೊಂಡದ ರಾಜ ನಾಗಬೇಕು.

(೪) ರಾಮಗಿರಿಯ ಕೋಟೆಯನ್ನೂ ಅದರ ಕೆಳಗಿನ ಪ್ರಾಂತ ವನ್ನೂ ಅಬ್ದುಲ್ಲಾನು ಸುಲ್ತಾನ ಮಹಮ್ಮದನಿಗೆ ವರದಕ್ಷಿಣೆಯಾಗಿ ಕೊಡಬೇಕು.

(೫) ಗೋವಳಕೊಂಡದ ಟಂಕಸಾಲೆಯಲ್ಲಿ ಇನ್ನು ಮುಂದೆ ಶಹಾಜಹಾನ್ ಬಾದಶಹನ ಹೆಸರಿನ ನಾಣ್ಯಗಳನ್ನೇ ಮುದ್ರಿಸಬೇಕು.

ಇದಕ್ಕೂ ಇನ್ನೇನು ಬೇಕು? ಪಾಪ, ಸುಲ್ತಾನ ಮಹಮ್ಮದನು ಮುಂದೆ ಔರಂಗಜೇಬನ ಸಂಶಯಕ್ಕೀಡಾಗಿ ಬಂದಿಯಾಗಿ ಗ್ವಾಲೇರಿಯ ಕಾರಾಗ್ರುಹದಲ್ಲಿ ಮರಣಹೊಂದಿದನು. (೧೬೭೬) ಬದುಕಿ ಉಳಿದು ಗೋವಳಕೊಂಡದ ಸುಲ್ತಾನನಾಗುವಷ್ಟು ದೈವವೇ ಅವನದಿದ್ದಿದ್ದಿಲ್ಲ.

## ೨೦

ಬಾದಶಹನ ಪ್ರಕೃತಿಯು ದಿನಕ್ಕೊಂದು ಪರಿಯಾಗಿ ಕೆಡುತ್ತ ಬಂದು ಅವನು ಕೇವಲ ನಿಶ್ಚೇಷ್ಟಾವಸ್ಥೆಯನ್ನು ಹೊಂದಿದನು. ಯಾವಾಗಲೋ ಒಮ್ಮೊಮ್ಮೆ ಕಣ್ಣು ತೆರೆದು ನೋಡುತ್ತಿರುವದರಿಂದಲೇ ಅವನು ಜೀವಂತನಾಗಿರುವನೆಂದು ನಂಬಬಹುದಾಗಿತ್ತು. ತೆರೆದು ನೋಡಿದರೂ ಸಮೀಪದಲ್ಲಿರುವವರು ಯಾರೆಂಬುದು ಅವನಿಗೆ ತಿಳಿಯುತ್ತಿದ್ದಿಲ್ಲ. ಮಂತ್ರಿ ಸೇನಾನಾಯಕ ಅಮೀರ್ ಮುಂತಾದವರಿಗೆ ರಾಜದರ್ಶನದ ಪ್ರತಿಬಂಧವಾಗಿ ಹೋಗಿತ್ತು. ಬಾದಶಹರು ತೀರಿಕೊಂಡರೆಂದು ಯಾರೋ ಸುಳ್ಳು ಸುದ್ದಿಯನ್ನು ಹುಟ್ಟಿಸಿದರು. ಆಗ್ರಾ ಪಟ್ಟಣದಲ್ಲೆಲ್ಲ ಹಾಹಾಕಾರವೆದ್ದಿತು! ಊರಲ್ಲಿಯ ಅಂಗಡಿಗಳೆಲ್ಲ ಇಕ್ಕಿದವು. ಉತ್ಸವ ಮಂಗಲಕಾರ್ಯಗಳೆಲ್ಲ ನಿಂತವು. ಹೀಗೆ ನಾಲ್ಕಾರು ದಿವಸಗಳು ಕಳೆದರೂ ಬಾದಶಹರ ಪ್ರೇತಸಂಸ್ಕಾರವೇಕಾಗಲಿಲ್ಲ? ಬದುಕಿರುವರೇನು ಮತ್ತೆ? ಮುಖ್ಯ ವಜೀರನಾದ ಶಾಇಸ್ತೇಖಾನನು ಮಾತ್ರ ಶಹಾಜಾನನು ಬದುಕಿರುವನೆಂದು ಜನರಿಗೆ ಆಶ್ವಾಸನವನ್ನಿತ್ತ ಮೂಲಕ ಮತ್ತೆ ದಿನದ ವ್ಯಾಪಾರಗಳೆಲ್ಲ ಯಥಾಸ್ಥಿತವಾಗಿ ನಡೆದವು.

ಬಾದಶಹರು ತೀರಿಕೊಂಡಿರುವರೆಂಬ ನಂಬಿಗೆಯಿಂದ ಸುಜಾ, ಮುರಾದ, ಔರಂಗಜೇಬರ ಪಕ್ಷದವರಾಗಿದ್ದ ಆಗ್ರಾನಿವಾಸಿಗಳಾದ ಸರದಾರರು ತಮತಮಗೆ ಇಷ್ಟರಾದ ರಾಜಪುತ್ರರಿಗೆ ಸೈನ್ಯದೊಂದಿಗೆ ಆಗ್ರಾಪಟ್ಟಣದ ಮೇಲೆ ಸಾಗಿಬಂದರೆ ದಿಲ್ಲಿಯ ಸಿಂಹಾಸನವು ಅವರ ಸ್ವಾಧೀನವಾಗುವದೆಂದು ಅಗತ್ಯದಿಂದ ಹೇಳಿಕಳಿಸಿದರು. ಪ್ರಥಮಾಗತನೇ ಪೃಥ್ವೀಪತಿಯೆಂಬ ನಾಣ್ಣುಡಿಯನ್ನು ಲಕ್ಷಿಸಿ ಸುಜಾ ಔರಂಗಜೇಬ ಮುರಾದರು ಸರ್ವಪ್ರಯತ್ನಗಳಿಂದ ಧನಸೇನೆಗಳನ್ನು ಕೂಡಿಸಿಕೊಂಡು ಆಗ್ರಾ ಪಟ್ಟಣದ ಮೇಲೆ ಸಾಗಿಹೋಗುವ ಯತ್ನ ನಡಿಸಿದರು.

ಸಂಪತ್ತಿನಿಂದ ತುಂಬಿದ ಬಂಗಾಲದ ಅಧಿಪತಿಯಾಗಿದ್ದ ಸುಜಾ ಸುಲ್ತಾನನು ಆ ಪ್ರಾಂತದಲ್ಲಿರುವ ಚಿಕ್ಕದೊಡ್ಡವರಾದ ರಾಜರನ್ನೂ ಜಮೀನದಾರರನ್ನೂ ನಿರ್ದಯವಾಗಿ ಸುಲಿದು ಹೇರಳವಾದ ಹಣವನ್ನು

ಕೂಡಿಸಿಕೊಂಡು ರಾಜಧಾನಿಯ ಮೇಲೆ ಸಾಗಿ ಹೋಗಲು ಹೊರಟೇ ಬಿಟ್ಟನು. ಈ ವರ್ತಮಾನವು ದಾರಾ ಸುಲ್ತಾನನಿಗೆ ತಿಳಿದ ಕೂಡಲೆ ಬಾದಶಹನ ಹಸ್ತಮುದ್ರಾ ಸಮೇತವಾದ (ಐದು ಬೆರಳುಗಳ ಸಮೇತವಾಗಿ ಸಂಪೂರ್ಣವಾದ ಹಸ್ತವನ್ನೇ ಆಜ್ಞಾಪತ್ರದ ಮೇಲೆ ಆ ಕಾಲದಲ್ಲಿ ಮೂಡಿಸುತ್ತಿದ್ದರು.) ಆಜ್ಞಾಪತ್ರವನ್ನು ಬರೆಯಿಸಿ ಸುಜಾ ಸುಲ್ತಾನನಿಗೆ ಆಗ್ರಾಪಟ್ಟಣದ ಕಡೆಗೆ ಬರಬಾರದೆಂಬ ಬಗ್ಗೆ ಶಾಸನಗೈದನು. ಆದರೆ ಸುಜಾ ಸಾಹೇಬನು ಇದೆಲ್ಲ ದಾರಾನ ಕೃತ್ರಿಮತನವೆಂದೂ ಬಾದಶಹರು ನಿಜವಾಗಿ ತೀರಿಕೊಂಡಿರುವರೆಂದೂ ಹೇಳಿ ಮುಂದಿಟ್ಟ ಕಾಲನ್ನು ಹಿಂದಿಡಲಿಲ್ಲ.

ಔರಂಗಜೇಬನಾದರೂ ಬಾದಶಹರು ತೀರಿಕೊಂಡರೆಂಬ ಸುದ್ದಿಯನ್ನು ಕೇಳಿ, ಸುಜಾ ಸಾಹೇಬರು ಯುವರಾಜರ ವಿರುದ್ಧವಾಗಿ ಆಗ್ರಾಪಟ್ಟಣದ ಮೇಲೆ ಅಭಿಯೋಗ ಮಾಡಬರುತ್ತಿರುವನಾದ್ದರಿಂದ ಆ ಸುಜಾ ಸುಲ್ತಾನನ ಪಾರುಪತ್ಯಕ್ಕಾಗಿ ತಾನೂ ಹೊರಡತಕ್ಕವನೆಂದು ಹೇಳಿ ಎಲ್ಲ ಸೈನ್ಯಾಧಿಕಾರಿಗಳು ತನ್ನೊಡನೆ ಹೊರಡತಕ್ಕದ್ದೆಂದು ಡಂಗುರ ಸಾರಿದನು. ಆದರೆ ದಿಲ್ಲಿಯ ಸಿಂಹಾಸನದ ಪ್ರಾಪ್ತಿಗಾಗಿ ಮಾಡತಕ್ಕ ಮಹಾಯುದ್ಧಕ್ಕಾಗಿ ಬೇಕಾಗುವಷ್ಟು ಹಣದ ಅಷ್ಟಮಾಂಶವಾದರೂ ಅವನ ಬಳಿಯಲ್ಲಿ ಇದ್ದಿಲ್ಲ. ವಂಚಕನಾದವನಲ್ಲಿ ಸಂಚಯವಿಲ್ಲದಿದ್ದರೂ ಹಂಚಿಕೆಗಳಿಗೇನು ಕೊರತೆಯೇ? ಔರಂಗಜೇಬನು ಗುರ್ಜರ ರಾಷ್ಟ್ರಾಧಿಪತಿಯಾಗಿದ್ದ ತನ್ನ ತಮ್ಮನಾದ ಮುರಾದಬಕ್ಷನಿಗೆ ಒಂದು ಪತ್ರವನ್ನು ಬರೆದನು.

" ಪ್ರಿಯ ಬಂಧುವೆ,

ನಮ್ಮ ಪರಮ ಪೂಜ್ಯರಾದ ತೀರ್ಥರೂಪರು ಮರಣೋನ್ಮುಖರಾಗಿರುವ ದುರ್ವಾರ್ತೆ ಬಂದಿದೆ. ಈ ಸಮಯಕ್ಕೆ ಅವರು ಪರಲೋಕವಾಸಿಗಳಾಗಿದ್ದರೂ ಆಗಿರಬಹುದು! ಜಗನ್ನಿಯಾಮಕನ ಇಚ್ಛೆಗೆ ಉಪಾಯವೇನಿದೆ! ಆಗಲಿ ಇನ್ನು ಮೇಲೆ ದಿಲ್ಲಿಯ ಸಿಂಹಾಸನವು ಯಾರದು? ದಾರಾ ಸುಜಾಶಹರೀರ್ವರೂ ಅಯೋಗ್ಯರು. ಉಳಿದವು ನಾವೀರ್ವರು. ನನ್ನ ಪ್ರಾಣಕ್ಕಿಂತಲೂ ಪ್ರಿಯನಾದ ಬಂಧುವೆ, ನನ್ನಂಥ ಚಿತ್ತವೃತ್ತಿಯ

ವನಿಗೆ ಮಹಾ ಸಾಮ್ರಾಜ್ಯದ ಮುಕುಟಧಾರಣವನ್ನು ಮಾಡುವಂಥ ತೃಷ್ಣೆಯು ಸರ್ವಥಾ ಅನುಚಿತವಾಗಿರುವದು. ಚಕ್ರವರ್ತಿಯೇ ಆಗಲಿಕ್ಕೆ ಹುಟ್ಟಿದವನಾದ ನಿನ್ನಲ್ಲಿ ದಿಲ್ಲಿಯ ಸಿಂಹಾಸನವನ್ನು ಆಕ್ರಮಿಸುವ ಇಚ್ಛೆಯುಂಟಾಗಿದ್ದರೆ ಅದು ಸರ್ವಥಾ ಯೋಗ್ಯವೇ ಸರಿ. ಆದರೆ ದೇವರೇ ನನ್ನ ಮನಸ್ಸಿನಲ್ಲಿ ಫಕೀರವೃತ್ತಿಯನ್ನು ಧರಿಸಲು ಪ್ರೇರಣೆಯನ್ನು ಮಾಡುತ್ತಿರುವಾಗ ರಾಜನಾಗುವ ಹಂಬಲವು ನನಗೇಕೆ? ಆದರೂ ಬಾದಶಹರ ಮಗನೂ ನಿನ್ನ ಪ್ರಿಯ ಬಂಧುವೂ ನಾನಾಗಿರುವದರಿಂದ ನಿನಗೆ ಕೆಲವು ಸೂಚನೆಗಳನ್ನು ಕೊಡದಲೆ ನಾನಿರೆನು. ದಾರಾಶಹನಲ್ಲಿ ರಾಜ್ಯವನ್ನಾಳುವ ಜಾಣತನವು ತಿಲಮಾತ್ರವೂ ಇಲ್ಲ. ಮೇಲಾಗಿ ಅವನು ಸತ್ಯಧರ್ಮಕ್ಕೆ ವಿರೋಧಿಯಾಗಿರುವದರಿಂದ ರಾಜ್ಯದಲ್ಲಿಯ ಪ್ರಮುಖರೆಲ್ಲರಿಗೂ ಬೇಡಾದವನಾಗಿರುವನು. ಸುಜಾ ಸುಲ್ತಾನನಾದರೂ ದಾರಾಶಹನಿಗೆ ಇಮ್ಮಡಿಯಾದ ಹೀನಗುಣದವನು. ಅವನು ಶಿಯಾಪಂಥಕ್ಕೆ ಸೇರಿರುವದರಿಂದ ಹಿಂದುಸ್ಥಾನಕ್ಕೆ ಶತ್ರುವೇ ಆಗಿರುವನಲ್ಲವೆ? ನಮ್ಮೆಲ್ಲರಲ್ಲಿ ರಾಜಲಕ್ಷಣಸಂಪನ್ನನೂ ಸಕಲ ಸ್ವಾಮಿಗುಣೋಪೇತನೂ ಆದವನಾದ ನೀನೊಬ್ಬನೇ ಯೋಗ್ಯನೆಂದು ನಾನು ಹೇಳಿದರೆ ಕೇವಲ ಬಂಧುಪ್ರೇಮಾಂಧನಾಗಿ ನಾನು ಹೇಳಿದೆನೆನ್ನಬೇಡ. ಚನ್ನಾಗಿ ತೂಗಿ ನೋಡಿ ಹೇಳುತ್ತೇನೆ! ಇದು ನನ್ನೊಬ್ಬನ ಅಭಿಪ್ರಾಯವಲ್ಲ. ಮುರಾದಬಕ್ಷ, ನಿನ್ನ ಶೌರ್ಯೌದಾರ್ಯಾದಿ ಉತ್ತಮೋತ್ತಮವಾದ ಗುಣಗಳಿಗೆ ಲುಬ್ಧರಾಗಿ ಎಲ್ಲ ಮಹಾಜನರೂ ಹೀಗೆಯೇ ಹೇಳುತ್ತಿರುವರು. ಇನ್ನು ನನ್ನ (ಔರಂಗಜೇಬನ) ಗತಿಯೇನೆಂದು ನೀನು ಚಿಂತಿಸಬಹುದು. ಅದಕ್ಕೆ ಆಲೋಚನೆ ಬೇಡ! ನನ್ನ ಭಾವೀ ಚಕ್ರವರ್ತಿಯೇ, ನೀನು ಸಿಂಹಾಸನಾಪನ್ನನಾದ ಬಳಿಕ ನಿನ್ನ ಸಾಮ್ರಾಜ್ಯದ ಮೂಲೆಯಲ್ಲಿರುವದೊಂದು ಪವಿತ್ರವಾದ ಸ್ಥಾನದಲ್ಲಿ ವಿಘ್ನಗಳಿಲ್ಲದೆ ನಾನು ನಿಶ್ಚಿಂತನಾಗಿ ಜಪತಪಾದಿಗಳನ್ನು ಮಾಡಿಕೊಂಡಿರುವಂತೆ ಅನುಕೂಲ ಮಾಡಿಕೊಟ್ಟೆಯಾದರೆ ನಾನು ಕೃತಾರ್ಥನಾಗುವೆನು. ಸದ್ಯಕ್ಕೆ ನಾನು ನಿನ್ನ ಮಹತ್ಕಾರ್ಯಕ್ಕೆ ನೆರವಾಗಲು ಸಿದ್ಧನಾಗಿರುವೆನು. ನಿನಗೆ ಮಂತ್ರಾಲೋಚನೆಗಳು ಬೇಕಾದರೆ ಹೇಳಲು ನಾನು ಸಿದ್ಧನು. ಶಸ್ತ್ರಪಾಣಿಯಾಗಿ ಸಹಾಯ ಮಾಡೆಂದರೆ

ಅದಕ್ಕೂ ಸಿದ್ಧನೇ. ದಕ್ಷಿಣದಲ್ಲಿರುವ ಸೇನೆಯನ್ನೆಲ್ಲ ನಿನ್ನ ವಶಕ್ಕೆ ಕೊಡುವೆನು. ನನ್ನಲ್ಲಿರುವ ಅಲ್ಪ ಸ್ವಲ್ಪ ಧನವನ್ನೆಲ್ಲ ನಾನು ನಿನ್ನ ಉಪಯೋಗಕ್ಕಾಗಿ ಕಾದಿಟ್ಟಿರುವೆನು. ಈ ಪತ್ರವನ್ನು ತಂದವನ ಕೂಡ ಒಂದು ಲಕ್ಷ ರೂಪಾಯಿಗಳನ್ನು ನಿನಗೆ ಕಾಣಿಕೆಯಾಗಿ ಕಳಿಸಿದ್ದೇನೆ. ಅದನ್ನು ನೀನು ದಯಮಾಡಿ ಸ್ವೀಕರಿಸಿದರೆ ನಾನು ಧನ್ಯನಾದೆನು.

ಸಮಯವು ಒತ್ತಿಬಂದಿದೆ! ತಿಲಮಾತ್ರವಾದರೂ ವಿಲಂಬ ಮಾಡತಕ್ಕದ್ದಲ್ಲ. ಈ ಪತ್ರ ಕಂಡಾಕ್ಷಣವೇ ನೀನು ಸುರತ ಕೋಟೆಗೆ ಮುತ್ತಿಗೆಯನ್ನಿಕ್ಕಿ ಅದನ್ನು ಸ್ವವಶ ಮಾಡಿಕೊಳ್ಳತಕ್ಕದ್ದು. ಅಲ್ಲಿ ಬಾದಶಹರ ಧನರಾಶಿಯು ಒಟ್ಟಿದೆ."

ಮುರಾದಬಕ್ಷನಾದರೂ ಸುಜಾ ಔರಂಗಜೇಬರು ನಡೆಸಿದ ಉದ್ಯೋಗವನ್ನೇ ನಡೆಸಿದ್ದನು. ಆಗ್ರಾಪಟ್ಟಣದ ಮೇಲೆ ಬೇಗನೆ ಅಭಿಯೋಗ ಮಾಡಿ ತಾನೇ ಬಾದಶಹನಾಗಬೇಕೆಂಬ ಯೋಚನೆಯನ್ನು ಮುರಾದನಿಗೆ ಯಾರಾದರೂ ಕಲಿಸಬೇಕಾಗಿತ್ತೇನು? ಆದರೆ ಅವನಿಗಾದರೂ ಹಣದ ಕೊರತೆಯೇ? ದಾರಾನ ಸೈನ್ಯದೊಡನೆ ಕಾದಿ ಪಾರಾಗುವಷ್ಟು ಸೈನ್ಯವಾದರೂ ಅವನ ಬಳಿಯಲ್ಲೆಲ್ಲಿ? ಮುರಾದನು ದೊಡ್ಡ ಯೋಚನೆಯಲ್ಲಿ ಬಿದ್ದಿದ್ದನು! ಔರಂಗಜೇಬನ ಪತ್ರವನ್ನು ಕಂಡಾಕ್ಷಣವೇ ದೇವರೇ ತನಗೆ ಒಲಿದನೆಂಬ ಅತ್ಯಾನಂದದಿಂದ ಅವನು ಕುಣಿದಾಡಿದನು ಅಣ್ಣನಾದ ಔರಂಗಜೇಬನ ಔದಾರ್ಯವನ್ನೂ ಅವನಲ್ಲಿರುವ ಭ್ರಾತೃಪ್ರೇಮವನ್ನೂ ಅತಿಶಯವಾಗಿ ಕೊಂಡಾಡಿದನು. ಔರಂಗಜೇಬನಂಥ ರಾಜಕಾರಣ ಧುರಂಧರನೂ, ರಣರಂಗಧೀರನೂ ಸೇನಾಸಮೇತನೂ ಆದ ಮಹಾಪುರುಷನ ಸಹಾಯವು ತನಗಿರಲು ತಾನು ಬಾದಶಹನಾಗುವದು ನಿಶ್ಚಯವೇ ಎಂದು ನಂಬಿ ಮುರಾದನು ಒಳ್ಳೇ ವೈಭವದಿಂದ ಮೆರೆಯಲಾರಂಭಿಸಿದನು. ಔರಂಗಜೇಬನ ಪತ್ರವನ್ನು ಜನರಲ್ಲಿ ಪ್ರಕಟ ಮಾಡಿದರೆ ತನಗೆ ಜನಸಹಾಯವೂ ಧನಸಹಾಯವೂ ದೊರಕುವದೆಂದು ತಿಳಿದು ಅವನು ಆ ಪತ್ರವನ್ನು ಕಂಡಕಂಡವರಿಗೆ ತೋರಿಸಿ ಓದಿ ಹೇಳಿದನು. ಆನೆಯ ಮೇಲೆ ಅದನ್ನು ಇರಿಸಿ ಮೆರವಣಿಗೆ ತೆಗೆದನು.

ಮುರಾದ ಸುಲ್ತಾನನ ಸೈನ್ಯಾಧಿಕಾರಿಯಾದ ಶಹಾಅಬ್ಬಾಸನೆಂಬ

ಸರದಾರನು ಮಾತ್ರ ತನ್ನ ಯಜಮಾನನ್ನು ಕುಳ್ಳಿರಿಸಿಕೊಂಡು ಔರಂಗಜೇಬನ ಕಪಟಸ್ವಭಾವವನ್ನು ವಿವರಿಸಿ ಆತನ ಮಾತಿನಲ್ಲಿ ನಂಬಿಗೆಯನ್ನಿಟ್ಟರೆ ಘಾತವಾಗದೆ ಇರಲಾರದೆಂದು ಬಹುಪರಿಯಾಗಿ ಹೇಳಿದನು.

"ಏನು ಹೇಳುವಿ ಶಹಾಅಬ್ಬಾಸ! ಧರ್ಮನಿಷ್ಠನೂ ಸದಾಚಾರ ಸಂಪನ್ನನೂ ರಾಜಕುಮಾರನಾಗಿದ್ದರೂ ಫಕೀರವೃತ್ತಿಯನ್ನು ಅವಲಂಬಿಸಿ ಇರುವವನೂ ಆದ ಔರಂಗಜೇಬ ಸುಲ್ತಾನನು ಒಡಹುಟ್ಟಿದ ತಮ್ಮನಾದ ನನ್ನ ಮೇಲೆ ದ್ರೋಹವನ್ನು ಮಾಡುವನೆಂದರೆ ನಂಬುವದು ಹೇಗೆ? ಇಂದು ನೀನು ಔರಂಗಜೇಬರ ಮೇಲೆ ದೋಷಾರೋಪವನ್ನು ಮಾಡಿದವನು ನಾಳೆ ಸಾಕ್ಷಾತ್ ಪಯಂಗಂಬರರ ಮೇಲೆ ಮಾಡುವಿ! ನಡೆ ಇಂದೆಯೇ ನೀನು ಸುರತ ಪಟ್ಟಣಕ್ಕೆ ಮುತ್ತಿಗೆಯನ್ನಿಡು. ಆ ಕೋಟೆಯನ್ನು ನೀನು ಎಷ್ಟು ದಿವಸಗಳಲ್ಲಿ ತೆಗೆದುಕೊಳ್ಳುವಿಯೋ ನೋಡೋಣ! ನಿನ್ನ ಪರಾಕ್ರಮದ ಪರೀಕ್ಷೆಯಾಗಲಿ!" ಎಂದು ಹೇಳಿ ಮುರಾದನು ಆ ಸರದಾರನನ್ನು ಅತ್ತ ಅಟ್ಟಿದನು.

## ೨೧

ಔರಂಗಜೇಬನೂ ಮೀರಜುಮ್ಲಾನೂ ಕೂಡಿ ಗೋವಳಕೊಂಡದ ಸುಲ್ತಾನನ ಮೇಲೆ ಬಲೆಯೊಗೆದ ಸಂಗತಿಯನ್ನು ಹಿಂದೆ ಹೇಳಿರುವೆವಷ್ಟೆ? ಬಲಾಢ್ಯರಾದ ಈ ಧೂರ್ತರೀರ್ವರೂ ಏಕತ್ರರಾಗಿದ್ದರೆ ಘಾತವೇ ಎಂದರಿತು ದಾರಾಶಹನು ಔರಂಗಜೇಬನಿಗೆ ಒಂದು ಆಜ್ಞಾಪತ್ರವನ್ನು ಬರೆದನು :—

"ಪರರಾಷ್ಟ್ರದವನಾದ ಅಮೀರ ಜುಮ್ಲಾನು ನಿಮ್ಮ ಆಶ್ರಯದಲ್ಲಿ ಏನು ನಿಮಿತ್ತವಾಗಿರುವನು? ಅವನ ಬಳಿಯಲ್ಲಿ ಸೇನೆ ಕೂಡಾ ಇರುವದಾಗಿ ತಿಳಿಯುತ್ತದೆ. ಇಂಥವನಿಗೆ ನೀವು ಆಶ್ರಯವನ್ನು ಕೊಡುವದು ಅಪ್ರಶಸ್ತವಾದ ಮಾತು! ಈ ಪತ್ರವನ್ನು ಕಂಡಾಕ್ಷಣವೇ ಅವನನ್ನು ಇತ್ತ ಕಡೆಗೆ ಕಳಿಸಿಕೊಡಬೇಕು. ಬಾದಶಹರು ಅವನ ಗುಣಾವಗುಣಗಳನ್ನು ಪರೀಕ್ಷಿಸಿ ನೋಡಿ ಮುಂದೆ ಅವನಿಗೆ ಆಶ್ರಯವನ್ನು ಕೊಡಬಹುದೋ ಇಲ್ಲವೋ ನಿರ್ಣಯಿಸುವರು. ಅವನು ಬರಲೊಪ್ಪದಿರಲಿ,

ಇಲ್ಲವೆ ಅವನನ್ನು ಹಿಡಿದು ಕಳಿಸುವದು ನಿಮ್ಮಿಂದಾಗದಿರಲಿ, ಹಾಗೆ ನಮಗೆ ತಿಳಿಸಿರಿ. ನಾವು ಸರದಾರ ಮುರ್ಶಿದ ಕುಲೀಖಾನರಿಗೆ ಈ ಕೆಲಸ ವನ್ನು ಒಪ್ಪಿಸುವೆವು.''

ಈ ವರ್ತಮಾನವು ಧೂರ್ತನಾದ ಅಮೀರ ಜುಮ್ಲಾನಿಗೆ ತಿಳಿದ ಕೂಡಲೆ ಅವನು ತನ್ನ ಸೇನೆಯನ್ನೂ ಕುಟುಂಬದವರನ್ನೂ ಕಟ್ಟಿಕೊಂಡು ಬಾದಶಹನಿಗೆ ಶರಣಾಗತನಾಗಲು ಹೊರಟಿದ್ದು ನಡೆದನು. ಔರಂಗಜೇಬ ನೆಷ್ಟು ಆಗ್ರಹದಿಂದ ಹೇಳಿದರೂ ಅವನು ಕೇಳಲಿಲ್ಲ. ಸಮಯಾತಿಸವ ನಾದ ಅಮೀರ ಜುಮ್ಲಾನು ತನ್ನ ರತ್ನರಾಶಿಯೊಳಗಿಂದ ಉತ್ತಮೋತ್ತಮ ವಾದವುಗಳನ್ನು ಆರಿಸಿ ಒಂದು ಸುವರ್ಣದ ತಬಕದಲ್ಲಿರಿಸಿ ಬಾದಶಹನಿಗೆ ಕಾಣಿಕೆಯಾಗಿ ಕೊಟ್ಟು ಕಪಿತ್ವಮಯವಾದ ವಚನಗಳಿಂದ ಬಾದಶಹರ ಸ್ತುತಿಮಾಡಿ ತನ್ನನ್ನು ರಕ್ಷಿಸಿಕೊಳ್ಳಬೇಕೆಂದು ಬಹು ವಿನಯಪೂರ್ವಕ ವಾಗಿ ಬೇಡಿಕೊಂಡನು.

ಚತುರನೂ ಪಂಡಿತನೂ ಬಹುಶ್ರುತನೂ ರಾಜನೀತಿಜ್ಞನೂ ಆದ ಮೀರಜುಮ್ಲಾನು ತನ್ನ ವಿಜ್ಞಾನಮಯವಾದ ಭಾಷಣಗಳಿಂದ ನಿತ್ಯದ ಲ್ಲಿಯೂ ಬಾದಶಹನನ್ನು ತೃಪ್ತಿಗೊಳಿಸುತ್ತಿದ್ದರಿಂದ ಶಹಾಜಹಾನನ ಪ್ರೇಮವೇ ಅವನ ಮೇಲೆ ನೆಲಿಸಿತು. ತನಗೆ ಅನುಕೂಲವಾದ ಸಮಯ ಹೀಗೆ ಅಯತ್ನವಾಗಿ ಬಂದೊದಗಿರಲು ಮೀರಜುಮ್ಲಾನು ಆ ಪ್ರಸಂಗ ವನ್ನು ಕಳಕೊಳ್ಳುವನೇ? ಗೋವಳಕೊಂಡವನ್ನು ನಿರ್ಮೂಲವಾಗಿ ಮಾಡುವ ಸಂಕಲ್ಪವನ್ನೇ ಅವನು ಮಾಡಿದ್ದನು. ಪೋರ್ತುಗೀಜರೊಡನೆ ಅವನು ರತ್ನಗಳ ವ್ಯಾಪಾರವನ್ನು ಮಾಡುತ್ತಿರುವಾಗ ಅವರಿಗೂ ಅವನಿಗೂ ವ್ಯಾಜ್ಯ ಬಂದಿತ್ತು. ಅದಕ್ಕಾಗಿ ಅವರ ಪಾರಿಪತ್ಯವನ್ನು ಮಾಡಬೇಕೆಂದು ಅವನು ಯೋಚಿಸಿದ್ದನು. ವಿಜಾಪುರದ ಮೇಲೆ ಸ್ವತಃ ಶಹಾಜಹಾನನೇ ಬದ್ಧಕಟಾಕ್ಷನಾದನು. ಮೀರಜುಮ್ಲಾನು ಶಹಾಜಹಾನನ ಮುಂದೆ ಗೋವಳಕೊಂಡದ ರತ್ನಗಳ ಖಣಿಗಳ ಸಂಪತ್ತನ್ನು ಬಹುಪರಿಯಾಗಿ ಬಣ್ಣಿಸಿ ಧನಲೋಭಿಯಾದ ಶಹಾಜಹಾನನ ಬಾಯಿಯಲ್ಲಿ ನೀರು ಬರು ವಂತೆ ಮಾಡಿದನು. ಮೇಲ್ಕಂಡ ಮೂರು ರಾಷ್ಟ್ರಗಳ ಸಮಾಚಾರ ಕ್ಕಾಗಿ ಶಹಾಜಹಾನನು ಮೀರಜುಮ್ಲಾನ ಕೈಕೆಳಗೆ ದೊಡ್ಡ ಸೈನ್ಯವನ್ನು

ಕೊಟ್ಟು ಅವನನ್ನು ದಕ್ಷಿಣಕ್ಕೆ ಕಳಿಸಿದನು.

ಮೀರಜುಮ್ಲಾನು ಬಾದಶಹರ ಸೈನ್ಯದೊಂದಿಗೆ ದಕ್ಷಿಣಕ್ಕೆ ಹೋದ ನೆಂದರೆ ಔರಂಗಜೇಬನಿಗೆ ಮತ್ತಿಷ್ಟು ಅನುಕೂಲವಾಯಿತೆಂದು ಕಂಡು ಮೀರಜುಮ್ಲಾನನ್ನು ತಾನು ಆಗ್ರಾಕ್ಕೆ ಕರೆಸಿಕೊಂಡದ್ದೇ ತಪ್ಪಾಯಿ ತೆಂದು ದಾರಾ ಸುಲ್ತಾನನು ವಿಷಾದವನ್ನು ತಳೆದನು. ಅದಕ್ಕಾಗಿ ದಕ್ಷಿಣದ ಅಭಿಯೋಗವು ಸದ್ಯಕ್ಕೆ ತಕ್ಕದ್ದಲ್ಲವೆಂದು ಅವನು ಶಹಾಜಹಾನ ನಿಗೆ ಎಷ್ಟು ಬೋಧಿಸಿದರೂ ಅವನು ಕೇಳಲೊಲ್ಲನು. ಕಡೆಗೆ ಬೇಗಮ್ ಸಾಹೇಬಳ ಮಧ್ಯಸ್ಥಿಯ ಮೂಲಕವಾಗಿ, ಮೀರಜುಮ್ಲಾನು ಔರಂಗ ಜೇಬನನ್ನು ಕಾಣಲಾಗದೆಂದೂ ಅವನೊಡನೆ ಯಾವ ಪ್ರಕಾರದ ಮಾತು ಕಥೆಗಳನ್ನು ನಡಿಸಲಾಗದೆಂದೂ, ಬಾದಶಹರ ಆಜ್ಞೆಯಾಯಿತು. ಮೇಲ್ಕಂಡ ಆಜ್ಞೆಗನುಸರಿಸಿ ಮೀರಜುಮ್ಲಾನು ನಡಕೊಳ್ಳುವನೆಂಬ ಹೊಣೆಗಾಗಿ ಅವನು ತನ್ನ ಹೆಂಡರು ಮಕ್ಕಳನ್ನು ಆಗ್ರಾದಲ್ಲಿ ಬಾದಶಹರ ಅಂಕಿತದಲ್ಲಿ ರುವಂತೆ ಏರ್ಪಾಡು ಆಗಿತ್ತು.

ಈ ಸಂಗತಿಯಾದ ಬಳಿಕ ಶಹಾಜಹಾನ ಬಾದಶಹನ ಅಸಾಧ್ಯವಾದ ರೋಗದ ಮೂಲಕ ಸುಜಾ ಔರಂಗಜೇಬ, ಮುರಾದರು ಸಿಂಹಾಸನ ವನ್ನು ಹಿಡುಕೊಳ್ಳುವದಕ್ಕಾಗಿ ಆಗ್ರಾದ ಮೇಲೆ ಸಾಗಿಹೋಗುವ ಪ್ರಯತ್ನ ನಡೆಸಿದರೆಂದು ಹಿಂದಿನ ಅಧ್ಯಾಯದಲ್ಲಿ ನಾವು ಹೇಳಿದ್ದೇವೆ. ಮುರಾದನಿಗೆ ಔರಂಗಜೇಬನು ನಿತ್ಯದಲ್ಲಿಯೂ “ನಿರಪೇಕ್ಷವಾದ” ಬುದ್ಧಿಯಿಂದ ಆಶ್ವಾಸನಪ್ರದವಾದ ಪತ್ರಗಳನ್ನು ಬರೆಯುತ್ತಲಿದ್ದೇ ಇದ್ದನು. ಅವನು ಎಳೆಗೆ ಬಂದನೆಂಬುದನ್ನು ಮನಗಂಡ ಬಳಿಕ ಔರಂಗ ಜೇಬನ ದೃಷ್ಟಿಯು ಅಮೀರ ಜುಮ್ಲಾನ ಕಡೆಗೆ ತಿರುಗಿತು. ಅನಾಯಾಸ ವಾಗಿ ಸೇನಾಸಮೇತನಾಗಿ ದಕ್ಷಿಣಕ್ಕೆ ಬಂದಿರುವ ಆ ಅದ್ಭುತವಾದ ವ್ಯಕ್ತಿಯನ್ನು ಹೇಗಾದರೂ ಮಾಡಿ ಬಗಲಲ್ಲಿ ಹಾಕಿಕೊಳ್ಳಬೇಕೆಂದು ಅವನು ಮೀರಜುಮ್ಲಾನೊಡನೆ ಸಂಧಾನವನ್ನು ನಡೆಸಿದನು. ಆ ಸಮ ಯಕ್ಕೆ ಮೀರಜುಮ್ಲಾನು ವಿಜಾಪುರದವರ ಕೋಟೆಯಾದ ಕಲ್ಯಾಣ ವನ್ನು ಮುತ್ತಿ ಅದನ್ನು ಕೈವಶವಾಗಿ ಮಾಡಿಕೊಳ್ಳಬೇಕೆಂದು ಪ್ರಯತ್ನ ವನ್ನು ನಡೆಸಿದ್ದನು.

ಔರಂಗಜೇಬನು ತನ್ನ ಮಗನಾದ ಸುಲ್ತಾನ ಮುಹಮುದನನ್ನು ಮಾರ ಜುಮ್ಲಾನ ಬಳಿಗೆ ಕಳಿಸಿ 'ಕೆಲವೊಂದು ಮಹತ್ವದ ಸಂಗತಿಯನ್ನು ಕುರಿತು ಆಲೋಚಿಸುವದಿದೆ ದಯಮಾಡಿ ದೌಲತಾಬಾದಕ್ಕೆ ಬಂದು ಹೋಗ ಬೇಕೆ'ಂದು ವಿಜ್ಞಾಪನೆ ಮಾಡಿಕೊಂಡನು. ಆದರೆ ಮಾರಜುಮ್ಲಾನು ಔರಂಗಜೇಬನ ಉದ್ದೇಶವನ್ನರಿತು "ಈಗ ಬರುವ ಅವಸರವಿಲ್ಲ"ವೆಂದು ಹೇಳಿದನು. ಸುಲ್ತಾನ ಮುಹಮುದನಿಂದ ಈ ಕೆಲಸವಾಗಲಿಲ್ಲವೆಂದರಿತು ಔರಂಗಜೇಬನು ತನ್ನ ಕಿರಿಮಗನಾದ ಸುಲ್ತಾನ ಮುಅಜ್ಜಮನೊಡನೆ ಹೇರಳವಾದ ಕಾಣಿಕೆಯನ್ನೂ, ಬಹು ವಿನಯದಿಂದ ಬರೆದ ಪತ್ರವನ್ನೂ ಕಳಿಸಿಕೊಟ್ಟನು. ಮುಅಜ್ಜಮನು ಒಳ್ಳೇ ಚಾತುರ್ಯದಿಂದಲೂ ಸವಿ ಮಾತುಗಳಿಂದಲೂ ದಾಂಭಿಕತೆಯ ನಟನದಿಂದಲೂ ಮಾರಜುಮ್ಲಾನ ಮನವೊಲಿಸಿದನು. ಆ ಸರದಾರನು ಒಳ್ಳೇ ಸಾಹಸದಿಂದ ಕಲ್ಯಾಣದ (ಕರ್ನಾಟಕ) ಕೋಟೆಯನ್ನು ಕೈವಶ ಮಾಡಿಕೊಂಡು ದೌಲತಾಬಾದಿಗೆ ಬಂದನು.

ನಟನಾಯಕನಾದ ಔರಂಗಜೇಬನು ಮಾರಜುಮ್ಲಾನ ಸ್ವಾಗತ ಕ್ಕಾಗಿ ಸಿದ್ಧನಾಗಿಯೇ ಇದ್ದನು. ಆದರೋಪಚಾರ ವಿನಯ ಸೌಜನ್ಯ ಭೋಜನ ತಾಂಬೂಲ ನೃತ್ಯ ಗಾಯನಗಳ ಸಮವಾಯಗಳಿಂದ ಮಾರ ಜುಮ್ಲಾನ ಹೊಟ್ಟೆ ಉಬ್ಬಿಹೋಯಿತು! ಪ್ರತ್ಯಕ್ಷ ದಿಲ್ಲಿಯ ಸಾರ್ವ ಭೌಮರ ಮಗನು ಸ್ನೇಹಿತನಿಗಿಂದ ಸ್ನೇಹಿತನಾಗಿ ತನ್ನನ್ನು ಅಪ್ಪಿ ಕೊಂಡನು. ಅಪ್ಪನಿಗೆ ಅಪ್ಪನೆನ್ನದವನಾದ ಆ ದಕ್ಷಿಣದ ಸುಭೇದಾರನು ತನಗೆ ಬಾಬಾ. (ಹಿರಿಯರೆ) ಬಾಬಾಜೀ (ಶ್ರೇಷ್ಠರಾದ ಹಿರಿಯರೆ) ಎಂದು ಸಂಬೋಧಿಸಿದನು, ಎಂಬ ಮುದದುಬ್ಬಿನಲ್ಲಿ ತಾನಿರುವಾಗ ಆ ರಾಜ ಕುಮಾರನು ಕೇಳಿಕೊಂಡ ವಿನಂತಿಗಳನ್ನು ಮಾರಜುಮ್ಲಾನು ಅವಮಾನಿಸ ಬಲ್ಲನೆ? ಆಗ ಔರಂಗಜೇಬನು ಮೆಲ್ಲನೆ ಉಪಕ್ರಮಿಸಿದ್ದು :—

"ಬಾಬಾಜಿ, ಸುಲ್ತಾನ ಮುಹಮುದನು ತಮ್ಮ ಕಡೆಗೆ ಬಂದಾಗ ತಾವು ಕಲ್ಯಾಣದ ಮುತ್ತಿಗೆಯ ಕೆಲಸದಲ್ಲಿ ನಿಮಗ್ನರಾಗಿದ್ದಿರಿ. ಈಗ ತಾವು ಸ್ವಸ್ಥಚಿತ್ತರಾಗಿರುವಿರಿ. ಹಿಂದಕ್ಕೆ ನಾವು ನೀವು ಪರಸ್ಪರರಿಗೆ ಸಹಾಯ ಮಾಡಬೇಕೆಂದು ಆಣೆ ಕ್ರಿಯೆಗಳನ್ನು ಮಾಡಿರುವೆವಷ್ಟೆ? ಈ

ಸಮಯದಲ್ಲಿ ನಾನು ಆಗ್ರಾಪಟ್ಟಣದ ಮೇಲೆ ಸಾಗಿ ಹೋಗದಿದ್ದರೆ ಮುಂದೆ ನನಗೆ ಆಶೆಯೇ ಇಲ್ಲ. ವಚನಕ್ಕನುಸರಿಸಿ ತಾವೂ ತಮ್ಮ ಸೈನ್ಯದವರೂ ನನಗೆ ಅನುಕೂಲರಾಗಬೇಕು."

"ನೀವು ಹೇಳುವದೆಲ್ಲ ನಿಜವು. ಆದರೆ ನಿಮ್ಮೊಡನೆ ನಾನು ಒಳಸಂಚು ನಡೆಸುವದಿಲ್ಲವೆಂದೂ ನಿಮ್ಮೊಡನೆ ಮಾತಾಡುವದನ್ನು ಕೂಡ ಬಿಡುವನೆಂದೂ ಬಾದಶಹರಿಗೆ ನಾನು ವಚನವನ್ನು ಕೊಟ್ಟು ಬಂದಿದ್ದೇನೆ. ನಾನು ನನ್ನ ವಚನವನ್ನು ಪಾಲಿಸುವೆನೆಂಬ ಬಗ್ಗೆ ನನ್ನ ಹೆಂಡರು ಮಕ್ಕಳನ್ನು ದಾರಾಶಹರ ಬಳಿಯಲ್ಲಿ ಹೊಣೆಯಾಗಿ ಇಟ್ಟು ಬಂದಿದ್ದೇನೆ. ವಚನದ ಮಾತು ಹಾಗಿರಲಿ! ನನ್ನ ಹೆಂಡರು ಮಕ್ಕಳ ಗತಿಯನ್ನು ನಾನು ಕಂಡುಕೊಳ್ಳಬೇಕಲ್ಲವೆ?"

"ಸರಿ, ಸರಿ! ಸತಿಸುತರಲ್ಲಿ ತಾವು ನಿಸ್ಸೀಮವಾದ ಪ್ರೇಮವುಳ್ಳವರು. ಆ ಸತಿಸುತರ ಪ್ರೇಮಕ್ಕಾಗಿಯೇ ನೀವು ಸುಮ್ಮನೆ ಗೋವಳಕೊಂಡದ ರಾಜ್ಯವನ್ನು ಬಿಟ್ಟುಕೊಟ್ಟು ಬಂದಿರಿ. ಸತಿಸುತರ ಹಿತವನ್ನು ನೀವು ಲೆಕ್ಕಿಸದಿದ್ದರೆ ಇಂದಿಗೆ ನೀವೇ ಗೋವಳಕೊಂಡದ ಸುಲ್ತಾನರಾಗುತ್ತಿದ್ದಿಲ್ಲವೆ?" ಎಂದು ಔರಂಗಜೇಬನು ಮಿರಜುಮ್ಲಾನ ಪರಾಕ್ರಮವನ್ನು ಕೊಂಡಾಡಿ ನುಡಿದನು.

ಈ ಮಾತಿಗೆ ಮಿರಜುಮ್ಲಾನು ತುಸು ಉಬ್ಬಿದವನಾಗಿ ಆತ್ಮಸ್ತುತಿಯ ಮದ್ಯದಿಂದ ಪರವಶನಾಗಿ "ಮುಂದೇನು ಮಾಡೆಂದಿರಿ?" ಎಂದು ಯಥೇಷ್ಟನಾಗಿ ನಕ್ಕು ಕೇಳಿದನು.

"ಏನೋ ಒಂದು ಹುಚ್ಚು ವಿಚಾರವು ನನ್ನ ತಲೆಯಲ್ಲಿ ಸೇರಿದೆ. ಅದು ತಮಗೆ ಸರಿಯಾಗಿ ತೋರುವದೋ ಇಲ್ಲವೊ!"

"ಏನದು ತಮ್ಮ ವಿಚಾರಗಳು ಹುಚ್ಚುತನದವೆ?" ಎಂದು ಮಿರಜುಮ್ಲಾನು ಬೊಗಸೆಯೊಡ್ಡಿ ಬೆಸಗೊಂಡನು.

"ಬಹಿಂಗವಾಗಿ ನಾವೂ ನೀವೂ ಶತ್ರುಗಳಂತೆ ನಟಿಸಿದರೆ ದಾರಾಶಹನು ತಮ್ಮ ಕುಟುಂಬದವರಿಗೆ ಆತಂಕ ಬರುವಂತೆ ಮಾಡಲಾರನೆಂದು ನನ್ನ ತಿಳುವಳಿಕೆಯು!"

"ಸರಿ! ಆದರೆ ನಾವು ಶತ್ರುಗಳಂತೆ ನಡಕೊಂಡರೆ ಒಕ್ಕಟ್ಟಿನಿಂದ

ಕಾರ್ಯವನ್ನು ಮಾಡುವದು ಹೇಗೆ ? " ಎಂದು ಮಿರಜುಮ್ಲಾನು ಕೇಳಿದನು.

" ಔರಂಗಜೇಬನು ವಿಶ್ವಾಸಘಾತವನ್ನು ಮಾಡಿ ಮಿರಜುಮ್ಲಾನನ್ನು ಸೆರೆಹಿಡಿದನೆಂಬ ವಾರ್ತೆಯನ್ನು ನಾಲ್ಕೂ ಕಡೆಗೆ ಹಬ್ಬಿಸೋಣ! ನೀವಿಲ್ಲಿ ಸ್ವಸ್ಥವಾಗಿ ನನ್ನ ಅರಮನೆಯಲ್ಲಿ ವಾಸ ಮಾಡಿಕೊಂಡಿದ್ದು ನಿಮ್ಮ ಸೈನ್ಯವನ್ನು ನನ್ನ ಸ್ವಾಧೀನ ಮಾಡಿರಿ. ಅಂದರೆ ನನ್ನ ಕಾರ್ಯವೂ ಆಗುವದು; ನಿಮಗೂ ವಚನಭಂಗದ ದೋಷವು ತಟ್ಟಲಿಕ್ಕಿಲ್ಲ! " ಎಂದು ನುಡಿದು ಔರಂಗಜೇಬನು ಒಂದು ವೀಳ್ಯವನ್ನೆತ್ತಿ ಮಿರಜುಮ್ಲಾನ ಕೈಯಲ್ಲಿ ಕೊಟ್ಟು ಮಂದಹಾಸಗೈದನು.

ಮಿರಜುಮ್ಲಾನು ವಿಚಾರಗ್ರಸ್ತನಾಗಿ ತುಸು ತಲೆದೂಗಿದಂತೆ ಮಾಡಿ " ವಂದ್ಯರಾದ ಸುಲ್ತಾನರೆ, ನಿಮ್ಮ ವಿಚಾರವು ಸಯುಕ್ತಿಕವಾಗಿ ತೋರುತ್ತದೆ. ಈ ಮಾತಿನ ಬಗ್ಗೆ ನಾನು ಪೂರ್ವಾಪರವಾಗಿ ಆಲೋಚಿಸಿ ನಾಳಿಗೆ ನನ್ನ ಖಂಡಿತವಾದ ಅಭಿಪ್ರಾಯವನ್ನು ಈ ಚರಣಗಳಿಗೆ ನಿವೇದಿಸುವೆನು " ಎಂದು ಹೇಳಿದನು.

" ಇದಕ್ಕೇಕೆ ವಿಚಾರವು ಮಿರಜುಮ್ಲಾ ಸಾಹೇಬ? ನಾವು ಹೀಗೆ ವಿಚಾರಮಾಡುತ್ತ ದಿನಗಳೆದರೆ ಸುಜಾ ಸಾಹೇಬರು ನಿಶ್ಚಯವಾಗಿ ನಮ್ಮನ್ನು ಹಿಂದೆ ಹಾಕಿಬಿಡುವರು ಯಾಕೆ ಹಜರತ್ ಸಾಹೇಬ, ನಾನು ಹೇಳುವದು ಸಮಯೋಚಿತವಾದದ್ದಲ್ಲವೆ? " ಎಂದು ಔರಂಗಜೇಬನು ಓತಿಕಾಟಕ್ಕೆ ಬೇಲಿಯು ಸಾಕ್ಷಿಯೆಂಬಂತೆ ಹಜರತ್‌ನೆಂಬವನ ಸಾಕ್ಷಿ ಕೊಟ್ಟನು.

ಹಜರತ್‌ನೆಂಬವನು ಮಿರಜುಮ್ಲಾನ ದಾಸೀಪುತ್ರನು. ಮುತ್ತುಗದ ಹೂವಿನಂತೆ ಇವನು ಬಹಿರಂಗವಾಗಿ ಬುದ್ಧಿವಂತನೂ ಸಜ್ಜನನೂ ಎಂಬಂತೆ ಕಾಣುತ್ತಿದ್ದನು. ಅಹುದಪ್ಪನ ಚಾವಡಿಯಲ್ಲಿ ಅಹುದಪ್ಪನಂತೆಯೂ ಅಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪನಂತೆಯೂ ಹಜರತ್ತನು ನಡಕೊಳ್ಳುತ್ತಿದ್ದನಾದ್ದರಿಂದ ಅವನ ಬೇಳೆ ತಕ್ಕಮಟ್ಟಿಗೆ ಬೇಯುತ್ತಿತ್ತು. ಅವನು ಮಿತಿಮಿರಿದ ಮಂದಬುದ್ಧಿಯವನೂ ಅಶಕ್ತ ದುರ್ಜನನೂ ಆಗಿದ್ದರೂ ತಾಯಿಯ ವಿನಯಗುಣಾಂಶವು ಅವನಲ್ಲಿ ಸಂಪೂರ್ಣವಾಗಿ

ಸೇರಿರುವದರಿಂದ ಮಿರಜುಮ್ಲಾನು ಮೋಸಕ್ಕೊಳಗಾಗಿ ಅವನನ್ನು ಯಾವಾಗಲೂ ತನ್ನ ಬಳಿಯಲ್ಲಿಯೇ ಇಟ್ಟುಕೊಂಡಿರುತ್ತಿದ್ದನು. ಅಲ್ಪ ಲಾಭಕ್ಕಾಗಿ ಹಜರತನು ಬೇಕಾದ ಪಾಪಕೃತ್ಯವನ್ನು ಕೈಕೊಳ್ಳಲು ಸಿದ್ಧ ನಾಗಿರುವದನ್ನು ಔರಂಗಜೇಬನು ಅರಿತು ಅವನಿಗೆ ಹೇರಳವಾದ ಧನ ವನ್ನೂ ಇನಾಮು ಅಧಿಕಾರಗಳ ಆಶ್ವಾಸನವನ್ನೂ ಕೊಟ್ಟಿಟ್ಟಿದ್ದರಿಂದ ಔರಂಗಜೇಬನ ಸೂತ್ರದಂತೆ ನಡೆಯಲು ಆವನು ಒಪ್ಪಿಕೊಂಡಿದ್ದನು.

"ಬಾಬಾಜೀ, ಔರಂಗಜೇಬ ಸುಲ್ತಾನರು ಕೃಪಾವಂತರಾಗಿ ಸೂಚಿ ಸಿದ ಮಾತು ಯೋಗ್ಯವಾಗಿ ತೋರುತ್ತದೆ. ಅವರು ಹೇಳಿದಂತೆ ನಡ ಕೊಳ್ಳಲು ಪ್ರತ್ಯಯವೇನೂ ಕಾಣಿಸುವದಿಲ್ಲ!" ಎಂದು ಆ ಮತಿಮಂದ ನಾದ ದುರ್ಜನನು ತನ್ನ ಗಡ್ಡವನ್ನು ತೀಡುತ್ತ ಹೇಳಿದನು.

ಅಮಿರ ಜುಮ್ಲಾನು "ಒಳ್ಳೇದು!" ಎಂದಿಷ್ಟು ಒಡನುಡಿದ ದ್ದೊಂದೇ ತಡ ಔರಂಗಜೇಬನು ಅವನನ್ನು ಘನವಾದ ಪ್ರೇಮದ ಆವಿ ರ್ಭಾವದಿಂದ ಬಿಗಿದಪ್ಪಿ "ಬಾಬಾಜಿ, ಇಂದು ನಾನು ಕೃತಾರ್ಥನಾದೆನು! ತಾವು ನನಗೆ ವಿರೋಧಿಗಳಾಗುವದಿಲ್ಲವೆಂದು ನನಗೆ ತಿಳಿದೇ ಇತ್ತು!" ಎಂದು ನುಡಿದವನೇ ಮಿರಜುಮ್ಲಾನಿಗೆ ಕೋಟೆಯಲ್ಲಿರುವ ರಾಜಮಂದಿರವನ್ನು ತೋರಿಸುವ ನೆವದಿಂದ ಕರಕೊಂಡು ಹೋಗಿ ಆವ ನನ್ನು ಅಲ್ಲಿ ಇಳಿಸಿದನು. ತನ್ನ ಸೈನ್ಯಾಧಿಕಾರಿಗಳೆಲ್ಲರೂ ಔರಂಗಜೇಬನ ಆಜ್ಞೆಯಂತೆ ನಡಕೊಳ್ಳಬೇಕೆಂಬ ಆಜ್ಞಾಪತ್ರವನ್ನು ಬರೆದು ಮಿರ ಜುಮ್ಲಾನು ಹಜರತ್ತನ ಕೈಯಲ್ಲಿ ಕೊಟ್ಟನು.

ಔರಂಗಜೇಬನೂ ಹಜರತ್ತನೂ ಮಿರಜುಮ್ಲಾನ ಅಪ್ಪಣೆಯನ್ನು ತೆಗೆದುಕೊಂಡು ಮನೆಬಿಟ್ಟು ಹೊರಗೆ ಬಂದರು. ಸಂಗಡಲೇ ಆ ಮಂದಿ ರದ ತಲೆಬಾಗಿಲಕ್ಕೆ ಕೀಲಿ ಬಿದ್ದಿತು. ವೈಭವಯುತವಾದ ಮಂದಿರವೇ ಮಿರಜುಮ್ಲಾನ ಕಾರಾಗೃಹವಾಯಿತು. ಒಳಗಿರುವ ಅಡಿಗೆ ನೀರಿನ ವರೂ ವ್ಯವಸ್ಥಾಪಕರೂ ದಾಸದಾಸಿಯರೂ ಎಲ್ಲರೂ ಆ ಔರಂಗಜೇಬನ ಆಳುಗಳೇ.

ತನ್ನ ನಿಜವಾದ ಸ್ಥಿತಿಯನ್ನು ಅರಿತು ಮಿರಜುಮ್ಲಾನಂದದ್ದು: "ನಾನೇ ಸರ್ವರನ್ನು ವಂಚಿಸಿ ಮಿರಿ ನಿಂತವನೆಂದು ತಿಳುಕೊಂಡಿದ್ದೆನು,

ಈ ಔರಂಗಜೇಬನು ನನ್ನ ತಲೆಯ ಮೇಲೆ ಕೈಯಿಟ್ಟನು! ಇನ್ನು ಈ ಸಂಕಟದೊಳಗಿಂದ ನಾನು ಸುಸೂತ್ರವಾಗಿ ಪಾರಾಗಬೇಕಾದರೆ ಔರಂಗಜೇಬನ ಇಚ್ಛೆಯಂತೆ ನಡಕೊಂಡ ಹೊರತು ಗತ್ಯಂತರವಿಲ್ಲ."

## ೨೨

ಆಗ್ರಾಪಟ್ಟಣದಲ್ಲೆಲ್ಲ ವಿಲಕ್ಷಣವಾದ ಚಪಲತೆಯು! ಎಲ್ಲಿ ನೋಡಿದಲ್ಲಿ ಕತ್ತಿಗಳು ಮಸೆಯುತ್ತಿದ್ದವು. ರಾವುತ ಮಾವುತರು ತಮ್ಮ ತಮ್ಮ ವಾಹನಗಳನ್ನು ತೊಳೆದು ಶೃಂಗರಿಸಿದರು. ವೀರರೆಲ್ಲರು ತಮ್ಮ ಹೊಸ ಪೋಷಾಕುಗಳನ್ನು ಸಿದ್ಧಮಾಡಿಸಿಟ್ಟರು. ಜೇಸಿಂಗ ಜಸವಂತಸಿಂಗ, ಕಾಸಮಖಾನ, ದಿಲೇರಖಾನ, ಕಲೀಲಉಲ್ಲಾಖಾನ, ತೇಜಸಿಂಗ, ಸಮರಸಿಂಗ ಮುಂತಾದ ವೀರಾಗ್ರೇಸರರು ಬಾದಶಹರ ಅಪ್ಪಣೆಯ ಮೇರೆಗೆ ತಮ್ಮ ತಮ್ಮ ಸೇನಾಸಮೇತರಾಗಿ ಆಗ್ರಾಪಟ್ಟಣಕ್ಕೆ ಬಂದು ಬಿಟ್ಟಿದ್ದರು. ಯಾರ ಮನೆಯಲ್ಲಿಯೂ ಕಾಲಿಡುವೆನೆಂದರೆ ಸ್ಥಳವಿಲ್ಲ! ಬೀದಿಗಳಲ್ಲಿ ಹಾಯುವೆನೆಂದರೆ ಅವಕಾಶವಿಲ್ಲ! ಮನೆಮನೆಗಳಲ್ಲಿ ಗುಜುಗುಜು ಮಾತುಗಳು, ರಾಜಮಂದಿರಗಳಲ್ಲಿ ಮಹತ್ವವಾದ ಏಕಾಂತಗಳು, ದರಬಾರಗಳಲ್ಲಿ ಅಖಂಡವಾದ ವಾಗ್ವಾದಗಳು ಸಂತತವಾಗಿ ನಡೆದಿದ್ದವು.

ಶಾಇಸ್ತೇಖಾನ, ದಾನಿಶ್‌ಮಂದಖಾನ ಬಕ್ಷಿ, ರೋಶನಾರೆಯರು ಕೂಡಿ ಔರಂಗಜೇಬನ ಪಕ್ಷಕ್ಕೆ ಹೇಗೆ ವಿಜಯವಾದೀತೆಂದು ಆಲೋಚನೆಗೈಯುತ್ತಿದ್ದರು. ಮುರ್ಝುಫರಜಂಗ ಮುನೀರಉಲ್‌ಮುಲ್ಕ ಮುಂತಾದ ಸರದಾರರು ಸುಜಾ ಸುಲ್ತಾನನಿಗೆಯೇ ಪಟ್ಟಗಟ್ಟುವೆವೆಂದು ವೀಳ್ಯವನ್ನೆತ್ತಿದರು. ಮಧ್ಯಸ್ಥರು ವಿಜಯಿಗಳ ಬೆನ್ನುಕಟ್ಟುವದನ್ನು ನಿಶ್ಚಯಿಸಿಕೊಂಡರು.

ಶಹಾಜಹಾನನ ಪ್ರಕೃತಿಯು ಕಿಂಚಿತ್ ನೆಟ್ಟಗಾಗಿತ್ತು. ಹಾಸಿಗೆಯನ್ನು ಬಿಟ್ಟೇಳುವಂತೆ ಇಲ್ಲದಿದ್ದರೂ ಮಲಗಿದಲ್ಲಿಯೇ ಮಾತಾಡುವಷ್ಟು ಶಕ್ತಿಯು ಅವನಿಗೆ ಬಂದಿತ್ತು. ಅಂಥ ಸಮಯದಲ್ಲಿ ಅವನ ಮೇಲೆ ಮುಗಿಲೇ ಕಡುಕೊಂಡು ಬಿದ್ದ ಭಯಂಕರವಾದ ಪ್ರಸಂಗವು

ಬಂದೊದಗಿತ್ತು. ದುರ್ನೀತರಾದ ಅವನ ಮಕ್ಕಳು, ಅವನಿರುವಾಗಲೇ ದಿಲ್ಲಿಯ ಮುಕುಟವನ್ನು ಅಪಹರಿಸುವದಕ್ಕಾಗಿ ದಂಡು ಕಟ್ಟಿಕೊಂಡು ಬಂದು ರಾಜಧಾನಿಯ ಮೇಲೆ ಅಭಿಯೋಗ ಮಾಡಲುದ್ಯುಕ್ತರಾದರು. ತಂದೆಯ ಉಪದೇಶದ ಮಾತುಗಳನ್ನಾಗಲೀ, ಬಾದಶಹನ ನಿಷ್ಠುರವಾದ ಶಾಸನಗಳನ್ನಾಗಲೀ ಅವರು ಲೆಕ್ಕಿಸದಾದರು! ಇನ್ನು ನಾಲ್ಕು ದಿವಸ ತಡೆದರೆ ಆಗ್ರಾಪಟ್ಟಣವು ಯಮಪುರದ ಸ್ವರೂಪವನ್ನೂ ನಿರ್ಮಲವಾಗಿರುವ ಯಮುನಾ ನದಿಯು ವೈತರಣಿಗೂ ಮಿಕ್ಕಿದ ಬೀಭತ್ಸ ಸ್ವರೂಪವನ್ನೂ ತಾಳುವವೆಂಬ ಬಲವತ್ತರವಾದ ಭೀತಿಯಿಂದ ಗ್ರಸ್ತನಾಗಿ ಅವನು ತನ್ನ ಸೇನಾಪತಿಗಳ ಆಲೋಚನವನ್ನು ಕೇಳಿಕೊಂಡನು.

"ಅಂಬರದ ರಾಜರಾದ ಜೇಸಿಂಗರೆ. ಈ ಸಾಮ್ರಾಜ್ಯಕ್ಕೆ ಸದ್ಯಕ್ಕೆ ಅಳಿಗಾಲ ಬಂದೊದಗಿದಂತಾಗಿದೆ. ಸುಜಾ ಸುಲ್ತಾನನು ದಂಡೆತ್ತಿಕೊಂಡು ಅರ್ಧ ಹಾದಿಗೆ ಬಂದಿರುವನು. ಔರಂಗಜೇಬ ಮುರಾದರೊಂದಾಗಿ ಪ್ರಬಲವಾದ ಸೇನೆಯೊಡನೆ ಇಲ್ಲಿಗೆ ಬರುವ ವಿಚಾರದಲ್ಲಿರುವರು. ಮಕ್ಕಳೊಡನೆ ನನಗೆ ಯುದ್ಧಮಾಡುವ ಪ್ರಸಂಗವು ಬಂದೊದಗಿತು! ಸಂಗ್ರಾಮದಲ್ಲಿ ಅವರ ಜೀವಕ್ಕೆ ಅಪಾಯವಾದರೂ ನನಗೆ ದುಃಖ! ಅವರು ವಿಜಯಿಗಳಾಗಿ ಕೊಬ್ಬೇರಿ ಬಂದರೆ ಏನೇನು ಅನರ್ಥಗಳನ್ನು ಮಾಡುವರೋ ಎಂಬ ವಿಚಾರವಾದರೂ ಅತೀವ ದುಃಖಮಯವಾದದ್ದು!" ಎಂದು ಬಾದಶಹನು ದುಃಖಾತಿರೇಕದಿಂದ ಬಿಕ್ಕಿಬಿಕ್ಕಿ ಅತ್ತನು.

ನೆರೆದ ಸರದಾರರ ಕಣ್ಣುಗಳಲ್ಲಿಯಾದರೂ ದುಃಖಾಶ್ರುಗಳೊತ್ತಿಬಂದವು. ಪರಚಕ್ರದವರು ದಿಲ್ಲಿಯ ಸಾಮ್ರಾಜ್ಯದ ಮೇಲೆ ಅಭಿಯೋಗ ಮಾಡಿದ್ದರೆ, ಆ ಶತ್ರುಘ್ನರೆಲ್ಲರಿಗೆ ಅದೊಂದು ಆನಂದದ ವಾರ್ತೆಯೇ ಆಗುತ್ತಿತ್ತು! ಆದರೆ ಈ ಪ್ರಸಂಗದಲ್ಲಿ ಅವರು ತಮ್ಮ ಪರಾಕ್ರಮದ ಉಪಯೋಗವನ್ನೆಂತು ಮಾಡಬಲ್ಲರು? ತಮ್ಮ ವ್ಯೂಹುಣ್ಣನ್ನು ತಾವೇ ಕೆದರಿಕೊಳ್ಳುವದು ದುಃಸಹವಲ್ಲವೆ?

"ಅಲಂಪನಾಃ! ಪ್ರಸಂಗವು ಬಹು ಕಠಿಣವಾದದ್ದು ಸರಿ! ಆದರೆ ನಾವೆಲ್ಲರೂ ಕೂಡಿ ಆ ಕಾರ್ಯಜ್ಞರಾದ ರಾಜಕುಮಾರರ ಅಭಿಯೋಗ

ವನ್ನು ತಡೆದು, ಅವರನ್ನು ಹಿಂದಟ್ಟಿ ರಾಜಧಾನಿಗೆ ಒದಗಿದ ಸಂಕಟವನ್ನು ನಿಶ್ಚಯವಾಗಿ ನಿವಾರಿಸುತ್ತೇವೆ. ಬಾದಶಹರು ಚಿಂತೆಮಾಡುವ ಕಾರಣ ವಿಲ್ಲ!'' ಎಂದು ರಾಜಾ ಜೇಸಿಂಗನು ಬಾದಶಹನ ಹಾಸಿಗೆಗೆ ಪ್ರಣಾಮ ಮಾಡಿ ಆಶ್ವಾಸನವನಿತ್ತನು.

" ಏನು ಮಾಡುತ್ತೀರೋ ನೋಡಿರಿ! ನನ್ನ ಮಕ್ಕಳಲ್ಲಿ ಯಾರ ಜೀವಕ್ಕೂ ಅಪಾಯವಾಗದಂತೆ ಮಾಡುವೆವೆಂದು ನನ್ನ ಕೊರಳು ಮುಟ್ಟಿ ಹೇಳಿರಿ!'' ಎಂದು ಚಿಂತಾಗ್ರಸ್ತನಾದ ಬಾದಶಹನು ಬೇಡಿ ಕೊಂಡನು.

ಎಲ್ಲರೂ ಬಾದಶಹರ ಇಚ್ಛೆಯಂತೆ ನಡೆಕೊಳ್ಳುತ್ತೇವೆಂದು ಹೇಳಿ ಕೊಂಡ ಮೇಲೆ, ಹಾಸಿಗೆಯಿಂದೇಳಲರಿಯದ ಆ ಜಗತ್‌ಪಾಲಕನು, ಸಮಾ ಧಾನದ ಉಸುರ್ಗರೆದು ತನ್ನ ಎರಡೂ ಕೈಗಳನ್ನು ಮೇಲಕ್ಕೆತ್ತಿ ಪರಮಾ ತ್ಮನ ಅನುಗ್ರಹವನ್ನು ಕೋರಿದನು.

ಬಾದಶಹರ ಜ್ಯೇಷ್ಠಪುತ್ರನಾದ ದಾರಾಶಹನೇ ರಾಜಸೇನೆಯ ಮುಖ್ಯಾಧಿಕಾರಿಯೆಂದು ನಿರ್ಣಯಿಸಲ್ಪಟ್ಟನು. ಆಗ್ರಾಪಟ್ಟಣದ ಸಂರ ಕ್ಷಣದ ಕೆಲಸವು ಸುಲೇಮಾನ ಸುಖೋನ ಕಡೆಗೆ ಬಂದಿತು ರಾಜಧಾನಿ ಯಲ್ಲೆಲ್ಲ ದಾರಾಶಹನ ಹೆಸರಿನ ಜಯಘೋಷಗಳು ನಡೆದವು.

ಇಷ್ಟಾದ ಬಳಿಕ ದರಾಯುಸನು ತನ್ನ ಪ್ರಿಯ ಸಹೋದರಿಯಾದ ಬೇಗಮ್ ಸಾಹೇಬಳ ಬಳಿಗೆ ಬಂದು " ಬೇಗಮ್, ನೀನು ಈ ದಿವಸ ನನಗೋಸ್ಕರವಾಗಿ ಮಾಡಿದ ಪರಿಶ್ರಮಗಳ ಬಗ್ಗೆ ನಿನ್ನನ್ನು ಎಷ್ಟು ಕೊಂಡಾಡಿದರೂ ಸಾಲದು. ಇಂದು ನನಗೆ ಪ್ರಾಪ್ತವಾದ ಗೌರವ ಕ್ಕೆಲ್ಲ ನೀನೇ ಕಾರಣಳು'' ಎಂದು ಸಂತೋಷದಿಂದ ನಗುತ್ತೆ ನುಡಿದನು.

" ನಾನೇನು ಹೆಚ್ಚಿನದು ಮಾಡಿರುವೆನು ?''

" ಯಾಕೆ ? ರಾಜಾ ಜಯಸಿಂಗ, ಜಸವಂತಸಿಂಗ, ಕಾಸಮಖಾನ, ದಿಲೇರಖಾನ ಮುಂತಾದ ಸಮರವೀರರು ನಿನ್ನ ಸೂಚನೆಯ ಮೇರೆಗೆಯೇ ನನ್ನ ಪಕ್ಷವನ್ನು ಸ್ವೀಕರಿಸಿದರಲ್ಲವೆ ? ನಿನ್ನೆಯ ದಿನ ನೀನು ಅವರನ್ನೆಲ್ಲ ಕರೆಸಿಕೊಂಡು ಸಮಂಜಸವಾದ ವಾದಗಳಿಂದ ಅವರ ಮನಸ್ಸುಗಳನ್ನು

ಒಲೆಯಿಸಿಕೊಂಡೆಯೆಂದು ನನ್ನ ಮಗನಾದ ಸುಲೇಮಾನನೇ ಹೇಳಿದನಲ್ಲ !"

"ಆಗಲಿ ಹೋಗು! ಇನ್ನುಮೇಲಾದರೂ ನೀನು ನಿನ್ನ ಅನುಯಾಯಿಗಳ ಮನಸ್ಸನ್ನು ನೋಯಿಸದೆ, ಈ ಮಹಾಯುದ್ಧವು ಮುಗಿಯುವ ವರೆಗೆ ಅವರನ್ನು ಅಖಂಡವಾಗಿ ಸಂತೋಷಗೊಳಿಸುತ್ತಲೇ ಇರಬೇಕು. ನೀನು ವೀರನು ಸರಿ! ಆದರೆ ಯುದ್ಧಗಳು ನಿನ್ನೊಬ್ಬನ ಪರಾಕ್ರಮದ ಮೇಲೆ ಅವಲಂಬಿಸಿರುವದಿಲ್ಲ."

## ೨೩

ಸುಲೇಮಾನನು ಉಲ್ಲಾಸದಿಂದ ಮುಖ್ಯ ಸೇನಾಪತಿಗೆ ಉಚಿತವಾದ ಪೋಷಾಕವನ್ನು ಧರಿಸಿ, ಅಕಬರನ ಪ್ರಖ್ಯಾತವಾದ ಖಡ್ಗವನ್ನು ಕೈಯಲ್ಲಿ ಹಿಡಿದು, ಒಳ್ಳೇ ಆಪ್ಯತೆಯ ಹೆಜ್ಜೆಗಳನ್ನಿಕ್ಕುತ್ತ ತನ್ನ ತಂದೆಯಾದ ದಾರಾ ಸುಲ್ತಾನನ ಸಮೀಪಕ್ಕೆ ಬಂದು ನಿಂತು ಸೈನಿಕನಿಗೆ ಉಚಿತವಾದ ಪ್ರಣಾಮ ಮಾಡಿದನು. ಶೂರನೂ, ಬಲ್ಲಿದನೂ, ಉನ್ನತಾಂಗನೂ, ಸುಂದರನೂ ಆಗಿರುವ ತನ್ನ ಪ್ರೀತಿಯ ಮಗನಿಗೆ ಸೇನಾಪತಿಯ ವಸ್ತ್ರಗಳು ಅತಿಶಯವಾಗಿ ಒಪ್ಪುತ್ತಿರುವದನ್ನು ಕಂಡು, ದಾರಾಶಹನು ಹಿರಿಹಿರಿ ಹಿಗ್ಗಿ, ಸುಲೇಮಾನನ ಪ್ರಣಾಮವನ್ನು ಆದರದಿಂದ ಸ್ವೀಕರಿಸಿ ನಗೆಮುಖವನ್ನು ತಳೆದು :—

"ವಾಃ! ಸರ್ ಲಷ್ಕರ ಸಾಹೇಬ, ಬನ್ನಿರಿ! ಏನು ಸಮಾಚಾರ?" ಎಂದು ಕೇಳಿದನು.

"ಸುಲ್ತಾನ ಸುಜಾ ಸಾಹೇಬರ ಮಾರ್ಗವನ್ನು ನಿರೋಧಿಸಿ, ಅವರನ್ನು ಹಿಂದಕ್ಕೆ ಅಟ್ಟುವ ಕೆಲಸದ ಭಾರವು ನನ್ನ ಮೇಲೆ ಹೊತ್ತಿದೆ. ಇಂದೆಯೇ ನಾನು ಎಲ್ಬಾಸದ (ಅಲ್ಲಾಬಾದದ) ಕಡೆಗೆ ಹೊರಡತಕ್ಕವನು!"

"ಯಾರ ಆಜ್ಞೆಯ ಮೇರೆಗೆ ನೀವಿಂಥ ಸಾಹಸದ ಕೆಲಸವನ್ನು

ಕ್ಕೆಕೊಂಡಿರಿ ?'' ಎಂದು ದರಾಯುಸನು ಸಾರ್ವಭೌಮನ ದರ್ಪದಿಂದ ಕೇಳಿದನು.

"ಆ ಆಜ್ಞೆಯನ್ನೇ ನಾನೀಗ ಕೇಳಿಕೊಳ್ಳಲು ಇಲ್ಲಿಗೆ ಬಂದಿರುವೆನು !'' ಎಂದು ಸುಲೇಮಾನನು ಬಹು ವಿನಯದಿಂದ ನುಡಿದು ಮಂದಹಾಸಗೈದನು.

"ಸುಲೇಮಾನ್, ಸುಜಾ ಸುಲ್ತಾನನ ಪಾರಿಪತ್ಯದ ಕೆಲಸವನ್ನು ನಾನೇ ವಹಿಸಿಕೊಂಡಿರುವದನ್ನು ನೀನು ಮರೆತಿಯೇನು ?''

"ಆದರೂ ರಾಜಕಾರಣವನ್ನು ನೆನೆದು ಬಾದಶಹರೂ ನಾನೂ ರಾಜಾ ಜೇಸಿಂಗರೂ ಕೂಡಿ ನಿನ್ನಿನ ವಿಚಾರವನ್ನೆಲ್ಲ ತಿರುಗಿಸಿದ್ದೇವೆ.''

"ಇದರಲ್ಲೇತರ ರಾಜಕಾರಣವು ? ನಾನೇ ಸುಜಾಶಹನ ಸಮಾಚಾರಕ್ಕಾಗಿ ಹೊರಡುವೆನು" ಎಂದು ದಾರಾಶಹನು ಕಿಂಚಿತ್ ಕ್ರುದ್ಧನಾಗಿ ನುಡಿದನು.

"ತಮ್ಮ ಮಾತು ತೆಗೆದುಹಾಕಬೇಕೆಂದು ನಾವು ಹೀಗೆ ಆಲೋಚಿಸಿಲ್ಲ. ಈ ಚರಣಗಳಿಗೇ ದಿಲ್ಲಿಯ ಸಿಂಹಾಸನವು ಪ್ರಾಪ್ತವಾಗಬೇಕೆಂದು ನಾವೆಲ್ಲರೂ ಹೋರಾಡುತ್ತಿರುವಾಗ, ತಮ್ಮ ಜೀವಕ್ಕೆ ಅಪಾಯವಾಗುವ ಪ್ರಸಂಗವನ್ನು ನಿಷ್ಕಾರಣವಾಗಿ ತಂದುಕೊಳ್ಳುವದೇಕೆ ? ಸುಜಾ ಸುಲ್ತಾನರ ಹೆಡಕು ಮುರಿಯಲು ಸಮರ್ಥರಾದ ವೀರರು ಅನೇಕರಿದ್ದಾರೆ. ಆದರೆ ಚಕ್ರವರ್ತಿಯ ಮುಕುಟವನ್ನು ಧರಿಸಲು ತಮ್ಮ ಹೊರತಾಗಿ ಮತ್ತೊಬ್ಬರಿಲ್ಲ.''

ದಾರಾ ಸುಲ್ತಾನನು ಶಾಂತನಾಗಿ "ಸುಲೇಮಾನ್, ಸುಜಾ ಸುಲ್ತಾನನ ಬಲವನ್ನು ಮುರಿಯಲು ನೀನು ಸಮರ್ಥನೇ ಇರುವಿ, ಸಂದೇಹವಿಲ್ಲ ! ಆದರೆ ನಿನ್ನ ಜೀವಕ್ಕೆ ಏನಾದರೂ ಅಪಾಯವಾದರೆ ಆ ಮುಕುಟವನ್ನು ನಾನು ಧರಿಸಿ ಫಲವೇನು ?" ಎಂದು ಕೇಳಿದನು.

"ತಾತರೆ ಕ್ಷಮಿಸಿರಿ ! ನಾನಿಲ್ಲಿ ವೇದಾಂತವನ್ನು ಕೇಳಿಕೊಳ್ಳಲು ಬಂದಿಲ್ಲ ! ರಾಜಕಾರಣಕ್ಕಾಗಿ ತಮ್ಮ ಅಮೌಲ್ಯವಾದ ಜೀವವನ್ನು ಸಂಕಟದಲ್ಲಿ ನೂಕಲಾಗದೆಂದೂ ರಾಜಕಾರಣಕ್ಕಾಗಿಯೇ ನಾನು ಈಗಿನ ಪ್ರಸಂಗದಲ್ಲಿ ಸೇನಾಪತಿಯಾಗತಕ್ಕದ್ದೆಂದೂ ನಾವೆಲ್ಲರೂ ಸಂಪೂರ್ಣವಾಗಿ

ವಿಚಾರಿಸಿ ನಿರ್ಣಯಿಸಿದ್ದೇವೆ.'' ಎಂದು ಸುಲೇಮಾನನು ಅಕಬರ ಬಾದಶಹನ ವಿಜಯಖಡ್ಗವನ್ನು ಲೀಲೆಯಿಂದ ತಿರಿತಿರಿವಿ ನೋಡುತ್ತ ನುಡಿದನು.

"ಒಳ್ಳೇದು! ನಾನು ವಿಚಾರ ಮಾಡಿ ಏನೆಂಬ ಆಜ್ಞೆಯನ್ನು ಮಾಡುವೆನು!" ಎಂದು ತಂದೆಯು ಮಗನ ಇಚ್ಛೆಗೆ ವಿರುದ್ಧವಾದ ಮಾತು ಹೇಳಲಾರದೆ ನುಡಿದನು.

"ವಿಚಾರಕ್ಕೆ ಸಮಯವೇ ಇಲ್ಲ! ಸುಜಾ ಸುಲ್ತಾನರು ಇಂದಿಗೆ ಮೂರನೆಯ ದಿವಸವೇ ಅಲ್ಲಾಬಾದಕ್ಕೆ ಬರುವರು. ಅವರನ್ನು ಆ ಪಟ್ಟಣದ ಈಚೆಗೆ ಬರಗೊಟ್ಟರೆ ಪ್ರಸಂಗವು ವಿಕೋಪಕ್ಕೆ ಬರುವದು. ರಾಜಧಾನಿಯ ಸಂರಕ್ಷಣದ ಕೆಲಸವು ತಮ್ಮನ್ನು ಕೂಡಿತು. ನಾನು ನಡೆದೆನು!"

ದಾರಾಶಹನು ಮಗನನ್ನು ತಬ್ಬಿಕೊಂಡು "ಸುಲ್ತಾನ್, ನಿಮ್ಮೆಲ್ಲರ ಮನಸ್ಸಿಗೆ ಬಂದದ್ದೇ ನನ್ನ ಮನಸ್ಸಿಗೆ ಬಂದದ್ದು! ವಾತ್ಸಲ್ಯಕ್ಕಾಗಿ ನಿನಗೆ ಅಪ್ಪಣೆ ಕೊಡಲು ಸಂಕೋಚಗೊಂಡೆನು. ನೀನು ಸುಜಾಶಹನನ್ನು ನಿರಾಯಾಸವಾಗಿ ಸೋಲಿಸುವಿ ಎಂಬುದನ್ನು ನಾನು ನಿಶ್ಚಯವಾಗಿ ನಂಬಿದ್ದೇನೆ. ಎಚ್ಚರದಿಂದ ನಡಕೊಳ್ಳತಕ್ಕದ್ದು; ಹೆಚ್ಚಿಗೆ ಹೇಳಲಾರೆನು!" ಎಂದು ನುಡಿದು ಬಾಷ್ಪಲೋಚನನಾದನು.

"ತಾತರೆ, ಚಿಂತೆ ಮಾಡಬೇಡಿರಿ! ಸ್ಥಾನಾಸ್ಥಾನ ಬಲಾಬಲಗಳನ್ನರಿತು ಸುಳ್ಳು ಹೆದರಿಕೆಗಳಿಗೆ ಆಸ್ಪದವನ್ನು ಕೊಡದಲೆ ಉತ್ಸಾಹದಿಂದ ಕಾದುವ ವೀರನಿಗೆ ಅಪಜಯವೇ ಇಲ್ಲ! ತಮ್ಮ ಅನುಗ್ರಹದಿಂದ ಸುಜಾ ಸುಲ್ತಾನರ ಬಲವನ್ನು ಮುರಿದು, ನಾನು ವಿಜಯಿಯಾಗಿಯೇ ಬರುವೆನು.'' ಎಂದು ಸೆಟೆಯಿಂದ ನಿಂತು ಸುಲೇಮಾನನು ನುಡಿಯುತ್ತಿರುವದನ್ನು ನೋಡಲಾಗಿ, ಆವನೇನು ಉತ್ಸವಕ್ಕೆ ನಡೆದಿರುವನೋ ಎಂಬಂತೆ ತೋರಿತು.

ತಂದೆಯ ಅಪ್ಪಣೆಯನ್ನು ಪಡೆದುಕೊಂಡು ಸುಲೇಮಾನ ರಾಜಪುತ್ರನು ನೆಟ್ಟನೆ ವಜೀರ ಸಾದುಲ್ಲಾಖಾನನ ಮನೆಗೆ ಬಂದನು. ರಾಜೋಚಿತವಾದ ಮಹಾರಥದಲ್ಲಿ ಕುಳಿತು ಸುಲೇಮಾನನು ನಡೆದಿರುವಾಗ, ಅವನ ಮನಸ್ಸಿನಲ್ಲಿ ಉದ್ಭವಿಸಿದ ಆಹ್ಲಾದಜನಕವಾದ ವಿಚಾರಗಳಿಗಾಗಿ

ಅವನು ಸದ್ಯಃಸ್ಥಿತಿಯನ್ನು ಮರೆತು ಬಿಟ್ಟಿದ್ದನು. ಮಾರ್ಗದಲ್ಲಿ ಪ್ರಜಾ ಜನರು ಆದರದಿಂದ ಮಾಡಿದ ಪ್ರಣಾಮಗಳ ಧ್ಯಾನವೇ ಅವನಿಗಿದ್ದಿಲ್ಲ. ಅವನೊಮ್ಮೆ ತಲೆದೂಗಿದನು; ಒಮ್ಮೆ ಸಪ್ರೇಮವಾದ ದೃಷ್ಟಿಯಿಂದ ಯಾರನ್ನೋ ನೋಡಿದಂತೆ ಮಾಡಿದನು; ಕಿಂಚಿತ್ ಮಂದಹಾಸವನ್ನು ಮಾಡಿ ಮತ್ತೆ ಕೆಳಗೆ ಮೋರೆಮಾಡಿದನು. ಉದ್ರೇಕದಿಂದ ಧಾವಿಸುತ್ತಿರುವ ಕುದುರೆಗಳು ಗಕ್ಕನೆ ನಿಂತ ಕೂಡಲೆ, ಅವನ ದೇಹಕ್ಕೆ ಯಾವದೋ ಒಂದು ಪ್ರಕಾರದ ಆಘಾತವಾದಂತಾಗಿ, ಅವನು ಫಕ್ಕನೆ ಎಚ್ಚತ್ತಂತಾದನು. "ವಜೀರರ ಮನೆ ಈಗಾಗಲೇ ಬಂದಿತೆ?" ಎಂದು ಸಾರಥಿಗೆ ಪ್ರಶ್ನೆಮಾಡಿ, ಆ ತರುಣನಾದ ರಾಜಪುತ್ರನು ಚಟ್ಟನೆ ರಥದಿಂದಿಳಿದನು.

ರಾಜಪುತ್ರನು ತಮ್ಮ ಮನೆಗೆ ದಯಮಾಡುವನೆಂಬ ವಾರ್ತೆಯು ಸಾದುಲ್ಲಾಖಾನನ ಮಗನಾದ ಮಹಬೂಬಖಾನನಿಗೆ ತಿಳಿದಿತ್ತಾದ್ದರಿಂದ, ಅವನೊಳ್ಳೇ ಸಡಗರದಿಂದ ಮುಂದಾಗತಕ್ಕ ತನ್ನ ಬೀಗನಿಗೆ ಇದಿರುಗೊಂಡು ಬಂದು ಸ್ವಾಗತವನ್ನಿತ್ತನು. ಮನದ ಉಲ್ಲಾಸದಿಂದ ಕೈ-ಕೈ ಹಿಡುಕೊಂಡು ಅವರಿರ್ವರೂ ಆದರೋಪಚಾರಗಳ ನುಡಿಗಳನ್ನಾಡುತ್ತಲೂ ಸಂತೋಷದಿಂದ ನಗುತ್ತಲೂ, ಶೃಂಗರಿಸಿದ ಮಂದಿರಕ್ಕೆ ಬಂದು, ತಮತಮಗೆ ಉಚಿತವಾದ ಆಸನಗಳಲ್ಲಿ ಕುಳಿತುಕೊಂಡರು.

"ಪರಮ ಪ್ರೈವಶಾಲಿಗಳಾದ ಸುಲ್ತಾನ ದಾರಾಶಹರು, ಯುದ್ಧಕ್ಕೆ ಹೊರಡಲು ತಮಗೆ ಅಪ್ಪಣೆಯನ್ನು ದಯಪಾಲಿಸುವವರಾದರೇನು?" ಎಂದು ಮಹಬೂಬಖಾನನು ಸುಲೇಮಾನನನ್ನು ಕೇಳಿದನು.

"ದಯಪಾಲಿಸಿದರು. ಪುತ್ರವತ್ಸಲರಾದ ಆ ನನ್ನ ಹಿರಿಯರು, ನಾನು ಕೇಳಿಕೊಂಡ ಕೋರಿಕೆಯನ್ನು ಪೂರೈಸದೆ ಇರುವದೇ ಇಲ್ಲ. ಖಾನ್, ನೀವು ಸಿದ್ಧರಾಗುವಿರಷ್ಟೆ? ನಿಮ್ಮ ಹದಿನೈದುಸಾವಿರ ಜನ ಪಠಾಣರ ಪಡೆಯೂ ಒಂದೇ, ಉಳಿದ ಲಕ್ಷಾವಧಿ ಸೈನ್ಯವೂ ಒಂದೇ! ವಿಜಯಾಕಾಂಕ್ಷೆಯು ನಿಮ್ಮ ಶೌರ್ಯವನ್ನೇ ಅವಲಂಬಿಸಿದೆ."

"ಹಜರತ್, ತಮ್ಮ ಅನ್ನೋದಕಗಳಿಂದಲೇ ಈ ದೇಹವು ಬೆಳೆದಿರುವದು. ಈ ಚರಣಸೇವೆಯಲ್ಲಿ ನನ್ನೀ ದೇಹವು ಸವೆಯದಿದ್ದರೆ ನಾನು ನನ್ನ ಅನ್ನದಾತೃವಿಗೆ ಕೃತಘ್ನನಾಗುವೆನಲ್ಲವೆ? ನನ್ನ ಸೈನಿಕರು, ಇದೇ

ಕ್ಷಣವೇ ಅಪ್ಪಣೆಯಾದರೆ, ಇದೇ ಕ್ಷಣವೇ ಸನ್ನದ್ಧರಾಗಿ ಹೊರಡುವರು. ನನ್ನಿಂದ ಕ್ಷಣಮಾತ್ರವೂ ವಿಲಂಬವಾಗಕೂಡದೆಂದು ನೆನೆದು, ಈ ವಸ್ತ್ರ ಪ್ರಾವರಣಗಳನ್ನೂ ಶಸ್ತ್ರಾಸ್ತ್ರಗಳನ್ನೂ ಪ್ರಾತಃಕಾಲದಿಂದ ತೊಟ್ಟವನು ಹೀಗೆಯೇ ನಿಂತಿರುವೆನು."

"ಶಾಬ್ಬಾಸ್! ಸರದಾರ ಸಾಹೇಬ, ನಿಮ್ಮ ಸಿದ್ಧತೆಯನ್ನು ಕಂಡು ನಾನು ಪರಮ ಸಂತುಷ್ಟನಾಗಿರುವೆನು. ಇಂದೆಯೇ ಬಾದಶಹರು ನಿಮಗೆ 'ಪಾಂಚಹಜಾರಿಯ' ಅಧಿಕಾರವನ್ನೂ ವಸ್ತ್ರಗಳನ್ನೂ ಕೊಡ ಲೊಪ್ಪಿರುವರು. ಆ ವಿಧಾನವಾದ ಕೂಡಲೆ ನಾವು ಅತ್ತಿಂದತ್ತೆಯೇ ಪ್ರಯಾಣ ಮಾಡತಕ್ಕದ್ದು."

ಮುಹಬೂಬನು ಒಳ್ಳೇ ವಿನಯದಿಂದ ಸುಲೇಮಾನನಿಗೆ ಪ್ರಣಾಮ ಮಾಡಿ "ಹಜರತ್, ಇಂದು ನಾನು ಕೃತಾರ್ಥನಾದೆನು. ಬಾದಶಹರ ಕೃಪೆಗೆ ನಾನು ಪಾತ್ರನಿರುವೆನೆಂಬದನ್ನು ನಾನು ನಾಳಿನ ಯುದ್ಧದಲ್ಲಿ ಸಾಹಸದಿಂದಲೂ ಶೌರ್ಯದಿಂದಲೂ ಕಾದಿ ತೋರಿಸದೆ ಇರೆನು" ಎಂದು ತನ್ನ ಖಡ್ಗವನ್ನು ಹಿರಿದು ಹಿಡಿದು, ಒಳ್ಳೇ ಆವೇಶದಿಂದ ನುಡಿದನು.

ಸರದಾರ್, ನಿಮ್ಮ ಶೌರ್ಯವನ್ನು ನಾನು ಕಣ್ಣು ಮುಟ್ಟ ನೋಡಿದ್ದೇನೆ. ನನಗೆ ನೀವು ಹೇಳುವ ಅಗತ್ಯವೇ ಇಲ್ಲ." ಎಂದು ನುಡಿದು ಸುಲೇಮಾನನು ಆದರದಿಂದ ಮುಹಬೂಬನ ಹಸ್ತವನ್ನು ಗಟ್ಟಿಯಾಗಿ ಹಿಡಿದು ಪ್ರಣಾಮ ಮಾಡಿದನು.

ಆಮೇಲೆ ಅವರಿರ್ವರೂ ಕೂಡಿ ನಾಳಿನ ಅಭಿಯೋಗವನ್ನು ಕುರಿತು ಕೆಲಹೊತ್ತು ಆಲೋಚಿಸಿದ ಬಳಿಕ, ಮುಹಬೂಬನು ತನ್ನ ಕಾರಭಾರಿ ಯೊಡನೆ ಗೃಹಕೃತ್ಯಗಳ ಬಗ್ಗೆ ಮಾತುಕಥೆಯಾಡುವದಕ್ಕಾಗಿ, ರಾಜಪುತ್ರನ ಅಪ್ಪಣೆ ತಕ್ಕೊಂಡು—

"ಹುಜೂರ್, ಈಗಲೆ ಉಪಹಾರ ಬರುವದು, ಅಲ್ಲಿಯ ವರೆಗೆ ತುಸು ವಿಶ್ರಮಿಸಿಕೊಳ್ಳುವಿರೆಂದು ಬೇಡಿಕೊಳ್ಳುತ್ತೇನೆ." ಎಂದು ಬೆಸ ಗೊಂಡು, ಅಮಿನೆಯನ್ನು ಕುರಿತು "ಅಮಿನಾ, ಸುಲ್ತಾನರವರಿಗೆ ಸರಬತ್ತು ತಂದು ಕೊಡು!" ಎಂದು ಹೇಳಿ ಹೊರಟುಹೋದನು.

ಸುಲೇಮಾನನು ಒರ್ವನೇ ಕುಳಿತುಕೊಂಡನು. “ಅಮಿನಾನೆಯು ಸರ್ಬತ್ತು ತಂದಾಗ ಅವಳಿಂದ ನನ್ನ ಪ್ರಿಯತಮೆಯ ಸಮಾಚಾರವನ್ನು ಕೇಳಿಕೊಳ್ಳಬಹುದೋ? ನಾನು ರಣರಂಗಕ್ಕೆ ಹೊರಡುವ ಪೂರ್ವದಲ್ಲಿ ಆ ನನ್ನ ಹೃದಯರಮಣಿಯ ಮನೋಹರವಾದ ಮುಖವನ್ನು ಕಾಣದಿದ್ದರೆ ಯುದ್ಧಕ್ಕೆ ಉತ್ತೇಜನವೆಂತು ಬರುವದು!” ಮುಂತಾದ ಆಲೋಚನೆಗಳಲ್ಲಿ ಅವನು ತೊಡಗಿರುವಾಗ, ತೆರೆಯನ್ನು ಸೂಕಿ ಯಾರೋ ಬಂದರು! ಅಮಿನಾನೆಯು ಬಂದಳೆಂದು ರಾಜಕುಮಾರನು ಅತ್ತ ನೋಡಿ ದಾಕ್ಷಣವೇ ಅವನೆದೆ ಧುಗಿಲೆಂದಿತು. ಅವದೋ ಒಂದು ಅದ್ಭುತವನ್ನು ಕಂಡು ಹುಚ್ಚು ಹಿಡಿದವನಂತೆ ಅವನು ಟಕಮಕನೆ ನೋಡುತ್ತ ನಿಂತನು. ಯಾರವರು! ಅಮಿನಾನೆಯಂತೂ ಅಲ್ಲವೇ ಅಲ್ಲ! ಸುಧಾಸರಸ್ಸಿನಲ್ಲಿ ಮಿಂದುಬಂದಿರುವ ಸುರಸುಂದರಿಯಂತೆ ಗೌರವಾಗಿಯೂ ಕಮನೀಯವಾಗಿಯೂ ಇರುವ ಆ ಅಂಗಕಾಂತಿಯು ಅಮಿನಾನೆಗೆ ಹೇಗೆ ಬಂದೀತು? ಅವಳು ಶಹರ್ ಜಾದೆಯೇ ಆಗಿದ್ದಳು. ತನ್ನ ಮನೋರಮಣನು ಬಂಗಾಲ ಪ್ರಾಂತದ ಮೇಲೆ ಸಾಗಿ ಹೋಗುವನೆಂಬ ವರ್ತಮಾನವು ಶಹರ್ ಜಾದೆಗೆ ತಿಳಿದಿತ್ತು. ಯುದ್ಧಕ್ಕೆ ಹೊರಡುವ ಪ್ರಿಯತಮನ ದರ್ಶನಲಾಭವನ್ನು ಹೊಂದದೆ ಇರಲಿಚ್ಛಿಸುವ ಚದುರೆಯರಾರು? ಶಹರ್ ಜಾದೆಯು ಅಮಿನಾನೆಯನ್ನು ತಡೆದು, ಅವಳ ಕೈಯಲ್ಲಿರುವ ಸರಬತ್ತಿನ ಪಾತ್ರವನ್ನು ತಾನೇ ತೆಗೆದುಕೊಂಡು, ಸುಲ್ತಾನ ಸುಲೇಮಾನ ಸುಖೋಸಿದ್ದೆಡೆಗೆ ಒಳ್ಳೇ ಒಯ್ಯಾರದಿಂದಲೂ ಸೊಬಗಿನಿಂದಲೂ ಬಂದು, ಸರಬತ್ತಿನ ಪಾತ್ರವನ್ನು ರಾಜಪುತ್ರನ ಮುಂದಿರಿಸಿ ಪ್ರಣಾಮ ಮಾಡಿ ಮಂದಹಾಸಗೈದಳು.

“ಸುಂದರಿ, ನೀನೇಕೆ ಇಷ್ಟು ಶ್ರಮ ಮಾಡಿದಿ? ಅಮಿನಾನೆಯು ಈ ಸರಬತ್ತನ್ನು ತರುತ್ತಿದ್ದಿಲ್ಲವೆ?” ಎಂದು ಸುಲೇಮಾನನು ಆದರದಿಂದ ಕೇಳಿದನು.

“ನಾನಾದರೇನು, ದಿಲ್ಲಿಯ ಸಿಂಹಾಸನದ ದಾಸಿಯೇ ಅಲ್ಲವೆ?” ಎಂದು ಶಹರ್ ಜಾದೆಯು ವಿನಯದಿಂದ ನುಡಿದಳು.

“ಪ್ಯಾರೀ, ದಿಲ್ಲಿಯ ಸಿಂಹಾಸನಾಧಿಪತಿಗಳಾಗತಕ್ಕವರು ಕೂಡ ನಿನ್ನಂಥ ನಾರೀಶಿರೋಮಣಿಯ ದಾಸರಾಗತಕ್ಕವರೇ ಅಲ್ಲವೆ?” ಎಂದು

ಸುಲೇಮಾನನು ಬಹು ಪ್ರೇಮದಿಂದ ಕೇಳಿದನು.

ಶಹಜಾದೆಯು ಸಲಜ್ಜಸ್ಮಿತಳಾಗಿ ಕೆಳಗೆ ನೋಡುತ್ತ "ಸರಬತ್ತು ಸೇವಿಸಿ ನೋಡಬೇಕು!" ಎಂದು ಪ್ರಾರ್ಥಿಸಿದಳು.

ರಾಜಕುಮಾರನು ಭರದಿಂದೆದ್ದು ಸರಬತ್ತಿನ ಪಾತ್ರವನ್ನು ಆ ಬಿಂಬಾಧರೆಯ ಮುಂದೆ ಹಿಡಿದು "ಪ್ರಿಯೆ, ಇದರಲ್ಲಿಯ ಅರ್ಧವು ನಿನ್ನದು. ಮೊದಲು ನೀನು ತೆಗೆದುಕೊಂಡು ಇದರಲ್ಲಿ ನಿನ್ನ ಬಿಂಬಾಧರದ ಸ್ವಾರಸ್ಯ ವನ್ನು ಕೂಡಿಸಿಕೊಟ್ಟೆಯಾದರೆ ನಾನು ಬಳ್ಳೇ ಆನಂದದಿಂದ ಕುಡಿಯುವೆನು," ಎಂದು ನುಡಿದು ಮಂದಹಾಸಗೈಯುತ್ತ ಶಹಜಾದೆಯ ಮುಖವನ್ನು ಪ್ರೇಮಮಯವಾದ ದೃಷ್ಟಿಯಿಂದ ನೋಡುತ್ತ ನಿಂತನು.

"ಕಿಂಚಿತ್ ಶೃಂಗಾರರಸವು ಹೆಚ್ಚಾಗಿ ತೋರಿದಂತಾಯಿತು!" ಎಂದು ಶಹಜಾದೆಯು ಸ್ಮಿತವದನೆಯಾಗಿ ನುಡಿದರೂ, ಸುಲೇಮಾನನ ಎದೆಯ ಮೇಲೆ ದೊಡ್ಡ ಗದಾಪ್ರಹಾರವೇ ಆದಂತಾಯಿತು. ನಾಚಿಕೆಯಿಂದ ಅವನು ಅಧೋಮುಖನಾಗಿ ಕುಳಿತುಕೊಂಡಿದ್ದನಾದ್ದರಿಂದ, ಆ ರಮಣಿಯ ಪ್ರೇಮಕಟಾಕ್ಷವು ಅವನಿಗೆ ಕಾಣಲಿಲ್ಲ.

ಪ್ರಿಯನಲ್ಲಿ ವಿಷಾದವುಂಟಾದದ್ದು ಕಂಡು ಶಹಜಾದೆಯು ಖಿನ್ನಳಾದಳು. ಪ್ರಿಯನೊಡನೆ ಪ್ರೇಮಾಲಾಪಗಳನ್ನಾಡುತ್ತಿರುವಾಗ ರಸಭಂಗವಾದದ್ದು ಯಾವ ಕಾಮಿನಿಗೆ ರುಚಿಸುವದು? ಅದಕ್ಕಾಗಿ ಅವಳು ಆ ರಾಜಪುತ್ರನ ಆಜ್ಞೆಯ ಮೇರೆಗೆ ಬಟ್ಟಲದಲ್ಲಿಯ ಸರಬತ್ತನ್ನು ತುಸು ಸೇವಿಸಿ, ಆ ಬಟ್ಟಲವನ್ನು ಒಯ್ಯಾರದಿಂದೊಯ್ದು ಅವನ ಕೈಗೆ ಕೊಟ್ಟು ನಗುತ್ತ "ಬಿಂಬಾಧರದ ಸ್ವಾದವು ಈ ಮಧ್ಯವರ್ತಿಯಾದ ಪೇಯದ ಮುಖಾಂತರವಾಗಿ ಹೇಗೆ ರುಚಿಸಿತೆಂಬುದನ್ನು ಪರಮ ರಸಿಕರಾದ ನೀವು ಹೇಳಬಲ್ಲಿರೇನು?" ಎಂದು ವಿನೋದದಿಂದ ಕೇಳಿದಳು.

ಸುಲೇಮಾನನು ಆ ಬಟ್ಟಲವನ್ನೆತ್ತಿ ಅದರಲ್ಲಿರುವ ಬಿಂಬಾಧರಾಮೃತದ ಶ್ಲೇಷವನ್ನು ಹುಡುಕುತ್ತ ಕುಡಿದು "ಬಹು ಸ್ವಾರಸ್ಯ ಮಯವಾಗಿದೆ! ಆದರೂ ಯಾವ ಪದಾರ್ಥದ ಸ್ವಾದವಾದರೂ ಪ್ರತ್ಯಕ್ಷವಾಗಿ ಸೇವಿಸಿದರೆ ಸರ್ವೋತ್ಕೃಷ್ಟವಾಗಿಯೂ, ಮಧ್ಯವರ್ತಿಯ ಮುಖಾಂತರವಾಗಿ ಸೇವಿಸಿದರೆ ಕಿಂಚಿತ್ ಹೀನವಾಗಿಯೂ ಕಾಣುವ

ದುಂಟು" ಎಂದು ನುಡಿದು ಆ ಸುಂದರಿಯ ಮುಖದಲ್ಲಿ ತೋರುತ್ತಿರುವ ವ್ರೀಡಾಯುತವಾದ ರಕ್ತಿಮೆಯ ಶೋಭೆಯನ್ನು ಲೋಭದಿಂದ ನೋಡುತ್ತ ನಿಂತನು.

ಶಹಜಾದೆಯು ವಿನಯದಿಂದ ಸುಲೇಮಾನನ ಸಮೀಪದಲ್ಲಿ ನಿಂತುಕೊಂಡು "ಇಂದೆಯೇ ನೀವು ಯುದ್ಧಕ್ಕೆ ಹೊರಡುವದಲ್ಲವೆ?" ಎಂದು ಕೇಳಿದಳು.

"ಅಹುದು. ಇಂದೆಯೇ ಹೊರಡುವದು ನಿಶ್ಚಿತವಾಗಿದೆ. ಅದಕ್ಕಾಗಿಯೇ ಹೋಗುವದಕ್ಕೆ ಮುಂಚಿತವಾಗಿ ತಮ್ಮ ಅಪ್ಪಣೆಯನ್ನು ಕೇಳಿಕೊಳ್ಳಲು ಬಂದಿದ್ದೇನೆ."

"ನನ್ನ ಅಪ್ಪಣೆಯೇಕೆ? ಅಪ್ಪಣೆಯನ್ನು ಕೊಡಲಿಕ್ಕಾದರೂ ನಾನೆಷ್ಟರವಳು?" ಎಂದು ಬಹು ಮೋಹ ಬರುವಂತೆ ಸುಲೇಮಾನನ ಮುಖವನ್ನು ನೋಡಿ ನುಡಿದಳು.

"ಪ್ರಿಯೆ, ನೀನು ನನ್ನ ಅರ್ಧಾಂಗಿಯಾಗಲಿಕ್ಕೆ ಒಪ್ಪಿರುವಿಯಲ್ಲವೆ? ನನ್ನ ಅರ್ಧಾಂಗಿಯಾಗತಕ್ಕವಳ ಅಪ್ಪಣೆಯಿಲ್ಲದೆ ನಾನು ಯುದ್ಧಕ್ಕೆ ಹೋಗಿ ಮಾಡುವದಾದರೂ ಏನು?"

"ಮಾಡುವದೇನಂದರೆ! ವಿಜಯವನ್ನು ಸಂಪಾದಿಸುವದು!"

ಸುಲೇಮಾನನು ಆಡಿದ ಮಾತನ್ನು ಶಹಜಾದೆಯು ನಿಷೇಧಿಸದಲೆ ಹಾಗೆಯೇ ಸರಲವಾಗಿ ಮಾತಾಡಿದ್ದು ಕಂಡು, ಆ ಪ್ರೇಮಿಯಾದ ತರುಣನಿಗೆ ತುಸು ಧೈರ್ಯ ಬಂದಂತಾಗಿ, ಅವನು ಚಟ್ಟನೆ ಎದ್ದು ಆ ತರುಣಿಯ ಪದ್ಮಹಸ್ತವನ್ನು ಪಿಡಿದು "ಸುಂದರಿ, ಈ ಸುಲೇಮಾನನು ನಿನ್ನ ಪ್ರೇಮಕ್ಕೆ ಪಾತ್ರನಾಗಿರುವನೆಂದು ನೀನು ಆಶ್ವಾಸನವನ್ನು ಕೊಟ್ಟೆಯಾದರೆ, ಇದೇ ಸ್ಫೂರ್ತಿಯಿಂದಲೇ ಯುದ್ಧಮಾಡಿ, ಸುಜಾ ಸುಲ್ತಾನರನ್ನು ಸಂಪೂರ್ಣವಾಗಿ ಸೋಲಿಸಿ ಬಂದು ವಿಧಿಯುಕ್ತವಾಗಿ ಇದೇ ಪಾಣಿಗ್ರಹಣವನ್ನು ಮಾಡುವೆನು" ಎಂದು ಹೇಳಿ, ಅವಳ ಬಿಂಬಾಧರವನ್ನು ಚುಂಬಿಸಹೋದನು.

ಶಹಜಾದೆಯು ತನ್ನ ಮುಖವನ್ನು ತಿರುವಿ, "ವಿಧಿಯುಕ್ತವಾದ ಪಾಣಿಗ್ರಹಣದ ನಂತರವೇ ಅಧರರಸಕ್ಕೆ ಮಾಧುರ್ಯವು ಬರುವ

ದುಂಟು'' ಎಂದು ನುಡಿದು ಚುಂಬನವನ್ನು ತಪ್ಪಿಸಿಕೊಂಡಳು.

" ಆಗಲಿ ! ಪ್ರಿಯೇ ಈ ಅಭಿಪ್ರಾಯವು, ನೀನು ನನ್ನನ್ನು ಪ್ರೀತಿಸುವಿ ಎಂಬುದನ್ನು ಸೂಚಿಸುವದಿಲ್ಲವೆ ? " ಎಂದು ಆರ್ತನಂತೆ ಸುಲೇಮಾನನು ಕೇಳಿದನು.

" ನಿಮ್ಮ ಮನಸ್ಸಿಗೆ ನಿಶ್ಚಯವಾಗಿ ತಿಳಿದಿದ್ದ ಮಾತನ್ನು ನಾನು ಬಾಯಿಂದ ಆಡಿಯೇ ತೋರಿಸಬೇಕೆ ? " ಎಂದು ಆ ಸುಂದರಿಯು ಬೆವರಿ ತೊಯಿದಿರುವ ತನ್ನ ಹಸ್ತವನ್ನು ಮೆಲ್ಲನೆ ಬಿಡಿಸಿಕೊಂಡು ಕೇಳಿದಳು.

ಸುಲೇಮಾನನು ಬಲಾತ್ಕಾರದಿಂದ ಅವಳನ್ನು ಬದಿಯಲ್ಲಿ ಕುಳ್ಳಿರಿಸಿಕೊಂಡು, " ಮನೋರಮೆ, ಇಂದು ನಾನು ಕೃತಾರ್ಥನಾದೆನು. ದಿಲ್ಲೀಶ್ವರನ ವೈಭವದಲ್ಲಿ ನಾನು ಪಾಲುಕಾರನಾಗಿ ಹುಟ್ಟಿದ್ದರ ಸಾರ್ಥಕ್ಯವು ಕೂಡಾ ಈಗ ಆಯಿತು! ನಿನ್ನ ಪಾಣಿಗ್ರಹಣದ ಆಸ್ಥೆಗಾಗಿ ನಾನು ಉತ್ಸಾಹದಿಂದ ಕಾದುವೆನು. ನಿನ್ನ ಸಮಾಗಮದಿಂದ ನಾನು ಸೌಜನ್ಯಶಾಲಿಯಾದ ರಾಜಕುಮಾರನೆಂದೆನಿಸಿಕೊಳ್ಳುವೆನು. ದೈವವೇ ಅನುಕೂಲವಾಗಿದ್ದರೆ ನಿನ್ನೊಡನೆ ಮಯೂರಾಸನವನ್ನೇರಿ, ನ್ಯಾಯದಿಂದ ರಾಜ್ಯಪರಿಪಾಲನವನ್ನು ಮಾಡುವೆನು ! " ಎಂದು ಅವಳ ಮುಖವನ್ನು ಅನೀಮಿಷವಾಗಿ ನೋಡುತ್ತ ನುಡಿದನು.

" ಅದು ದೈವವಿದ್ದರೆ ಆಗುವದು ! ಆದರೆ ನಿಮ್ಮಲ್ಲಿ ಆಸಕ್ತವಾಗಿರುವ ನನ್ನ ಪ್ರೇಮವು ನಿಶ್ಚಲವಾಗಿರುವದು. ಈ ಶಹಜಾದೆಯು ಇವೇ ಚರಣಗಳ ಹೊರತಾಗಿ ಇನ್ನೊಬ್ಬ ನರನ ಹೆಂಡತಿಯಾಗಲರಿಯಳು. ಸುಲೇಮಾನ ಸುಲ್ತಾನರು ನನ್ನ ಪಾಣಿಗ್ರಹಣವನ್ನು ಮಾಡದೆ ಇದ್ದರೂ ನಾನು ಯಾವಜ್ಜೀವ ಅವಿವಾಹಿತೆಯಾಗಿರುವೆನು. "

" ವಾಃ ! ಪ್ರಿಯೇ, ಹೀಗಿದ್ದ ಪಕ್ಷದಲ್ಲಿ ಈ ಬಿಂಬಾಧರವನ್ನು ಚುಂಬಿಸಿದರೆ ಪರಸ್ತ್ರೀಯ ಸ್ಪರ್ಶದ ಪಾಪವು ನನಗೆ ಬರಲಾರದು ! " ಎಂದು ಸುಲೇಮಾನನು ಉದ್ರೇಕದಿಂದೆದ್ದು ಅನಾಸ್ವಾದಿತವಾದ ರಸವುಳ್ಳ ಆ ನವಮಧುವನ್ನು ಸೇವಿಸಿದನು.

ಶಹಜಾದೆಯು ಒನಪಿನಿಂದ ಹಿಂದಕ್ಕೆ ಸರಿದು ನುಡಿದದ್ದು " ಅಬಲೆ

ಯರಾದ ನಾವು ಪುರುಷರಲ್ಲಿಯ ಉದ್ದಾಮತನವನ್ನು ಸಹಿಸಲೇಬೇಕು. ಅದಿ
ರಲಿ! ತಾವು ಸುಜಾ ಸುಲ್ತಾನರೊಡನೆ ಯುದ್ಧ ಮಾಡಲಿಕ್ಕೆ ಹೊರಡುವಿರಿ,
ಒಳ್ಳೇ ಎಚ್ಚರಿಕೆ ಕಂಡಿರಾ! ಆ ಸುಲ್ತಾನರು ವ್ಯಾಘ್ರನಂತೆ ನಿರ್ಘೃಣ
ರಾದ ವೀರರಾಗಿರುವರು. ಅವರಿಗೆ ಕ್ಷಮೆ, ಉದಾರಭಾವ, ಕ್ಷಾತ್ರಧರ್ಮ
ಮುಂತಾದವುಗಳು ಗೊತ್ತೇ ಇಲ್ಲ!''

"ಪ್ರಿಯೇ, ಅಪಜಯದ ಭಯವೇ ಇಲ್ಲ! ಮನೋರಮವಾದ ನಿನ್ನ
ಸುಂದರವಾದ ಮೂರ್ತಿಯನ್ನು ದಿಲ್ಲಿಯ ಬಾದಶಾಹಿಣಿಯನ್ನಾಗಿ ಮಾಡುವ
ನಿಶ್ಚಯವನ್ನು ತೊಟ್ಟವನಾದ ನನ್ನ ಮಾರ್ಗದಲ್ಲಿ ಯಾವ ವಿಘ್ನಗಳೂ
ನಿಲ್ಲಲಾರವು! ಪ್ರಿಯೆ, ಅಪ್ಪಣೆ ಕೊಡು ಇನ್ನು; ಅಲ್ಲಿ ನೋಡು, ಮಹ
ಬೂಬಖಾನರು ಇತ್ತಲೇ ಬರುತ್ತಿರುವರು."

ಶಹಜಾದೆಯು ಮತ್ತೊಮ್ಮೆ ತನ್ನ ಪ್ರಿಯನ ಮುಖವನ್ನು
ಸುಪ್ರೇಷ್ಟವಾಗಿ ನೋಡಿ ಮಂದಸ್ಮಿತೆಯಾಗಿ "ಹೋಗಿಬನ್ನಿರಿ! ನಿಮ್ಮ
ಖಡ್ಗಕ್ಕೆ ಅಖಂಡವಾದ ವಿಜಯವಿರಲಿ!" ಎಂದು ನುಡಿದವಳೇ, ಆ
ಸ್ಥಾನವನ್ನು ಬಿಟ್ಟು ನಡೆದಳು.

## ೨೪

ಎಲ್ಲರಿಗಿಂತ ಮುಂಚಿತವಾಗಿ ಆಗ್ರಾ ಪಟ್ಟಣವನ್ನಾಕ್ರಮಿಸಿಕೊಳ್ಳ
ಬೇಕೆಂದು ಸುಜಾ ಸುಲ್ತಾನನು ಮಿತಿಮೀರಿದ ಆತುರತೆಯುಳ್ಳವನಾಗಿ
ದ್ದನು. ತಾನು ಬಾದಶಹನಾದ ಮೇಲೆ, ಸೈನ್ಯಾಧಿಕಾರಿಗಳಿಗೆಲ್ಲರಿಗೆ
ಉಚ್ಚತರದ ಅಧಿಕಾರಗಳನ್ನೂ ಹೇರಳವಾದ ಕಾಣಿಕೆಗಳನ್ನೂ ದೊಡ್ಡ
ದೊಡ್ಡ ಉಂಬಳಿಗಳನ್ನೂ ಕೊಡುವೆನೆಂದು ಸುಜಾಶಹನು ಪ್ರಮಾಣ
ಪೂರ್ವಕವಾಗಿ ವಚನಗಳನ್ನು ಕೊಟ್ಟಿದ್ದನಾದ್ದರಿಂದ, ಅವರೆಲ್ಲರೂ ಒಳ್ಳೇ
ಉಬ್ಬಿನಿಂದ ಕಾಳಗಕ್ಕೆ ಹೊರಟಿದ್ದರು. ಸುಜಾ ಸಾಹೇಬರ ಅಧಿಕಾರಕ್ಕೊ
ಳಗಾಗಿದ್ದ ಬಂಗಾಲ ಪ್ರಾಂತದಲ್ಲಿಯೇ ನಡೆತರುತಿದ್ದ ಆತನ ಸೈನ್ಯಕ್ಕೆ
ಕಾಲಕಾಲಕ್ಕೆ ಸಮೀಚೀನವಾದ ಅನ್ನಸಾಮುಗ್ರಿಗಳು ಸಿಕ್ಕುತ್ತಿದ್ದವಾದ್ದ
ರಿಂದ, ಆ ಜನರ ಉಲ್ಲಾಸ ಉತ್ಸಾಹಗಳನ್ನು ಹಿಡಿದವರಾರು?

ಯುದ್ಧವಾದರೆ ಆಗ್ರಾಪಟ್ಟಣದ ಸಮೀಪದಲ್ಲಿಯೇ ಎಂದು ಸುಜಾ ಶಹನ ತಿಳುವಳಿಕೆಯಾಗಿತ್ತು. ಆ ಕೋಟೆಯಲ್ಲಂತೂ ಅವನಿಗೆ ಅನುಕೂಲರಾದ ಗೃಹಭೇದಿಗಳು ಇದ್ದೇ ಇದ್ದರು. ಹೀಗಿದ್ದ ಬಳಿಕ ಅವನಿಗೆ ಅಪಜಯದ ಭೀತಿಯೆಲ್ಲಿ? ಅವನು ನಿಶ್ಶಂಕನಾಗಿ ಮಾರ್ಗಕ್ರಮಣ ಮಾಡುತ್ತ ವಿಲಾಸಚೇಷ್ಟಿತಗಳಲ್ಲಿ ನಿಮಗ್ನನಾಗಿಹೋಗಿದ್ದನು.

ಅಲ್ಲಾಹಾಬಾದಿನ ಪೂರ್ವಕ್ಕೆ ಎರಡು ಹರದಾರಿ ದೂರದಲ್ಲಿರುವ ಬೈಲುಪ್ರದೇಶದಲ್ಲಿ ಆ ಸುಲ್ತಾನನು ಪರಿವಾರದೊಂದಿಗೆ ಬಂದಿಳಿದಾಗ, ಸುಲೇಮಾನ ಸುಖೋನು ತನಗೆ ಪ್ರತಿಕೂಲನಾಗಿ ಸಾಗಿಬಂದು ತನ್ನ ಠಾಣ್ಯವನ್ನು ಸಮೀಪದಲ್ಲಿಯೆ ಇಳಿಸಿರುವನೆಂಬ ವರ್ತಮಾನವು ಅವನಿಗೆ ಚಾರರ ಮುಖಾಂತರವಾಗಿ ತಿಳಿದುಬಂದಿತು. ಜಯಸಿಂಗ, ದಿಲೇರಖಾನ ಮುಂತಾದ ಅತುಲ ಪರಾಕ್ರಮಿಗಳಾದ ಸೇನಾನಿಗಳನ್ನು ಕರಕೊಂಡು, ಸುಲೇಮಾನನು ತನ್ನ ಮೇಲೆ ಸಾಗಿಬಂದಿರುವನೆಂದು ಕಂಡು, ಸುಜಾ ಸುಲ್ತಾನನು ಹತಾಶನಾದನು. ಹಿಂತಿರುಗಿ ಹೋಗುವನೇ, ತನ್ನ ಮನೋರಥಕ್ಕೆ ನೀರು ಬಿಟ್ಟಂತಾಗುವದು; ಇದಿರಾಗಿ ನಿಲ್ಲುವನೇ, ಸೋಲು ಗೆಲುವಿನ ನಿಶ್ಚಯವಾಗಲೊಲ್ಲದು. ಬಾದಶಹರ ಆಜ್ಞೆಯನ್ನು ಮೀರಿ ದಂಡೆತ್ತಿ ಬಂದ ಬಂಡುಗಾರನಿಗೆ ವಿಜಯಪ್ರಾಪ್ತಿಯಲ್ಲದೆ ಮತ್ತೊಂದು ಉಪಾಯದಿಂದ ಪ್ರಾಣ ಉಳಿಯುವ ಮಾರ್ಗವೇ ಇದ್ದಿಲ್ಲ. ಸಾಯುವ ಸಂಕಟಕ್ಕೆ ಕ್ಷುದ್ರವಾದ ಬೆಕ್ಕು ಕೂಡ ಅಟ್ಟಿಬಂದವನ ಗಂಟಲಿಗೆ ಹಾರಲು ಯತ್ನಮಾಡುತ್ತಿರಲು, ವೀರನಾದ ಸುಜಾ ಸುಲ್ತಾನನು ಹಿಂದೆ ಬಾಲ ಹಾಕಿಕೊಂಡು ಓಡುವನೆ?

ಇತ್ತ ಸುಲೇಮಾನನ ಸನ್ನಾಹದಲ್ಲಿಯಂತೂ ಕೊರತೆಯು ತಿಲಾಂಶವಾದರೂ ಇದ್ದಿಲ್ಲ. ಅಸಹಾಯ ಶೂರನಾದ ತರುಣನವನು! ಅವನ ಸೇನಾಪತಿಗಳು ದರಗಂಡ ವೀರರು. ಅನೇಕ ಯುದ್ಧಗಳಲ್ಲಿ ಕಾದಿ ನುರಿತ ಸೇನೆಯು ಪ್ರಚಂಡವಾದ ಪಡೆಯು ಅಪಜಯದ ಭೀತಿಯನ್ನರಿಯದೆ ಸಾಗಿ ನಡೆದಿರುವದು.

ತುಮುಲವಾದ ಸಂಗ್ರಾಮವೆಸಗಿತು. ಮಹಾಸಾಗರದಲ್ಲಿಯ ಪ್ರಚಂಡವಾದ ಪ್ರವಾಹಗಳೊಂದಕ್ಕೊಂದು ಕೂಡಿ ಸುತ್ತಾಡಿ ಉಕ್ಕೇರು

ತ್ತಿರುವಂತೆ ಸುಜಾ ಸುಲೇಮಾನರ ಸೇನೆಗಳು ಉದ್ರೇಕದಿಂದ ಕಾದು ತ್ತಿರುವ ಘೋರತರವಾದ ಸಂಗ್ರಾಮವೆಂದರೆ ಬುಭುಕ್ಷಿತನಾದ ಯಮ ದೇವರು ಮಾಡುತ್ತಿರುವ ಸಮೀಚೀನವಾದ ಪಾರಣೆಯೇ ಆಗಿತ್ತು. ಸಹ ಸ್ರಾವಧಿ ಜನ ವೀರರು ಪ್ರತಿಕ್ಷಣದಲ್ಲಿಯೂ ಮಡಿದು ಹೋಗುತ್ತಿದ್ದರೂ ಉಳಿದವರು ಮರಣದ ಭೀತಿಯನ್ನು ಧಿಕ್ಕರಿಸಿ ಹಿಂಜರಿಯದೆ ಕಾದುತ್ತಿ ದ್ದರು. ಯಾರಿಗೆ ಜಯವೋ ತಿಳಿಯಲೊಲ್ಲದು. ಆಗ ಮಹಬೂಬನೂ ಸುಲೇಮಾನನೂ ಹದಿನೈದು ಸಾವಿರ ಜನ ಪಠಾಣ ವೀರರನ್ನು ತೆಗೆದು ಕೊಂಡು "ಬೋಲೋ ದೀನ್! ಬೋಲೋ ದೀನ್!!" ಎಂದು ಜಯ ಘೋಷವನ್ನು ಮಾಡುತ್ತೆ, ಶತ್ರುಸೇನೆಯ ಮೇಲೆ ಒಳ್ಳೇ ಸಾಹಸದಿಂದ ಸಾಗಿ ಹೋಗಿ, ಭಯಂಕರವಾದ ಕೊಲೆ ಮಾಡತೊಡಗಿದ್ದನ್ನು ಕಂಡು, ಸುಜಾಶಹನ ಸೈನ್ಯದ ಒಂದು ಭಾಗವು ಎದೆಯೊಡಕೊಂಡು ಓಡಲಾರಂಭಿ ಸಿತು. ಈ ಸಂಗತಿಯು ಉಳಿದ ಭಾಗದವರಿಗೆ ತಿಳಿದ ಕೂಡಲೆ, ಅವರೂ ಧೈರ್ಯಗುಂದಿ ಕಾಲ್ದೆಗೆದು ಪಲಾಯನಕ್ಕೆ ಪ್ರಾರಂಭಮಾಡಿದರು. ಸುಜಾ ಸುಲ್ತಾನನು ಆ ಜನರನ್ನು ತಡೆದು ನಿಲ್ಲಿಸಬೇಕೆಂದು ಕೂಗಿಕೂಗಿ ಗಂಟಲು ಹರಕೊಂಡನು. ಕೇಳುವವರಾರು? ಕಡೆಗೆ ಆ ವೀರನಿಗೂ ಪಲಾಯನವೇ ಪ್ರಾಪ್ತವಾಯಿತು. ಆನೆಗಳು ಅಡ್ಡಾತಿಡ್ಡಾಗಿ ಓಡಿ ಅನೇಕ ರನ್ನು ತುಳಿದು ಹಾಕಿದವು. ರಾವುತರಿಲ್ಲದ ಕುದುರೆಗಳು ನಾಗಾಲೋಟ ವನ್ನು ಬಿಟ್ಟು ಎತ್ತೆತ್ತಲೋ ಹೋದವು. ಮದ್ದು ಗುಂಡು ಅನ್ನಸಾಮಗ್ರಿ ಗಳೆಲ್ಲ ಸಮರಭೂಮಿಯಲ್ಲಿ ಸೂರಾಡಿ ಹೋದವು.

ಜಯಶಾಲಿಯಾದ ಸುಲೇಮಾನನ ಸೈನ್ಯದವರಿಗೆ ಶತ್ರುಗಳನ್ನು ಬೆನ್ನ ಟ್ಟುವ ಕೆಲಸವು ಬೇಟೆಯಾಟದಂತೆ ಒಳ್ಳೇ ವಿನೋದಾಸ್ಪದವಾಯಿತು. ಬರ್ಚಿಗಳ ಹೊಡೆತವನ್ನು ತಪ್ಪಿಸಿಕೊಂಡು ಓಡಿದ ಶತ್ರುಗಳು ಬೆನ್ನಿಗೆ ಗುಂಡು ಬಡಿಸಿಕೊಂಡು ವ್ಯರ್ಥವಾಗಿ ಸತ್ತುಹೋದರು. ಕಡೆಗೆ ಜೇಸಿಂಗನೇ ಕಹಳೆಗಳನ್ನು ಊದಿಸಿ ಬೆನ್ನಟ್ಟುವ ಕೆಲಸವನ್ನು ನಿಲ್ಲಿಸಿದನು.

ಆಯತ್ತವಾಗಿ ಶತ್ರುವು ಕೈಗೆ ಸಿಕ್ಕುವ ಸಮಯದಲ್ಲಿ ಜೇಸಿಂಗನು ಯುದ್ಧವನ್ನು ನಿಲ್ಲಿಸಿದ್ದನ್ನು ಕಂಡು, ಸುಲೇಮಾನನಿಗೆ ಪರಮಾವಧಿಯ ಸಂತಾಪವಾಗಿ, ಅವನು ಆ ರಜಪೂತ ಸೇನಾಪತಿಯಿದ್ದಲ್ಲಿಗೆ ಬಂದು

"ರಾಜಾಜೀ, ನೀವಿದನ್ನೇನು ಮಾಡಿದಿರಿ? ಯುದ್ಧವನ್ನು ನಿಲ್ಲಿಸಿದ್ದೇಕೆ?" ಎಂದು ರಾಜಕುಲೋತ್ಪನ್ನರಿಗುಚಿತವಾದ ದರ್ಪದಿಂದಲೂ ಛಲದಿಂದಲೂ ಕೇಳಿದನು.

"ಏನಾಯಿತು ಸರಕಾರ? ಯುದ್ಧದ ಮುಖ್ಯ ಕಾರ್ಯವು ತೀರಿದ ಬಳಿಕ, ನಿಷ್ಕಾರಣವಾದ ಕೊಲೆ ಮಾಡುವದರಲ್ಲಿ ಅರ್ಥವೇನೂ ಇಲ್ಲ. ಸುಜಾ ಸುಲ್ತಾನರ ಬಲವೆಲ್ಲ ಮುರಿದುಹೋಯಿತು. ಅವರನ್ನು ಹಿಡಿದು ಮಾಡುವದೇನು?" ಎಂದು ಜೇಸಿಂಗನು ಯತ್ಕಿಂಚಿತ್ತಾದರೂ ಮನಸ್ಸಿನ ಶಾಂತತೆಯನ್ನು ಕಳೆದುಕೊಳ್ಳದೆ ನಗುತ್ತ ಕೇಳಿದನು.

"ಮಾಡುವದೇನೆಂದರೆ!! ರಾಜದ್ರೋಹಿಗಳಿಗೆ ಉಚಿತವಾದ ಶಾಸನವನ್ನೇ ಸುಜಾ ಸುಲ್ತಾನರಿಗೆ ಮಾಡಿಸಬೇಕಲ್ಲವೆ?" ಎಂದು ಸುಲೇಮಾನನು ವಿಷಣ್ಣನಾಗಿಯೂ ಕಿಂಚಿತ್ ಕ್ರುದ್ಧನಾಗಿಯೂ ಕೇಳಿದನು.

"ಸುಜಾಸಾಹೇಬರಿಗೆ ಈಗಾದಷ್ಟು ಶಾಸನವೇ ಸಾಕೆಂದು ಬಾದಶಹರ ಆಜ್ಞೆಯಿರುವದು."

ಆ ಉತ್ಸಾಹಭಂಜಕವಾದ ರಾಜಾಜ್ಞೆಯನ್ನು ಕೇಳಿ ಸುಲೇಮಾನನಿಗೆ ಅಪ್ರತಿಷ್ಠೆಯಾಗಿ, ಅವನ ಕಣ್ಣುಗಳಲ್ಲಿ ಅಶ್ರುಗಳು ಒತ್ತಿಬಂದವು. ಅವನು ತನ್ನ ಖಡ್ಗವನ್ನು ನೆಲಕ್ಕೆ ಚೆಲ್ಲಿಕೊಟ್ಟು ಜಯಸಿಂಗನನ್ನು ಕುರಿತು ಅಂದದ್ದು:—"ಬಾಬಾಜೀ, ಸಾಕು! ಸಾಕು!! ಈ ಸಾಮ್ರಾಜ್ಯದಲ್ಲಿ ಇರುವದೇ ಸಾಕು!!! ಬಾದಶಹರು ಈ ಪರಿಯಾಗಿ ಮಾಡುತ್ತಿರುವ ಸವ್ಯಾಪಸವ್ಯದ ಕೃತಿಗಳನ್ನು ನೋಡಲಾಗಿ, ನಮ್ಮೀ ಸಾಮ್ರಾಜ್ಯವು ಹುರಿದು ಸುಟ್ಟು ಹೋಗುವದೇ ಗಟ್ಟಿ! ಬಾಬರಶಹರ ಮೂಲ ನಿವಾಸಸ್ಥಾನವಾದ ಸಮರ್ಕಂದಕ್ಕೆ ಹೋಗಿ, ಅಲ್ಲಿ ಒಕ್ಕಲಿಗನಾಗಿ ನಾನು ರೆಂಟೆಯನ್ನು ಹೊಡೆಯುತ್ತಲಿರುವದೇ ಹೆಚ್ಚು ಮರ್ಯಾದೆಯ ಕೆಲಸವಾಗಿ ತೋರುತ್ತದೆ."

ಜೇಸಿಂಗನು ಸುಲೇಮಾನನನ್ನು ಅಂತಃಕರಣದಿಂದಪ್ಪಿಕೊಂಡು ಮಾತಾಡಿದ್ದು:—"ಸುಲ್ತಾನ್, ಹಾಗೆ ವಿಷಾದಕ್ಕೆ ಈಡಾಗಬೇಡಿರಿ. ನಿಮ್ಮನ್ನು ದಿಲ್ಲಿಯ ಸಿಂಹಾಸನದ ಮೇಲೆ ಕುಳ್ಳಿರಿಸುವ ಕೆಲಸ ನನ್ನದು. ಸುಜಾಸಾಹೇಬರ ಬೆನ್ನಟ್ಟಿ ಕಾಲಕಳೆಯುವದಕ್ಕಿಂತಲೂ ನಮಗೆ ರಾಜ

ಥಾನಿಯಲ್ಲಿ ಹೆಚ್ಚಿನ ಮಹತ್ತ್ವದ ಕಾರ್ಯಗಳಿವೆ. ಪ್ರತಿಯೊಂದು ಕ್ಷಣವು ಬೆಲೆಯುಳ್ಳದ್ದು! ದಾರಾ ಸುಲ್ತಾನರು ಅತುಲವಾದ ಪರಾಕ್ರಮವುಳ್ಳವ ರಾದರೂ, ಸಾರಾಸಾರ ವಿಚಾರವು ಅವರಲ್ಲಿ ಕಡಿಮೆಯೆಂದು ಹೇಳಲು ವಿಷಾದವಾಗುತ್ತದೆ. ಕಿವಿಯಲ್ಲಿ ಗಾಳಿ ತುಂಬಿತೆಂದರೆ ನಮ್ಮ ಯುವ ರಾಜರು ಪೂರ್ವಾಪರ ವಿಚಾರಗಳನ್ನು ಚೆನ್ನಾಗಿ ತೂಗಿ ನೋಡದೆ ಸಾಹ ಸದ ಕೆಲಸಗಳಲ್ಲಿ ಧುಡುಂ ಪ್ರವೇಶ ಮಾಡದೆ ಇರರು. ನಾವೆಲ್ಲರೂ ಇಲ್ಲಿಯೇ ಇರಲು ಅವರಿಗೆ ಪ್ರಶಸ್ತವಾದ ಮಾರ್ಗವನ್ನು ತೋರಿಸಿ ಕೊಡುವವರು ಯಾರೂ ಇಲ್ಲ! ತಿಳಿದವರಾದ ನಿಮಗೆ ನಾನಿನ್ನೇನು ಹೆಚ್ಚಿಗೆ ಹೇಳಲಿ ?" .

ಸುಲೇಮಾನನು ನಿರುತ್ತರನಾದನು. ಜೇಸಿಂಗರ ಅಭಿಪ್ರಾಯದಲ್ಲಿ ದೋಷವಿದ್ದಿಲ್ಲ. ದಾರಾಸುಲ್ತಾನನ ಗುಣ-ದೋಷಗಳನ್ನು ಚೆನ್ನಾಗಿ ಅರಿತವನಾದ ಸುಲೇಮಾನನ ಮನಸ್ಸಿನಲ್ಲಿ ಜೇಸಿಂಗನ ವಿಧಾನಗಳೆಲ್ಲ ಒಳಿತಾಗಿ ನಟ್ಟವು. ಅವನು ಆ ವೃದ್ಧನಾದ ಸೇನಾಪತಿಗೆ ಆದರದಿಂದ ಪ್ರಣಾಮ ಮಾಡಿ "ಬಾಬಾಜೀ, ಕ್ಷಮಿಸಿರಿ. ಪಕ್ವವಿಚಾರದ ಸೇನಾಪತಿ ಗಳಾದ ತಮ್ಮ ದೂರದರ್ಶಿತ್ವವನ್ನು ಕಾಣದೆ ಅವಿಚಾರಿಯಾದ ನಾನು, ತಮ್ಮ ಆಚರಣಕ್ಕೆ ಆಕ್ಷೇಪವನ್ನು ತೆಗೆದುಕೊಂಡೆನು. ಇನ್ನು ಮೇಲೆ ನಾನು ತಮ್ಮ ಶಿಷ್ಯನಾಗಿಯೇ ವರ್ತಿಸುವೆನು." ಎಂದು ಬೆಸಗೊಂಡು ಮತ್ತೆ ಪ್ರಣಾಮ ಮಾಡಿದನು.

## ೨೫

ಬಹಾರ್ಣಪುರದಲ್ಲಿ ಔರಂಗಜೇಬ ಮುರಾದರ ಸಂದರ್ಶನ ವಾಯಿತು. ಬಿಳೀ ಗಂಜಿಯ ಚಲ್ಲಣವನ್ನುಟ್ಟು, ಮೈಯಲ್ಲಿ ಹಸರು ಬಣ್ಣದ 'ಕಫನಿ'ಯನ್ನು ತೊಟ್ಟು, ತಲೆಗೆ ತಿಳುವಾದ ಬಿಳಿಯ ಅರಿವೆಯ ಟೊಪ್ಪಿಗೆಯನ್ನು ಹಾಕಿಕೊಂಡು, ಔರಂಗಜೇಬನು ನಿಂತಿದ್ದನು. ಕುದುರೆಯ ಕೊರಳಿಗೆ ಹಾಕಿದ ಮಣಿಯ ಸರದಂತೆ ವಿಚಿತ್ರವಾಗಿ ಕಾಣುವ ಸ್ಪಟಿಕಮಣಿಯ ಮಾಲೆಯು ಅವನ ವಿಶಾಲವಾದ ಎದೆಯಲ್ಲಿ

ಜೋತಾಡುತ್ತಿತ್ತು. ಕೈಯಲ್ಲಿ ಕರೀ ಮಣಿಗಳ ಮಾಲೆಯನ್ನು ಹಿಡು ಕೊಂಡು ಬಾಯಿಯಲ್ಲಿ ಏನೇನೋ ಒಟಗೊಡುತ್ತ ಆ ಫಕೀರನು ಮಾಲೆ ಯಲ್ಲಿಯ ಮಣಿಗಳನ್ನು ಭರಭರನೆ ಎಣಿಸುತ್ತಿದ್ದನು. ಒಂದು ಆವರ್ತನಿ ಯಾದ ಬಳಿಕ ಆ ಯೋಗಿಯು "ಹರ್‌ದಮ್ ಅಲ್ಲಾಃ! ಹರ್‌ದಮ್ ಅಲ್ಲಾಃ! ಅಲ್ಲಾಃ ಅಲ್ಲಾಃ!!" ಎಂದು ಗರ್ಜಿಸಿ ಭಕ್ತಿಪುರಸ್ಸರವಾಗಿ ಆಕಾಶವನ್ನು ನಿರೀಕ್ಷಿಸಿ ನೋಡುವನು. ಮುರಾದನು ನೂರಜಹಾನೆಯ ಪ್ರಿಯನಾದ ಜಾಹಾಂಗೀರ ಬಾದಶಹನ ಸೊಬಗಿನ ಪೋಷಾಕು ಮಾಡಿ ಕೊಂಡು, ಮುತ್ತುರತ್ನಗಳ ಅನರ್ಘವಾದ ಅಲಂಕಾರಗಳನ್ನು ಧರಿಸಿ, ಸಾರ್ವಭೌಮನ ಆಢ್ಯತೆಯಿಂದ ನಿಂತು, ಅತ್ತಿತ್ತ ನೋಡುತ್ತ ತನ್ನ ಮೀಸೆ ಗಳಿಗೆ ಹುರಿಯಿಕ್ಕುತ್ತಿದ್ದನು. ಪರಸ್ಪರರಿಗೆ ಪರಸ್ಪರರ ವೇಷವೈಚಿತ್ರ್ಯವನ್ನು ಕಂಡು ವಿಲಕ್ಷಣವಾದ ನಗೆಹುಟ್ಟಿತು. ಆದರೆ ಸಂಯಮಿಯಾದ ಆ ಫಕೀರನು ನಗೆಯನ್ನು ಸಂಗಡಲೇ ದಬ್ಬಿ ಹಿಡಿದು 'ಕಿಂಚಿತ್ ಭೋಗೋ ಭವಿಷ್ಯತಿ' ಎಂಬಂತೆ ಸಾರ್ವಭೌಮನ ವೇಷಧಾರಿಯಾದ ಮುರಾದ ಬಕ್ಷನನ್ನು ಒಳ್ಳೇ ಪ್ರೇಮದಿಂದ ಅಪ್ಪಿಕೊಂಡು "ಪ್ರಿಯಬಂಧುವೆ, ಇಂದು ಉತ್ಸಾಹಪೂರಿತವಾದ ನಿನ್ನ ಮುಖವನ್ನು ಕಂಡು ನನಗೆ ತುಂಬಾ ಆನಂದ ವಾಗಿದೆ. ಮುರಾದಬಕ್ಷ, ಸುರತ ಕೋಟೆಯನ್ನು ತೆಗೆದುಕೊಳ್ಳುವಾಗ ನೀನು ತೋರಿಸಿದ ಪರಾಕ್ರಮದ ವರ್ಣನೆಯನ್ನು ಕಿವಿತುಂಬ ಕೇಳಿ ನಮ್ಮ ಸೈನಿಕರೆಲ್ಲ ನಿನ್ನ ಸೇವೆಯಲ್ಲಿಯೇ ಯಾವಜ್ಜೀವ ದುಡಿದು ಕೃತಾರ್ಥರಾಗಬೇಕೆನ್ನುತ್ತಾರೆ. ಹುಟ್ಟ ಫಕೀರನಾದ ನನಗೆ ಅಧಿಕಾರದ ಜಂಭವೇಕೆ? ಇಂದಿಗೆ ಈ ಸೈನ್ಯಕ್ಕೆಲ್ಲ ನೀನೇ ಅಧಿಪತಿಯು. ನನಗೆ ಪರಮಾತ್ಮನ ಸೇವೆಯೂ ಅಷ್ಟೇ, ಲೋಕಸೇವೆಯೂ ಅಷ್ಟೇ! ಕೆಲವು ದಿವಸ ನಿನ್ನ ಅಂಕಿತನಾಗಿ ನಡೆದು ನಾನು ಲೋಕಸೇವೆಯನ್ನು ಮಾಡಿ, ಆ ಮೇಲೆ ಪರಮಾತ್ಮನ ಸೇವೈಕತತ್ಪರನಾಗಿ ಕಾಲಕ್ಷೇಪವನ್ನು ಮಾಡು ವೆನು." ಎಂದು ನುಡಿದು ಜಪಮಾಲಾ ವಿಭೂಷಿತವಾದ ತನ್ನ ಹಸ್ತವ ನ್ನೆತ್ತಿ ತಮ್ಮನಿಗೆ 'ಸಾರ್ವಭೌಮನಾಗು' ಎಂದು ಅಂತಃಕರಣಪೂರ್ವಕ ವಾಗಿ ಹರಸಿದನು.

ಮುರಾದನು ಸಾಧುವರ್ಯನಾದ ತನ್ನ ಅಣ್ಣನ ಕಾಲ್ಗೆರಗಿ

"ಮಹಾತ್ಮನಾದ ನನ್ನ ಅಣ್ಣನೆ, ನೀನು ನನಗೆ ಪಿತೃಸಮಾನನಾದ ಪ್ರಿಯ ಬಂಧುವು, ಪರಮ ಪೂಜ್ಯನಾದ ಗುರುವು, ರಾಜಕಾರಣಧುರಂಧರನಾದ ಮಂತ್ರಿಯು! ನಾನೇ ನಿನಗೆ ಸರ್ವಥಾ ಅಂಕಿತನು" ಎಂದು ನುಡಿದು ಆನಂದಾಶ್ರುಗಳನ್ನು ಸುರಿದನು.

"ಹಾಗೇ ಆಗಲಿ ಮುರಾದ! ನಿನ್ನನ್ನು ಸಾರ್ವಭೌಮನನ್ನಾಗಿ ಮಾಡಲು ನಾನು ಬದ್ಧಕಂಕಣನಾಗಿ ಬಂದಿರುವೆನು. ನಿನ್ನ ಸೇವೆಗಾಗಿ ನಾನು ನನ್ನ ಸೈನ್ಯವನ್ನು ತಂದಿರುವೆನು. ಮೀರಜುಮ್ಲಾನ ಸೈನ್ಯವನ್ನು ನಾನು ನನ್ನ ಸ್ವಾಧೀನಕ್ಕೆ ತೆಗೆದುಕೊಂಡದ್ದಾದರೂ ನಿನ್ನ ಹಿತಕ್ಕಾಗಿಯೇ. ನೀನು ತಂದಿರುವ ಸೈನ್ಯವಾದರೂ ಸಾಮಾನ್ಯವಾದದ್ದಲ್ಲ. ಈ ಸೇನಾತ್ರಯದಿಂದ ನಾವು ತ್ರಿಭುವನವನ್ನೇ ಜಯಿಸಬಹುದು, ನಡೆ ಹೊತ್ತಾಯಿತು! ನೀನು ಕೊಂಚ ಆರಾಮವನ್ನು ತೆಗೆದುಕೋ. ಈ ನಮ್ಮ ಸರದಾರರಾದ ಹಜರತ್ ಸಾಹೇಬರು ಮೀರಜುಮ್ಲಾ ಸಾಹೇಬರ ಪ್ರೀತ್ಯಾಸ್ಪದರು. ಮಂತ್ರಾಲೋಚನಕ್ಕೆ ನನ್ನಂಥ ಫಕೀರನೂ, ಸಮರ ವ್ಯಾಪಾರಗಳಲ್ಲಿ ನಿನ್ನ ಸೇನಾಪತಿಯಾದ ಶಾಅಬ್ಬಾಸನೂ ನಿನಗೆ ಅವಶ್ಯರಾಗಿರುವಂತೆಯೇ ಆರಾಮ ಸಮಯದಲ್ಲಿ ಈ ಹಜರತ್ ಸಾಹೇಬರು ನಿನಗೆ ಬೇಕೇ ಆಗುವರು. 'ಶರಾಬ' (ಮದಿರೆ) ಗಳಲ್ಲಿ ಉತ್ತಮೋತ್ತಮವಾದವುಗಳ ಪರೀಕ್ಷೆ ಇವರಿಗಿದ್ದಷ್ಟು ಮತ್ತೊಬ್ಬರಿಗಿಲ್ಲ. ನಾಚು (ನೃತ್ಯ)-ರಂಗುಗಳಲ್ಲಿ ಕುಶಲೆಯರಾದ ಕಲಾವಂತಿನಿಯರ ನಾಮಾವಲಿಗಳನ್ನು ಇವರು ಮುಖೋದ್ಗತವಾಗಿ ಹೇಳಬಲ್ಲರು. ಫಕೀರನಾದ ನಾನು ಈ ಮಾತುಗಳನ್ನಾಡತಕ್ಕದ್ದಲ್ಲ ಸರಿ! ಆದರೂ ಈ ವಿಷಯಗಳೆಲ್ಲ ರಾಜರಿಗೆ ಉಚಿತವಾದವುಗಳೇ ಅಲ್ಲವೆ! ಯಾ ಅಲ್ಲಾಃ ರಹೀಮ್ !!!" ಎಂದು ನಗುತ್ತ ಔರಂಗಜೇಬನು ಮುರಾದನ ಮುಖವನ್ನೂ ಹಜರತ್ತನ ಮುಖವನ್ನೂ ನೋಡಿದನು.

"ಸರದಾರ ಹಜರತ್‌ಸಾಹೇಬ, ನಿಮ್ಮ ಪರಿಚಯವೆಂದರೆ ನಮಗೊಂದು ಅಲಭ್ಯವಾದ ಲಾಭವೆ. ರಾಜರ ಅನುಚರನಾಗತಕ್ಕವನು ಹೇಗೆ ಮಣಿಸಿದ ಹಾಗೆ ಮಣಿಯುವ ಸ್ವಭಾವದವನಾಗಿರಬೇಕು. ಇಲ್ಲವಾದರೆ

ನಮ್ಮ ಶಾಅಬ್ಬಾಸನಿದ್ದಾನೆ, ಆರಾಮದ ವರ್ತಮಾನವನ್ನು ತೆಗೆದರೆ ಕೈಯಲ್ಲಿ ಖಡ್ಗವನ್ನು ಹಿಡುಕೊಂಡು ಶುಂಭನ ಹಾಗೆ ಉದ್ದಕೆ ನಿಂತುಬಿಡುತ್ತಾನೆ. ಅವನು ಪ್ರಾಮಾಣಿಕನೂ ಸಂಭಾವಿತನೂ ಇರುವದು ಸರಿ. ಆದರೆ ಹಗಲೆಲ್ಲ ಆ ಗುಣಗಳನ್ನು ಕಟ್ಟಿಕೊಂಡೇನು ಮಾಡುವದು?" ಎಂದು ಮುರಾದನು ನಗುತ್ತ ಕೇಳಿದನು.

"ಹುಜೂರ್, ಔರಂಗಜೇಬ ಸುಲ್ತಾನರು ಹೇಳಿದ ಮೇರೆಗೆ ನಾನು ತಮ್ಮ ಇಚ್ಛಾನುವರ್ತಿಯಾಗಿರಲಿಕ್ಕೆ ಸಿದ್ಧನೇ. ಆದರೂ ನನಗೆ ಅಲ್ಪ ಸ್ವಲ್ಪ ಓದುಬರೆಯಲಿಕ್ಕೆ ಬರುತ್ತದೆ. ಯುದ್ಧಗಳನ್ನಾದರೂ ನಾನು ನನ್ನ ತಂದೆಯವರ ಕೂಡ ಇರುವಾಗ ನೋಡಿದ್ದೇನೆ; ಪ್ರಭುಗಳಿಗೆ ಅರಿಕೆ ಇರಬೇಕು." ಎಂದು ಆ ವಂಚಕನು ನಗೆಮುಖವನ್ನು ತಾಳಿ ಬೇಡಿಕೊಂಡು, ಮುರಾದನಿಗೆ ಅನೇಕಾವರ್ತಿ ಪ್ರಣಾಮ ಮಾಡಿದನು.

ಮುರಾದ ಹಜರತ್ತರ ಸೂತ್ರ ಕೂಡಿತು. ಮುರಾದನು ವಿಲಾಸಿಯಾಗಿದ್ದರೂ ಚತುರನು. ಆತನ ಚಾತುರ್ಯದ ಮಾತುಗಳ ಮರ್ಮವು ಹಜರತ್ತನಿಗೆ ತಿಳಿದರೂ ಅವನು ನಗುವನು, ತಿಳಿಯದಿದ್ದರೂ ಅವನು ತನ್ನ ಪೆದ್ದಮುಖದಲ್ಲಿ ಹುಚ್ಚು ನಗೆಯನ್ನು ತಳೆಯುವನು. ಹಜರತ್ತನಿಗೆ ಸಮರ್ಪಕವಾಗಿ ತಿಳಿಯುವ ವಿಷಯವೆಂದರೆ ತಗಲಿನಿಂದ ಸಾಧಿಸಿಕೊಳ್ಳತಕ್ಕದ್ದಾದ ಸ್ವಕಾರ್ಯವು! ಅದಕ್ಕಾಗಿ ಅವನು ಸ್ವಾಭಿಮಾನವನ್ನು ಮೂಲೆಗೆ ಇಟ್ಟು, ಅನ್ಯರ ಮನವೊಲಿಸಿಕೊಳ್ಳಲಿಕ್ಕೆ ಬೇಕಾದ್ದು ಮಾಡಲು ಸಿದ್ಧನು. ವಿಲಾಸಿಯಾದ ಶ್ರೀಮಂತನಿಗೆ ಇಂಥ ಸ್ವಭಾವದ ಜನರಲ್ಲಿ ಪ್ರೇಮ ಬಹಳ. ಸಾರಾಂಶ, ಹಜರತ್ತನು ಮುರಾದ ಸುಲತ್ತಾನರ ಲೀಲಾವಿಲಾಸಗಳ ಮೇಲ್ವಿಚಾರಣೆಯ ಕಾರ್ಯದರ್ಶಿಯಾದನು.

**दोषाकरोपि कुटिलोपि कलंकितोपि। मित्रावसानसमये विहितोदयोपि ॥ रात्रिंचरस्तु नृपवल्लभतामुपैति नैवाश्रिते विषयिणां गुणदोषशंका ॥**

## ೨೬

“ ಸುಜಾ ಸುಲ್ತಾನನು ಆಗ್ರಾಪಟ್ಟಣದ ಮೇಲೆ ದಂಡೆತ್ತಿ ಬಂದ ಸಮಯಕ್ಕೆ ನಾನೂ ಅಲ್ಲಿಗೆ ಹೋದರೆ ಪರಿಣಾಮವೇನಾಗುವದು ? ನಾನು ಬಂದಿರುವೆನೆಂಬ ವರ್ತಮಾನವನ್ನರಿತು ಅವನು ದಾರಾನ ಪಕ್ಷಕ್ಕೆ ಸೇರಿದರೆ ಹೇಗೆ? ಸುಜಾ ದರಾಯಸರ ನಡುವಿನ ಯುದ್ಧವು ಮುಗಿದ ಬಳಿಕ ವಿಜಯಿಯಾದವನೊಡನೆ ನಾನು ಯುದ್ಧಮಾಡುವದು ಸರಿ ಯಾದೀತೆ ? ಕಾಲಕ್ಷೇಪವಂತೂ ಸರ್ವಥಾ ತಕ್ಕದ್ದಲ್ಲ ! ” ಎಂದು ಔರಂಗಜೇಬನು ದೊಡ್ಡದೊಂದು ಯೋಚನೆಯಲ್ಲಿಯೇ ಮುಳುಗಿದ್ದನು. ಫಕೀರ ಕಲಂದರರನ್ನು ಕರೆಯಿಸಿ, ಪ್ರಶ್ನಜ್ಯೋತಿಷ್ಯಗಳನ್ನು ಕೇಳಿದನು. ಶ್ರೀಮಂತರ ಪ್ರಶ್ನಗಳಿಗೆ ಜ್ಯೋತಿಶ್ಶಾಸ್ತ್ರವು ಉತ್ತಮವಾದ ಫಲಗಳನ್ನು ಸಿದ್ಧಮಾಡಿಕೊಂಡೇ ಇರುವದು. ಆ ಮೇರೆಗೆ ಆ ಜನರೆಲ್ಲರೂ ಹೀಗೆ ಹೀಗೆಂದು ನಿಶ್ಚಿತಾತ್ಮಕವಾಗಿ ಹೇಳಲಾರದಿದ್ದರೂ ನಿಮ್ಮ ಕಾರ್ಯವಾಗು ವದು ಗಟ್ಟಿಯೆಂದು ಸಾಮಾನ್ಯವಾಗಿ ಹೇಳಿದರು.

ಒಂದೆರಡು ದಿವಸಗಳಲ್ಲಿ ಒಂಟೆಯ ಸವಾರನು ಬಂದು ಔರಂಗ ಜೇಬನಿಗೆ ಒಂದು ಪತ್ರವನ್ನು ತಂದುಕೊಟ್ಟನು. ಆದರಲ್ಲಿ ಸುಲೇಮಾನನು ಜೇಸಿಂಗ, ದಿಲೇರಖಾನ ಮುಂತಾದ ಸರದಾರರನ್ನು ಕಟ್ಟಿಕೊಂಡು ಸುಜಾ ಸುಲ್ತಾನನ ಮೇಲೆ ಸಾಗಿ ಹೋಗಿರುವನೆಂಬ ಸುವಾರ್ತೆಯಿತ್ತು.

“ ಮುರಾದಬಕ್ಷ, ನೀವು ನಿಶ್ಚಯವಾಗಿ ದಿಲ್ಲಿಯ ಚಕ್ರವರ್ತಿಗಳಾ ಗುವಿರಿ. ಈ ಸುವಾರ್ತೆಯನ್ನು ಕೇಳಿದಿರಾ ? ” ಎಂದು ಔರಂಗಜೇಬನು ರೋಷನಾರೆಯ ಪತ್ರವನ್ನು ತೋರಿಸಿದನು.

“ ಸುಲೇಮಾನನು ಸುಜಾ ಸುಲ್ತಾನರಿಂದ ಪರಾಭವವನ್ನು ಹೊಂದಿ ದರೆ ನೀವು ಹೇಳುವದೆಲ್ಲ ಸರಿ ! ” ಎಂದು ಮುರಾದನು ಔರಂಗಜೇಬನ ಇಂಗಿತವನ್ನು ತಿಳಿಯದೆ ಕೇಳಿದನು.

“ ಹಾಗಲ್ಲ ! ನಮ್ಮ ವಿರುದ್ಧವಾಗಿ ಸುಜಾ ದರಾಯಸರು ಒಂದಾ ಗುವದಂತೂ ಸುಳ್ಳಾಯಿತಷ್ಟೆ? ಮೇಲಾಗಿ ದಾರಾನ ಪಕ್ಷದಲ್ಲಿ ಪ್ರಮುಖ ರಾದ ವೀರರೆಲ್ಲರೂ ಪಟ್ಟಣವನ್ನು ಬಿಟ್ಟು ಸುಲೇಮಾನನೊಡನೆ ಹೊರಟು

ಹೋಗಿದ್ದಾರೆ. ಜೇಸಿಂಗ, ದಿಲೇರಖಾನ, ಮಹಬೂಬಖಾನ ಮುಂತಾದ ಸರದಾರರಿಲ್ಲದಾದ ಮೇಲೆ ಆಗ್ರಾದಲ್ಲಿ ಜಾಣರಾದ ಸೇನಾಪತಿಗಳೆಲ್ಲಿ? ನಮ್ಮೆಲ್ಲರಿಗೆ ಮಾರಿ ನಿಂತ ತರುಣವೀರನಾದ ಸುಲೇಮಾನನಿಲ್ಲದ ಯುದ್ಧದಲ್ಲಿ ನಮಗೆ ವಿಜಯವೇ. ಆದಕ್ಕಾಗಿ ನಾವು ತ್ವರೆಮಾಡಿ ಸುಲೇಮಾನನು ಆಗ್ರಾಕ್ಕೆ ಮರಳಿ ಬರುವದರೊಳಗಾಗಿಯೇ ಆ ರಾಜಧಾನಿಯ ಮೇಲೆ ಸಾಗಿ ಹೋದರೆ ವಿಜಯವು ನಿಶ್ಚಯವಾಗಿ ನಮ್ಮದು."

"ನಿಮ್ಮ ಯೋಚನೆಯು ಬಹು ಸರಸಾದದ್ದು! ನಾವು ಇಂದೆಯೇ ಈ ಬರ್ಹಾಣಪುರವನ್ನು ಬಿಟ್ಟು ಮುಂದೆ ಸಾಗತಕ್ಕದ್ದು" ಎಂದು ಮುರಾದನು ಪರಮ ಸಂತುಷ್ಟನಾಗಿ ನುಡಿದನು.

"ಅದಕ್ಕಾಗಿಯೇ ಹೇಳುತ್ತೇನೆ! ನೀವು ತ್ವರೆಮಾಡಿ ಸಕಲ ಸೇನೆಯನ್ನು ಕಟ್ಟಿಕೊಂಡು ಒಂದೆರಡು ದಿವಸಗಳಲ್ಲಿ ನರ್ಮದೆಯನ್ನು ದಾಟಿ ಹೋಗುವಷ್ಟು ವ್ಯವಸ್ಥೆ ಮಾಡಿರಿ. ನಾನಂತೂ ಇದ್ದೇ ಇರುವೆನು. ಆದರೆ ನೀವು ಮುಂದೆಮುಂದಾಗಿ ಹೇಗೆ ಚಾತುರ್ಯದಿಂದ ಕೆಲಸ ಮಾಡುವಿರೋ ನೋಡಬೇಕಾಗಿದೆ" ಎಂದು ಮುರಾದನ ಅಣ್ಣನು ಹೇಳಿದನು.

"ಅವಶ್ಯವಾಗಿ ಆಗಲಿ! ನಾನೊಬ್ಬನೇ ಹೇಗೆ ಸಾಹಸದಿಂದ ಕಾದಿ ಶತ್ರುಗಳ ಪರಾಭವವನ್ನು ಮಾಡುವೆನೆಂಬದನ್ನು ನೀವು ನನ್ನ ಬೆನ್ನಮೇಲೆ ಇದ್ದುಕೊಂಡು ನೋಡಿರಿ. ಬೇಕಾದಂಥ ಘೋರತರವಾದ ಸಂಗ್ರಾಮದಲ್ಲಿ ಹೊಕ್ಕರೂ ಮುರಾದಬಕ್ಷನು ವಿಜಯಿಯಾಗದೆ ಇರನು."

ಮುರಾದ ಔರಂಗಜೇಬರು ಸೇನಾಸಮೇತರಾಗಿ ನರ್ಮದೆಯನ್ನು ದಾಟಿ ಬರುವ ಯತ್ನ ನಡೆಸಿದರು. ಈ ಬಂಧುದ್ವಯರು ಸಾಹಸದಿಂದ ದಕ್ಷಿಣ ಮರ್ಯಾದೆಯಾಗಿರುವ ನರ್ಮದೆಯನ್ನು ದಾಟಿ ತನ್ನ ರಾಜಧಾನಿಯ ಮೇಲೆ ಸಾಗಿ ಧಾವಿಸಿ ಬರುತ್ತಿರುವ ವಿಚಾರದ ವರ್ತಮಾನವನ್ನು ಕೇಳಿ ಶಹಾಜಹಾನನು ಖತಿಗೊಂಡು, ರಾವುತರ ಮೇಲೆ ರಾವುತರನ್ನೋಡಿಸಿ ಔರಂಗಜೇಬನಿಗೆ ಬರಬೇಡವೆಂದು ಹೇಳಿಕಳಿಸಿದನು. ಆದರೆ ಆ ಧೂರ್ತನಾದ ಪುತ್ರನು ಆ ರಾವುತರನ್ನೆಲ್ಲ ತನ್ನ ಬಳಿಯಲ್ಲಿಯೇ ಇಟ್ಟುಕೊಂಡು, ಪ್ರತಿ ಸಂದೇಶವನ್ನು ಕಳಿಸಲೇ ಇಲ್ಲ.

ಇತ್ತ ದರಾಯುಸನು ಔರಂಗಜೇಬನ ಮಾರ್ಗವನ್ನು ಕಟ್ಟುವದ ಕ್ಕಾಗಿ ಸಿದ್ಧತೆಯನ್ನು ಮಾಡಿದನು. ರಾಜಾ ಜಸವಂತಸಿಂಗ, ಕಾಸಮ ಖಾನ ಮುಂತಾದ ಸರದಾರರನ್ನು ಕರೆಸಿ ದಾರಾಶಹನ ಇಚ್ಛೆಯಂತೆ ನಡೆಯಬೇಕೆಂದು ಶಹಾಜಹಾನನು ಸೂಚಿಸಿದ ಮೇರೆಗೆ ಅವರು ಒಪ್ಪಿ ಕೊಂಡಿದ್ದರು. ಆದರೂ ಔರಂಗಜೇಬ ಮುರಾದರ ಜೀವಕ್ಕೆ ಅಪಾಯ ವಾಗಗೊಡಲಾಗದೆಂದು ಕೂಡಾ ಆ ವೃದ್ಧ ಸಾರ್ವಭೌಮನು ಮೇಲ್ಕಂಡ ಸರದಾರರಿಗೆ ಏಕಾಂತವಾಗಿ ಹೇಳಿಕೊಂಡಿದ್ದನು. ಬಹಿರಂಗವಾಗಿ ದಾರಾಶಹನ ಸಿದ್ಧತೆಯು ಬಹು ಪರಿಪೂರ್ಣವಾಗಿ ಇದ್ದಂತೆ ಕಂಡರೂ ಒಳಗೆ ಹುಳುಕು ಬಹಳ. ಕಾಸಮಖಾನನು ದಾರಾಶಹನಿಗೆ ಕೇವಲವಾಗಿ ಅನುಕೂಲನಾದವನಲ್ಲ. ಕಾಲಿಲುಲ್ಲಾಖಾನನಿಗೂ ಆ ರಾಜಪುತ್ರನಿಗೂ ಒಳಗಿಂದೊಳಗೆಯೇ ದೀರ್ಘದ್ವೇಷ. ಅನೇಕರು ಒಳಗಿಂದೊಳಗೆಯೇ ಔರಂಗಜೇಬನಿಗೆ ಅನುಕೂಲರು.

ಔರಂಗಜೇಬನನ್ನು ನರ್ಮದೆಯ ಈಚೆಗೆ ಬರಗೊಡಬಾರದೆಂದು ಜಸವಂತಸಿಂಗ, ಕಾಸಮಖಾನರಿಗೆ ಆಜ್ಞೆಯಾಗಿತ್ತು. ಆ ಮೇರೆಗೆ ಅವರು ಆ ನದಿಯ ದಂಡೆಗೆ ಬಂದು ಕುಳಿತರು. ಬೇಸಿಗೆಯಾದ್ದರಿಂದ ನದಿ ಯನ್ನು ಹಾಗೆಯೇ ದಾಟಬಹುದಾಗಿತ್ತು. ಆ ಸರದಾರರೀರ್ವರು ಚಾಣಾ ಕ್ಷರೂ ರಾಜನಿಷ್ಠರೂ ಆಗಿದ್ದರೆ ನದಿಯನ್ನು ಸುಲಭವಾಗಿ ದಾಟಿ ಔರಂಗ ಜೇಬನ ಸೇನೆಯನ್ನು ನಿಶ್ಚಯವಾಗಿ ಸೋಲಿಸಿ ಓಡಿಸಬಹುದಾಗಿತ್ತು. ಆದರೆ ದ್ರೋಹಿಯಾದ ಕಾಸಮನು ದಾರಾನಿಗೆ ಪ್ರತಿಕೂಲನು. ಅವನು ಜಸವಂತಸಿಂಗನನ್ನು ಮೋಸಗೊಳಿಸಿ, “ ರಾಜಾ ಸಾಹೇಬ, ನಾವು ನದಿ ಯನ್ನು ದಾಟಿ ಹೋಗುವದು ವಿಹಿತವಲ್ಲ. ಔರಂಗಜೇಬ ಸುಲ್ತಾನರನ್ನು ನದಿಯ ಈಚೆಗೆ ಬರಗೊಡದಿರುವದೇ ನಮ್ಮ ಕರ್ತವ್ಯವು. ಕಾದುಕೊಂಡಿ ದ್ದರಾಯಿತು.” ಎಂದು ಬೋಧಿಸಿದ್ದರಿಂದ, ಆ ರಾಜನಿಷ್ಠನಾದ ರಾಜನು ನಂಬಿ ನದಿಯನ್ನು ದಾಟುವ ವಿಚಾರ ಮಾಡಲಿಲ್ಲ.

ಔರಂಗಜೇಬನಿಗೆ ಇಷ್ಟಾದರೆ ಸಾಕಾಗಿತ್ತು. ಅವನು ಆಚೇ ದಂಡೆಗೆ ಸುರಕ್ಷಿತನಾಗಿ ಕುಳಿತುಕೊಂಡು ಜಸವಂತಸಿಂಗನನ್ನು ತಪ್ಪಿಸಿ ಹೊಳೆ ಯನ್ನು ಹೇಗೆ ದಾಟಬೇಕೆಂಬ ಆಲೋಚನವನ್ನು ಮಾಡುತ್ತ ಕುಳಿತಿದ್ದನು.

ಪುಳ್ಳುಪುಳ್ಳೆಯೇ ಅವನೊಮ್ಮೆ ಈ ಸ್ಥಳದಲ್ಲಿಯೂ ಮತ್ತೊಮ್ಮೆ ಮತ್ತೊಂದು ಸ್ಥಳದಲ್ಲಿಯೂ ನದಿಯನ್ನು ದಾಟಲು ಪ್ರಯತ್ನಮಾಡಿದಂತೆ ನಟಿಸಿ, ಜಸವಂತಸಿಂಗನಿಗೆ ಬಹು ಪೀಡೆಕೊಟ್ಟನು. ಕಡೆಗೆ ಔರಂಗಜೇಬನು, ಕಾಸಮಖಾನನು ನಿಂತುಕೊಂಡಿರುವ ಸ್ಥಳದ ಸಮೀಪದಲ್ಲಿ ನದಿಯನ್ನು ದಾಟುವದನ್ನು ನಿಶ್ಚಯಿಸಿದನು. ಆದರೆ ಕಾಸಮಖಾನನ ಸೈನ್ಯದವರು ಒಳ್ಳೇ ಶೌರ್ಯದಿಂದ ಕಾದುತ್ತಿದ್ದರಾದ್ದರಿಂದ ಔರಂಗಜೇಬನ ಆಟವು ಸಾಗದಂತಾಯಿತು. ಕಡೆಗೆ ಕಡುಗಲಿಯಾದ ಮುರಾದಬಕ್ಷನು ತನ್ನ ಭವ್ಯವಾದ ಕುದುರೆಯನ್ನೇರಿಕೊಂಡು, ಉದ್ರೇಕದಿಂದ ನದಿಯಲ್ಲಿ ಪ್ರವೇಶಿಸಿ ತನ್ನ ರಾವುತರಿಗೆ ಅಂದದ್ದು:—"ಮಕ್ಕಳೇ, ವೀರರ ಹೊಟ್ಟೆಯಲ್ಲಿ ಹುಟ್ಟಿದವರಷ್ಟೇ ನನ್ನ ಸಂಗಡ ಬನ್ನಿರಿ! ಶೌರ್ಯಧೈರ್ಯ ಜಾಣತನಗಳ ತೇಜಸ್ಸು ಹೇಗಿರುವದೆಂಬದನ್ನು ನಾನು ಇಂದು ನಿಮ್ಮೆಲ್ಲರಿಗೆ ಮನಗಾಣಿಸಿಕೊಡುವೆನು. ಹೇಡಿಗಳು ಹಿಂದಕ್ಕೆ ನಿಂತು ಬೆನ್ನಮೇಲೆ ಒದಿಸಿಕೊಂಡು ಸುಖವಾಗಿ ಜೀವಿಸಲಿ!"

ಹೀಗೆ ನುಡಿದವನೇ ಮುರಾದನು ಗುಂಡು-ಬಾಣಗಳ ಹೊಡೆತಗಳನ್ನು ಲೆಕ್ಕಿಸದೆ, ಆವೇಶದಿಂದ ಪ್ರವಾಹದ ಮಧ್ಯಕ್ಕೆ ಬಂದನು. ಅಂಥ ಸೇನಾಪತಿಯ ಸಾಹಸದ ಕರ್ಮವನ್ನು ನೋಡಿ, ಸಾವಿರಾರು ಜನ ರಾವುತರು ಆರ್ಭಟೆಯಿಂದ ತಮ್ಮ ಕುದುರೆಗಳನ್ನು ನೀರಲ್ಲಿ ಕೆಡವಿ ಮುರಾದನನ್ನು ಬೆಂಬಾಲಿಸಿ ಬಂದರು. ಪ್ರಚಂಡವಾದ ಜಯಘೋಷವನ್ನು ಮಾಡುತ್ತ ಆ ಜನರೆಲ್ಲರೂ ನಿರ್ವಿಘ್ನವಾಗಿ ನದಿಯನ್ನು ದಾಟಿ ಬಂದರು.

ಮುರಾದನು ನದಿಯನ್ನು ದಾಟಿ ಬಂದದ್ದು ಕಂಡು, ಕಾಸಮಖಾನನು ಹೇಡಿಯಂತೆ ಪಲಾಯನ ಮಾಡಿದನು. ಜಸವಂತಸಿಂಗನು ಅವನ ಸಹಾಯಕ್ಕಾಗಿ ಓಡಿಬಂದು ನೋಡುವಷ್ಟರಲ್ಲಿ ದ್ರೋಹಿಯಾದ ಕಾಸಮನು ಮದ್ದುಗುಂಡುಗಳಿಗೆಲ್ಲ ನೀರುಹಾಕಿಸಿ ಕೆಡಿಸಿ ನಡೆದಿದ್ದನು. ಆದರೂ ಆ ರಜಪೂತ ಧೀರನು ಶತ್ರುಗಳೊಡನೆ ಒಳ್ಳೇ ಶೌರ್ಯದಿಂದ ಕಾದಿದನು. ರಜಪೂತರ ಹುಚ್ಚುತನದ ಶೌರ್ಯವಿದು! ವೃಥಾಭಿಮಾನಕ್ಕಾಗಿ ಅವರು ತಮ್ಮ ಪ್ರಾಣಗಳನ್ನು ರಣರಂಗದಲ್ಲಿ ಕೊಟ್ಟೇ ತೀರತಕ್ಕವರು. ಈ ಅನನುಕೂಲತೆಯ ಮೂಲಕ ಈ ಯುದ್ಧದಲ್ಲಿ ಜಯವಾಗ

ದಿದ್ದರೆ ಬದುಕಿ ಮುಂದಿನ ಯುದ್ಧದಲ್ಲಿಯಾದರೂ ವಿಜಯವನ್ನು ಹೊಂದಬಹುದೆಂಬ ವಿಚಾರವನ್ನು ಅವರು ಅರಿಯರು. ಇಂಥ ಅವಿಚಾರದ ಶೌರ್ಯಕ್ಕಾಗಿಯೇ ರಜಪೂತರು ವ್ಯರ್ಥವಾಗಿ ಸತ್ತುಹೋಗಿ, ಮುಸಲ್ಮಾನರ ವಿಜಯಕ್ಕೆ ಕಾರಣರಾದರು. ಇರಲಿ, ಜಸವಂತಸಿಂಗನ ಸೇನೆಯೆಲ್ಲ ಮಡಿದುಹೋಯಿತು! ಹತ್ತುಸಾವಿರ ಜನರಲ್ಲಿ ನಾಲ್ಕುನೂರು ಜನರನ್ನು ಮಾತ್ರ ಕರಕೊಂಡು ಅವನು ತನ್ನ ರಾಜಧಾನಿಯ ಹಾದಿಯನ್ನು ಹಿಡಿದು ನಡೆದನು.

## ೨೭

ವೀರಮಣಿಯಾದ ಜಸವಂತಸಿಂಗನು ಕಾಸಮಖಾನನಂಥ ನರಪಶುವು ಮಾಡಿದ ದ್ರೋಹವನ್ನು ನೆನೆದು ಸಂತಪ್ತನಾಗಿ ಔರಂಗಜೇಬನೊಡನೆ ಘನಘೋರವಾದ ಸಂಗ್ರಾಮವನ್ನು ಮಾಡಿ, ಅವನ ಸೇನೆಯನ್ನು ಹಾಳುಮಾಡಿದ್ದಲ್ಲದೆ ತನ್ನ ಅಪ್ರತಿಮವಾದ ಸೇನೆಯನ್ನಾದರೂ ನಾಮಶೇಷವಾಗಿ ಮಾಡಿಕೊಂಡು ಊರಿಗೆ ಬಂದನು. ಇನ್ನು ಅನೇಕರಾದ ರಜಪೂತರಾಜರ ಸಹಾನುಭೂತಿಯನ್ನು ಪಡೆದು, ದೊಡ್ಡದೊಂದು ಸೈನ್ಯವನ್ನು ಕೂಡಿಸಿ, ಔರಂಗಜೇಬನ ಪಾರಿಪತ್ಯವನ್ನ ಮಾಡದೆ ಇರಕೂಡದೆಂದು ಅವನು ಪ್ರತಿಜ್ಞೆ ಮಾಡಿಕೊಂಡು ಬಂದಿದ್ದನು. ಆದರೆ ಮನೆಗೆ ಬರುವದರೊಳಗಾಗಿ ಅಲ್ಲೊಂದು ಅನರ್ಥವೇ ನಡೆದಿತ್ತು.

ಅವನು ತನ್ನ ರಾಜಧಾನಿಯಾದ ಜೋಧಪುರಕ್ಕೆ ಬಂದು ನೋಡುತ್ತಾನೆ; ಪಟ್ಟಣದ ಮಹಾದ್ವಾರವು ಇಕ್ಕಿತ್ತು. ಮಹಾರಾಜರು ಬಂದಿರುವರೆಂಬ ವರ್ತಮಾನನ್ನು ಹೇಳಿದರೂ ಅಗಸಿಯನ್ನು ಕಾಯುವವನು ರಾಣಿಯವರ ಆಜ್ಞೆಯಿಲ್ಲದೆ ಬಾಗಿಲವನ್ನು ತೆಗೆಯಲಾಗದೆಂದು ಹೇಳಿದನು. ಪ್ರತ್ಯಕ್ಷ ರಾಜನೇ ಹೋಗಿ ಕೇಳಿದರೂ ಆ ತಳವಾರನು ಅಗಸಿಯನ್ನು ತೆಗೆಯಲಿಲ್ಲ. "ಮಹಾರಾಜ, ತಾವು ಬಂದಿರುವ ವರ್ತಮಾನವನ್ನು ಬೇಕಾದರೆ ರಾಣಿಯವರಿಗೆ ನಿವೇದಿಸಿ ಬಾಗಿಲವನ್ನು ತೆರೆಯಲು ಅವರ

ಅಪ್ಪಣೆಯನ್ನು ದಯಪಾಲಿಸಿದರೆ ಹಾಗೆ ಮಾಡುವೆನು" ಎಂದು ಸ್ಪಷ್ಟ ವಾಗಿ ಆ ದ್ವಾರಪಾಲಕನು ಹೇಳಿದನು.

"ಜಾಲೀಮಸಿಂಗ, ನಾನು ಈ ನಗರದ ರಾಜನಲ್ಲವೇ? ನನಗೆ ಬಾಗಿಲ ತೆರೆಯಲು ರಾಣಿಯವರ ಆಜ್ಞೆಯೇ?" ಎಂದು ಜಸವಂತ ಸಿಂಗನು ಕ್ರುದ್ಧನಾಗಿ ಕೇಳಿದನು.

"ಅದೇನೋ ನನಗೆ ತಿಳಿಯದು! ನೀವು ಬಂದ ವರ್ತಮಾನವನ್ನು ರಾಣಿಯವರಿಗೆ ತಿಳಿಸೆಂದರೆ ತಿಳಿಸುವೆನು" ಎಂದು ಕಾವಲುಗಾರನಾದ ಆ ಜಾಲೀಮಸಿಂಗನು ಒಳ್ಳೇ ಶಾಂತಮನಸ್ಸಿನವನಾಗಿ ಉತ್ತರ ಕೊಟ್ಟನು.

ರಾಜರು ಬಂದಿರುವ ಸಂಗತಿಯನ್ನು ಜಾಲೀಮಸಿಂಗನು ರಾಣಿಗೆ ನಿವೇದಿಸಿದನು. ರಾಣಿಯು ಆ ಸಮಯದಲ್ಲಿ ಸೂದಕದ (ಅಶೌಚದ) ಮೈಲಿಗೆಯಲ್ಲಿ ಕುಳಿತಂತೆ ಕುಳಿತಿದ್ದಳು. ಅವಳ ಸುಮನೋಹರವಾದ ಹಣೆಯಲ್ಲೆಲ್ಲ ಕ್ರೋಧಾವೇಶವನ್ನು ಸೂಚಿಸುವಂತೆ ಗಂಟುಗಳೆದ್ದಿದ್ದವು. ಅವಳ ಕಣ್ಣುಗಳಲ್ಲಿ ಬೊಗಸೆ ಬೊಗಸೆ ನೀರು ತುಂಬಿದ್ದರೂ ಆ ಕಣ್ಣುಗಳೊಳಗಿಂದ ಕ್ರೋಧಾಗ್ನಿಯ ಕಿಡಿಗಳು ಉದುರುತ್ತಿದ್ದವು. "ಯಾವ ರಾಜರು ಬಂದಿರುವರು ಜಾಲೀಮಸಿಂಗ? ನನ್ನ ಪತಿಗಳಾದ ಜಸವಂತ ಸಿಂಗ ಮಹಾರಾಜರು ಸಮರಭೂಮಿಯಿಂದ ಎಂದಿಗಾದರೂ ಓಡಿಬರುವರೆ? ಯುದ್ಧದಲ್ಲಿ ಅವರು ವಿಜಯಿಗಳಾಗದಿದ್ದ ಪಕ್ಷದಲ್ಲಿ ಅವರು ಮಡಿದಿರಲಿಕ್ಕೇ ಸಾಕು!"

"ಮಹಾದೇವಿಯವರೆ, ರಾಜರು ಬಂದಿರುವದು ನಿಜ. ಅವರು ಮಡಿದಿಲ್ಲ!" ಎಂದು ಜಾಲೀಮಸಿಂಗನು ಪ್ರಣಾಮ ಮಾಡಿ ಹೇಳಿದನು.

"ವಿಜಯಿಗಳಾಗಿ ಬಂದಿರುವರೆ?"

"ಇಲ್ಲ! ಸೇನೆಯೆಲ್ಲ ನಷ್ಟವಾದ್ದರಿಂದ, ಅನಿವಾರ್ಯಹಕ್ಕಾಗಿ ಮಹಾರಾಜರು ಮರಳಿ ಬಂದರು."

"ಥೂ!! ನೀಚಾ, ನೀನು ರಜಪೂತನೆ? ಜೋಧಪುರದ ಮಹಾಪ್ರತಾಪಶಾಲಿಗಳ ಕುಲದಲ್ಲಿ ಹುಟ್ಟಿದವರೂ, ಪ್ರತಿ ಅರ್ಜುನನಂತಿರುವ ಮಹಾರಾಣಾ ಪ್ರತಾಪಸಿಂಹರ ಅಳಿಯಂದಿರೂ ಆದ ನನ್ನ ಪತಿರಾಜರು

ಸಮರದಲ್ಲಿ ಸೋತುಬಂದರೆಂಬ ಅಭದ್ರವಾದ ಮಾತನಾಡುವ ನಿನ್ನ ನಾಲಗೆಯು ಕಡಿದುಬೀಳಲಿ! ನನ್ನ ಪತಿರಾಜರು ವೀರಸ್ವರ್ಗಕ್ಕೆ ಹೋದದ್ದೇ ನಿಜ! ಯಾರಲ್ಲಿ? ಚಿತೆಯನ್ನು ಸಿದ್ಧಗೊಳಿಸಿರಿ! ನಾನೀಗಲೆ ಸಹಗಮನವನ್ನು ಮಾಡತಕ್ಕವಳು!!! ”

ಸಂಗಡಲೆ ಚಿತೆಯು ಪ್ರಜ್ವಲಿತವಾಯಿತು. ಆ ಚಿತೆಯ ಭಯಂಕರ ವಾದ ಸ್ವರೂಪಕ್ಕೆ ಎಳ್ಳಷ್ಟಾದರೂ ಹೆದರದೆ, ಅಭಿಮಾನದೃಪ್ತಳಾದ ಆ ರಾಣಿಯು ಸಂಗಡಲೆ ಚಿತಾಪ್ರವೇಶಕ್ಕೆ ಸಿದ್ಧಳಾದಳು. ರಾಜ ಮಾತೆಯು ಮರಣೋದ್ಯುಕ್ತಳಾದ ತನ್ನ ಸೊಸೆಯನ್ನು ಬಾಹುಪಾಶ ದಲ್ಲಿ ಬಿಗಿದಪ್ಪಿ ಕಣ್ಣೀರು ಸುರಿಸಿ, “ಮಗುವೆ, ನಿನಗಾದ ಸಂತಾಪದ ಇಯತ್ತೆಯನ್ನು ನಾನು ಊಹಿಸಬಲ್ಲೆನು. ಸಮರಾಂಗಣಕ್ಕೆ ಬೆನ್ನು ಕೊಟ್ಟು ಓಡಿಬಂದ ಕ್ಷತ್ರಿಯನಾದ ಪತಿಯೂ ಜಾರಿಣಿಯಾದ ಸತಿಯೂ ಸಮಾನರಾದ ಪಾಪಿಗಳು. ಈರ್ವರ ಮುಖಾವಲೋಕನವನ್ನು ಕ್ಷಣ ಮಾತ್ರವಾದರೂ ಮಾಡತಕ್ಕದ್ದಲ್ಲ. ಆದರೆ ನನ್ನ ಸೊಸೆಮುದ್ದೆ, ನನ್ನ ಮಗನಾದ ಜಸವಂತನು ಹೇಡಿಯಂತೆ ಸಮರಕ್ಕೆ ಬೆನ್ನುಕೊಟ್ಟು ಬರುವ ವನಲ್ಲ! ಏನಾದರೂ ವಿಶೇಷವಾದ ಕಾರಣವಿದ್ದರೆ ಮುಂದಿನ ಆಲೋ ಚನಕ್ಕಾಗಿ ಸಮರವನ್ನು ಬಿಟ್ಟುಬರಲಿಕ್ಕೆ ಕ್ಷತ್ರಿಯನಿಗೆ ಆಸ್ಪದವಿರು ವದು. ಪ್ರತ್ಯಕ್ಷ ಭಗವಂತನ ಅವತಾರವೇ ಆದ ನಮ್ಮ ಮಹಾರಾಣಾ ಪ್ರತಾಪಸಿಂಹಜೀ ಅವರೇ ಒಮ್ಮೊಮ್ಮೆ ಸಮರವನ್ನು ಬಿಟ್ಟುಬಂದು ಮತ್ತೊಂದು ಪ್ರಸಂಗದಲ್ಲಿ ಶತ್ರುಸಂಹಾರವನ್ನು ಮಾಡಲಿಲ್ಲವೆ? ಮುತ್ತೈದೆಯಾದ ಮಗುವೆ, ಈ ಹುಚ್ಚುತನವನ್ನು ಬಿಡು. ಜಸವಂತನು ಯುದ್ಧದಿಂದ ಮರಳಿ ಬಂದದ್ದಕ್ಕೆ ಸಪ್ರಮಾಣವಾದ ಕಾರಣಗಳನ್ನು ಹೇಳಿದರೆ ಒಳ್ಳೇದು, ಇಲ್ಲದಿದ್ದರೆ ನಾನು ಕೂಡಾ ಅವನ ಮುಖವನ್ನು ನೋಡಲಿಕ್ಕಿಲ್ಲ!'' ಎಂದು ಜಸವಂತನ ತಾಯಿಯು ಹೇಳಿದಳು.

ಜಸವಂತಸಿಂಗನು ಯುದ್ಧದಲ್ಲಿ ತನಗೆ ಪ್ರಾಪ್ತವಾದ ಮಹತ್ಸಂಕಟ ವನ್ನು ತನ್ನ ಮಾತೆಗೂ ವೀರಪತ್ನಿಯಾದ ತನ್ನ ಅರ್ಧಾಂಗಿಗೂ ನಿವೇದಿಸಿ, ತಾನು ಸಮರಾಂಗಣವನ್ನು ಬಿಟ್ಟು ಬಂದದ್ದಕ್ಕಾಗಿ ಅವರ ಕ್ಷಮೆಯನ್ನು ಬೇಡಿಕೊಂಡನು.

ಸನಾತನವಾದ ನಮ್ಮ ಕುಲಧರ್ಮಗಳು ನಮ್ಮ ಸ್ತ್ರೀಯರಿಂದಲೇ ರಕ್ಷಿತವಾಗಿವೆ ಎಂಬುದಕ್ಕೆ ಮೇಲ್ಕಂಡ ವೀರಪತ್ನಿಯು ಉದಾಹರಣವೇ ಸಾಕು. ಮೇವಾಡದ ಮಹಾರಾಣಾನ ಆತ್ಮಸಂಭವೆಯಾದ ಆ ಕ್ಷಾತ್ರ ಮಾನಿನಿಗೆ ತನ್ನ ಪತಿಯು ಯುದ್ಧದಿಂದ ಪರಾಙ್ಮುಖನಾಗಿ ಬಂದ ವರ್ತಮಾನವು ಎಂದಿಗಾದರೂ ಸಹನವಾದೀತೆ. ಅನೇಕವಾದ ದುಃಖಗಳನ್ನೂ ಆಪತ್ತುಗಳನ್ನೂ ರಜಪೂತ ಕುಲಾಂಗನೆಯು ತಾಳ್ಮೆಯಿಂದ ಸಹಿಸಬಲ್ಲಳು. ಆದರೆ ಓರಿಗೆಯ ಸ್ತ್ರೀಯರಲ್ಲಿ 'ಇಂಥವಳು ಹೇಡಿಯ ಹೆಂಡತಿಯು' ಎಂಬ ಅಪ್ರತಿಷ್ಠೆಯ ಅಪವಾದವನ್ನು ಆ ಮಾನಿನಿಯು ಎಂದಿಗೂ ಸಹಿಸಳು! ಪ್ರಾಣಕೊಟ್ಟಾಳು!!! ಚಾಲೀಮಸಿಂಗನು ತನಗೆ ಬಾಗಿಲವನ್ನು ತೆಗೆಯದಿರಲು ಒಳಿತಾಗಿ ಸಿಟ್ಟುಮಾಡಿ, ನಿಷ್ಠುರವಾದ ಆಜ್ಞೆಯನ್ನು ವಿಧಿಸಲು ಜಸವಂತಸಿಂಗನಿಗೆ ಉಸುರಿದ್ದಿಲ್ಲ. ಸಮರವನ್ನು ಬಿಟ್ಟುಬಂದ ಪಾಪವು ಅವನನ್ನು ದಂಡಿಸುತ್ತಿತ್ತು. ಇಂಥ ಉದಗ್ರವಾದ ಕ್ಷಾತ್ರಧರ್ಮಾಭಿಮಾನಕ್ಕಾಗಿಯೇ ರಜಪೂತರ ಕುಲವು ಸಮಸ್ತವಾದ ಪೃಥ್ವೀಮಂಡಲದಲ್ಲಿ ಶ್ರೇಷ್ಠವಾದದ್ದೆಂದು ಹೆಸರಾಗಿ ಹೋಯಿತು. ಬಾಬರ, ಅಕಬರರೂ, ಜಾರ್ಜ್ |ವ್ಹಿಕ್ಟೋರಿಯರೂ ಮಹಾನ್ ಮಹಾನ್ ಸೇನಾಪತಿಗಳೂ ಚತುರರಾದ ಕವಿಗಳೂ ರಜಪೂತ ವೀರರ ಮಹಾತ್ಮ್ಯವನ್ನು ಕೊಂಡಾಡಿ ಹಾಡಿದ್ದರ ಶ್ರೇಯಸ್ಸು ರಜಪೂತ ಮಾತೆಗೂ ವೀರಪತ್ನಿಗೂ ಸಲ್ಲತಕ್ಕದ್ದು.

## ೨೮

ಸುಲೇಮಾನ ಸುಲ್ತಾನನು ವಿಜಯಿಯಾದ ಸಂಗತಿಯನ್ನರಿತು ಅಲ್ಲಾಃಬಾದಿನ ನಿವಾಸಿಗಳೆಲ್ಲರೂ ಒಳ್ಳೇ ಆದರದಿಂದಲೂ ಉತ್ಸವದಿಂದಲೂ ಆ ರಾಜಕುಮಾರನಿಗೆ ಎದುರುಗೊಂಡು ಬಂದು, ಅನಾದಿಕಾಲದಿಂದ ವೈಭವವನ್ನು ಅನುಭವಿಸುತ್ತ ಬಂದಿರುವ ಪ್ರಾಚೀನ ರಾಜಧಾನಿಯಾದ ಆ ಪಟ್ಟಣದಲ್ಲಿ ಸುಲ್ತಾನರ ಪಾದಧೂಲಿ ಬೀಳಬೇಕೆಂದು ಬಿನ್ನಯಿಸಿದರು. ಪರಮ ಪವಿತ್ರವಾದ ಮಹಾನದಿಗಳೆರಡರ ರಮಣೀಯ

ವಾದ ಪ್ರವಾಹಗಳಿಂದ ಸಂಬಂಧವಾದ ಆ ಪ್ರಯಾಗ ನಗರಿಯು ಸ್ವಭಾವತಃ ಬಹು ರಮ್ಯವಾಗಿ ತೋರುತ್ತಿದ್ದಾಗ್ಯೂ, ಆ ದಿವಸ ನಗರವಾಸಿಗಳು ಅದನ್ನು ಬಹುಪರಿಯಾಗಿ ಅಲಂಕರಿಸಿದ್ದರು. ಬೀದಿಬೀದಿಗಳಿಗೆಲ್ಲ ಸುಗಂಧಮಯವಾದ ಜಲಗಳಿಂದ ತಳಿ ಹೊಡೆದು ಚಿತ್ರಮಯವಾದ ರಂಗವಲ್ಲಿಗಳನ್ನು ಹಾಕಿದ್ದರು. ಪಲ್ಲವ-ಪುಷ್ಪಮಂಜರಿ-ಹಣ್ಣುಕಾಯಿಗಳ ಸಹಿತವಾಗಿ ಮುರಿದು ತಂದು, ಬಕುಲ, ಸಂಪಿಗೆ, ಅಶೋಕ, ಆಮ್ರ ಮುಂತಾದ ಸಲ್ಲಲಿತವಾದ ಶಾಖೆಗಳನ್ನು ಮುರಿದು ತಂದು, ಅಲ್ಲಲ್ಲಿ ಸಂದಟಿತವಾಗಿ ಕಟ್ಟಿದ ತೋರಣಗಳ ಅವಿಚ್ಛಿನ್ನವಾದ ಸಾಲುಗಳನ್ನು ನೋಡಲಾಗಿ ಪ್ರತ್ಯಕ್ಷ ನಂದನವನದೇವಿಯೇ ಸುಲೇಮಾನನ ಸ್ವಾಗತೋತ್ಸವವನ್ನು ನೋಡಲುತ್ಸುಕಳಾಗಿ ಸ್ವರ್ಗದಿಂದ ಕೆಳಗಿಳಿದು ಭೂಮಿಯ ಸಮೀಪಕ್ಕೆ ಬಂದು ನಿಂತಿರುವಳೋ ಎಂಬಂತೆ ಭಾಸವಾಗುತ್ತಿತ್ತು. ಘನವಾದ ವಾದ್ಯಗಳ ತುಮುಲವಾದ ನಿನಾದವೂ, ಆನೆ ಕುದುರೆಗಳ ಚೀತ್ಕಾರ ಹೇಷಾರವಗಳೂ, ನಗರವಾಸಿಗಳು ಮಾಡುತ್ತಿರುವ ಜಯಘೋಷಗಳೂ, ಗಾಯಕರ ಮಂಜುಲವಾದ ಸ್ವರಗಳೂ ಏಕಾಕಾರವಾಗಿ ಹೋಗಿ ಚಮತ್ಕಾರವಾದ ಮಿಶ್ರಧ್ವನಿಯನ್ನುಂಟು ಮಾಡಿದವು. ಪಿಜಯಿಗಳ ಉದ್ರಿಕ್ತವಾದ ಮೇಳೆಯನ್ನು ಕಂಡು ಕೃತಾರ್ಥರಾಗಬೇಕೆಂಬ ಬಯಕೆಯುಳ್ಳ ವೀರರೂ, ಪುರುಷ ಸೌಂದರ್ಯದ ಪರೀಕ್ಷಾವತಿಯರಾದ ಸುಂದರಾಂಗನೆಯರೂ, ಪ್ರತ್ಯಕ್ಷವಾಗಿ ನಡೆದುಬರುತ್ತಿರುವ ಭಾಗ್ಯಲಕ್ಷ್ಮೀ, ಧೈರ್ಯಲಕ್ಷ್ಮೀ, ವಿಜಯಲಕ್ಷ್ಮಿಯರನ್ನು ಏಕಸಮಯಾವಚ್ಛೇದವಾಗಿ ಕಾಣಬಹುದಾದ ಲೋಕೋತ್ತರವಾದ ಸುಸಂಧಿಯನ್ನು ಕಳೆದುಕೊಳ್ಳಬಾರದೆಂಬ ಕುತೂಹಲವುಳ್ಳ ಬೇರೆ ಜನರೂ, ರಾಜಮಾರ್ಗಗಳಲ್ಲಿಯೂ ಉಪ್ಪರಿಗೆಗಳ ಕಿಟಿಕೆ-ಮೇಲ್ಮಾಳಿಗೆಗಳಲ್ಲಿಯೂ ತಳಕುಮಳಕಾಗಿ ನಿಂತುಕೊಂಡಿದ್ದರು.

ಬೆಳ್ಳಿ ಬಂಗಾರ ಮುತ್ತುರತ್ನಗಳಿಂದ ಅಲಂಕೃತವಾಗಿಯೂ, ಕಲಾಬತ್ತಿನ ಕೆಂಪು ಜೂಲದಿಂದ ಆಚ್ಛಾದಿತವಾಗಿಯೂ ಮೆರೆಯುತ್ತಿರುವ ಮಹಾ ಗಜೇಂದ್ರನ ಮೇಲಿರುವ ಅನರ್ಘವಾದ ಮಂಟಪದಲ್ಲಿ, ಸುಲೇಮಾನನು ವಿರಾಜಮಾನನಾಗಿ ಸಾಗಿಬರುತ್ತಿದ್ದನು. ಆ ರಾಜಕುಮಾರ

ನನ್ನು ಕಂಡಕೂಡಲೆ ರಾಜಮಾರ್ಗದ ಎರಡೂ ಬದಿಗಿರುವ ಮಹಾ ಮಂದಿರಗಳ ಚಂದ್ರಶಾಲೆಗಳಲ್ಲಿ ನಿಂತುಕೊಂಡಿರುವ ಪುರನಾರಿಯರೆಲ್ಲರೂ ಪುಷ್ಪಾಂಜಲಿಗಳ ವೃಷ್ಟಿಯನ್ನು ಮಾಡಿದರು; ಅನೇಕರು ಸ್ವಾಗತಪರವಾದ ಪದಗಳನ್ನು ಹಾಡಿದರು; ಸೈನಿಕರು ಗರ್ಜಿಸಿ ಸಿಂಹ ನಾದಗಳನ್ನು ಮಾಡಿದರು.

ಹೀಗೆ ವೈಭವದಿಂದ ಮೆರೆಯುತ್ತ ಬಂದ ಸುಲೇಮಾನನು ಕೃತಾರ್ಥನಾಗಿ, ತನಗಾಗಿ ಸಿದ್ಧಮಾಡಿಟ್ಟ ಬಿಡಾರಕ್ಕೆ ಬಂದಿಳಿದನು. ನೃತ್ಯ ಗಾಯನಗಳಾದವು; ಆದರೋಪಚಾರಗಳಾದವು; ಭೋಜನ ತಾಂಬೂಲಾದಿಗಳ ಸಮಾರಂಭಗಳಾದವು. ಹೀಗೆ ಆ ದಿವಸವೆಲ್ಲ ಉತ್ಸವಗಳಲ್ಲಿ ಹೇಳದೆ ಹೋಯಿತು. ಸಾಯಂಕಾಲದಲ್ಲಿ ಸುಲೇಮಾನನು ತನ್ನ ಪ್ರಿಯ ಮಿತ್ರನಾದ ಮಹಬೂಬಖಾನನ ಮಂದಿರಕ್ಕೆ ಬಂದನು. ಮಹಬೂಬನು ನವತರುಣನಾದ ಸರದಾರನೋರ್ವನೊಡನೆ ಏನೇನೋ ಆಪ್ತಾಲೋಚನವನ್ನು ನಡೆಸಿದ್ದನು. ಮುಖ್ಯ ಸೇನಾಪತಿಯೂ ಯುವರಾಜನೂ ಆದ ಸುಲೇಮಾನನು ಬಂದದ್ದು ಕಂಡು, ಅವರೀರ್ವರೂ ಚಕಿತರಾಗಿ ಎದ್ದು ನಿಂತು, ಅವನಿಗೆ ಯಥೋಚಿತವಾದ ರೀತಿಯಿಂದ ಪ್ರಣಾಮ ಮಾಡಿದರು.

"ಸರದಾರ ಮಹಬೂಬಖಾನ್, ಏನು ಆಲೋಚನ ನಡೆದಿದೆ? ಈ ತರುಣನಾದ ಸರದಾರನಾರು?" ಎಂದು ಸುಲೇಮಾನನು ಮಂದಸ್ಮಿತನಾಗಿ ಕೇಳಿ, ತನಗೆ ಉಚಿತವಾದ ಆಸನದಲ್ಲಿ ಕುಳಿತುಕೊಂಡನು.

"ಹುಜೂರ್, ಆಲೋಚನವೇತರದು? ಈ ತರುಣನು ನಮ್ಮ ಕಕ್ಕನ ಮಗನು. ನಮ್ಮ ಮನೆತನದ ವಿಷಯವಾದ ಕೆಲವು ಸಂಗತಿಗಳನ್ನು ಕುರಿತು ಆಪ್ತಾಲೋಚನಗೈಯಲು ಬಂದಿದ್ದಾನೆ." ಎಂದು ಮಹಬೂಬನು ನಗೆಮೊಗವನ್ನು ತಾಳಿ ಬಿನ್ನಯಿಸಿದನು.

"ಈ ತರುಣರಾದ ಸರದಾರರನ್ನು ಎಲ್ಲಿಯೋ ನೋಡಿದಂತೆ ಭಾಸವಾಗುತ್ತದೆ. ಮಹಬೂಬಖಾನ್, ನಿಮ್ಮ ಮನೆತನದವರೆಲ್ಲರೂ ಅತಿ ಸುಂದರರಾಗಿರುವಂತೆ ಕಾಣುತ್ತದೆ. ಈ ತರುಣನ ಸುಸ್ವರೂಪದ ಅರ್ಧವನ್ನು ಸೃಷ್ಟಿಕರ್ತನು ಓರ್ವ ತರುಣಿಗೆ ಕೊಟ್ಟದ್ದಾಗಿದ್ದರೆ, ಅವಳು ಜಗನ್ಮೋಹಿನಿಯೇ ಆಗುತ್ತಿದ್ದಳೆಂದು ನಾನು ಊಹಿಸುತ್ತೇನೆ." ಎಂದು

ಸುಲೇಮಾನನು ನಗುತ್ತ ನುಡಿದನು.

ಈ ಮಾತು ಕೇಳಿ ಆ ಸರದಾರನು ನಾಚಿದವನಾಗಿ ಅಧೋಮುಖ ನಾಗಿ ನಿಂತುಕೊಂಡನು. ನಾಚಿಕೆಯಿಂದ ಅವನ ಮುಖವು ಆರಕ್ತ ವಾಯಿತು. ವಿಚಾರಸಮ್ಮೂಢನಾಗಿ ಅವನು ತನ್ನ ಕೈಯಲ್ಲಿರುವ ಖಡ್ಗವನ್ನು ಅರೆವಾಸಿಯಾಗಿ ಹಿರಿದು, ಮಹಬೂಬನ ಮುಖವನ್ನು ನೋಡಿದನು.

" ಹುಜೂರ್, ಈ ವೀರನಾದ ತರುಣನನ್ನು ತಾವು ಸ್ತ್ರೀಗೆ ಹೋಲಿ ಸಿದ್ದರಿಂದ ಅವನಿಗೆ ಎಷ್ಟು ಕೋಪವು ಬಂದಿರುವದು ನೋಡಿದಿರಾ ? " ಎಂದು ಮಹಬೂಬಖಾನನು ಬೆಸಗೊಂಡನು.

" ವಾಃ! ಕೋಪ ಬಂದರೆ ನಾವೇನು ಮಾಡೋಣ? ತರುಣರು ರಮಣಿಯರ ಪ್ರೇಮವನ್ನು ಅಪಹರಿಸಲಿ! ಬೇಕಾದರೆ ಆ ರಮಣಿಯರನ್ನೇ ಅಪಹರಿಸಲಿ! ಆದರೆ ಆ ರಾಮೆಯರ ಸೌಂದರ್ಯವನ್ನು ಅಪಹರಿಸು ವದು ಪುರುಷನಲ್ಲಿ ಸರ್ವಥಾ ಅಕ್ಷಮ್ಯವಾದ ಮಾತು. ನೋಡಿದಿರಾ! ಈ ತರುಣನು ನಮ್ಮ ಶಹರ್‌ಜಾದಾ ಬೇಗಮ್‌ರ ಹೋಲಿಕೆಯನ್ನು ಕೂಡ ಸೆಳಕೊಂಡು ಬಿಟ್ಟಿದ್ದಾನೆ! " ಎಂದು ಸುಲೇಮಾನನು ಆ ತರುಣನ ಮುಖವನ್ನು ಆಸ್ಥೆಯಿಂದ ದಿಟ್ಟಿಸಿ ನೋಡಿ ನಕ್ಕು ನುಡಿದನು.

ಈ ಮಾತು ಕೇಳಿಯಂತೂ ಆ ತರುಣನ ಮುಖವು ಹುಚ್ಚಿಟ್ಟು ಸುರಿಯಿತು. ಸುಲೇಮಾನನಲ್ಲದೆ ಮತ್ತೊಬ್ಬನು ಅವನ ಮುಖವನ್ನು ನೋಡಿ ಹೀಗೆ ಟೀಕೆ ಮಾಡಿದ್ದಾದರೆ, ಅನರ್ಥವೇ ಆಗಬಹುದಾಗಿತ್ತು. ಆದರೂ ಅವನು ತನ್ನ ಮುಖದಲ್ಲಿ ನಗೆಯನ್ನು ತಳೆದು ಅಂದದ್ದು :— " ಹುಜೂರ್, ಶಹರ್‌ಜಾದೆಯ ಮೇಲೆ ತಮ್ಮ ಪ್ರೇಮವಿರುವ ಸಂಗತಿ ಯನ್ನು ಈ ನಮ್ಮ ಅಣ್ಣನಾದ ಮಹಬೂಬಖಾನರ ಮುಖದಿಂದ ಕೇಳಿ ದ್ದೇನೆ; ಆದರೆ ಆ ಪ್ರೇಮದ ಅತಿರೇಕದಿಂದ ಸುಲ್ತಾನರವರು ಪುರುಷರ ರೂಪದ ಮೇಲೆ ಈ ರೀತಿಯಾಗಿ ಟೀಕೆ ಮಾಡುವದು ವಿಪರೀತವಾಗಿ ತೋರುತ್ತದೆ. "

" ಬಾಲಕನೆ, ಇನ್ನೂ ನಿನ್ನ ತಲೆಯ ಮೇಲಿನ ಮಾಸ ಹಾರಿಲ್ಲ. ಪ್ರೇಮದ ವಾರ್ತೆಯನ್ನು ನೀನೇನು ಬಲ್ಲೆ? ಸುಮ್ಮನಿರು! " ಎಂದು

ಸುಲೇಮಾನನು ಶಹರ್‌ಜಾದೆಯ ಹೆಸರು ಕೇಳಿದ ಮಾತ್ರದಿಂದಲೇ ಪ್ರೇಮಾಕುಲನಾಗಿ ನುಡಿದನು.

"ಬಾಲಕನೆ, ನೀನಿನ್ನೂ ಪ್ರೇಮಪಾಶದಲ್ಲಿ ಸಿಕ್ಕಿಲ್ಲ; ಆ ಪಾಶದಲ್ಲಿ ಸಿಕ್ಕವರ ಮಾತುಗಳು ಹೇಗೆ ಚಮತ್ಕಾರವಾಗಿರುವವೆಂಬದನ್ನು ನೀನು ಕಂಡೆಯಷ್ಟೆ?" ಎಂದು ಮಹಬೂಬಖಾನನು ನುಡಿದು ಗಹಗಹಿಸಿ ನಕ್ಕನು.

ತನ್ನ ಪಕ್ಷವು ಗೆದ್ದಿತೆಂಬ ಉಬ್ಬಿನಿಂದ ಆ ತರುಣನು ತನ್ನ ಮುಖವನ್ನೆತ್ತಿ ಸುಲೇಮಾನನನ್ನು ನೋಡಿ, "ಹಜರತ್, ಮಹಬೂಬನ ವಾಗ್ಬಾಣದಿಂದ ತಾವು ಪರಾಜಿತರಾದಿರಿ!" ಎಂದು ನುಡಿದನು.

"ನೀನು ನನ್ನ ವಯಸ್ಸಿನವನಾದ ಮೇಲೆ ನಿನಗಾದರೂ ಈ ಅವಸ್ಥೆ ಪ್ರಾಪ್ತವಾದೀತು!" ಎಂದು ಸುಲೇಮಾನನು ಉದ್ಗಾರ ತೆಗೆದ ಕೂಡಲೆ ಎಲ್ಲರೂ ನಕ್ಕರು.

"ಹುಜೂರ್, ಇದು ವಿನೋದವಾಯಿತು. ಆದರೆ ವಿನೋದಕ್ಕಿಂತಲೂ ಮಹತ್ತ್ವವುಳ್ಳ ಸಂಗತಿಗಳನ್ನು ಕುರಿತು ನಾವೀಗಲೆ ಆಲೋಚಿಸಬೇಕಾಗಿದೆ. ಈ ನನ್ನ ಬಂಧುವು ಬೇಗಮ್‌ಸಾಹೇಬರ ಆಜ್ಞೆಯ ಮೇರೆಗೆ ಕೆಲವೊಂದು ಸಂಗತಿಯನ್ನು ಈ ಪಾದಗಳಿಗೆ ನಿವೇದಿಸಲು ಬಂದಿದ್ದಾನೆ. ಚಿತ್ತೈಸಬೇಕು!" ಎಂದು ಮಹಬೂಬಖಾನನು ಗಂಭೀರವಾದ ಮುಖಮುದ್ರೆಯನ್ನು ತಳೆದು ನುಡಿದನು.

"ಏನು ಸಮಾಚಾರವದು?" ಎಂದು ಸುಲೇಮಾನನು ಬೆರಗಾಗಿ ಕೇಳಿದನು.

"ಹೇಳು ದಿಲ್‌ದಾರಖಾನ್! ನಿನ್ನ ಸಮಗ್ರವಾದ ಸುದ್ದಿಯನ್ನು ಸರ್‌ಲಷ್ಕರರವರಿಗೆ ನಿವೇದಿಸು," ಎಂದು ಮಹಬೂಬನು ಆ ಸುಂದರನಾದ ತರುಣನಿಗೆ ಹೇಳಿದನು.

ದಿಲ್‌ದಾರಖಾನನು ಎದ್ದು ನಿಂತು ನೆಲಮುಟ್ಟಿ ಮೂರಾವರ್ತಿ ಸುಲೇಮಾನನಿಗೆ ಪ್ರಣಾಮ ಮಾಡಿ ಉಪಕ್ರಮಿಸಿದ್ದು— "ಪ್ರಭೋ, ಔರಂಗಜೇಬ ಸುಲ್ತಾನರು ಮುರಾದ ಸುಲ್ತಾನರನ್ನು ಕಟ್ಟಿಕೊಂಡು ನರ್ಮದಾ ನದಿಯನ್ನು ದಾಟಿ...." ಎಂದಿಷ್ಟು ಹೇಳುವಷ್ಟರಲ್ಲಿಯೆ ಅವನನ್ನು

ತಡೆದು ಸುಲೇಮಾನನೆಂದದ್ದು:—" ಏನು!!! ಆ ಕಪಟಿಯಾದ ಔರಂಗ ಜೇಬನು ನದಿಯನ್ನು ದಾಟಿದನೆ? ಆಗ್ರಾಪಟ್ಟಣದಲ್ಲಿ ನಮ್ಮವರೇನು ಮಾಡುತ್ತಿದ್ದರು? ದೊಡ್ಡದೊಡ್ಡ ಸೇನಾಪತಿಗಳೂ, ರಾಜನಿಷ್ಠರಾದ ಸರದಾರರೂ ಅಭಿಮಾನಿಗಳೆಂದು ಹೊಗಳಿಸಿಕೊಳ್ಳುವ ನಮ್ಮ ಪಕ್ಷದವರೂ ದೇಶಬಿಟ್ಟು ಎದ್ದು ಹೋಗಿದ್ದರೆ?"

"ಭಗವತ್ಕೃಪೆಗೆ ಪಾತ್ರರಾದ ನಮ್ಮ ಬಾದಶಹರವರೂ ದರಾಯುಸ ಸುಲ್ತಾನರೂ ಕೂಡಿ ಸರದಾರ ಕಾಸಮುಖಾನರನ್ನೂ ರಾಜಾ ಜಸವಂತ ಸಿಂಗರನ್ನೂ ಔರಂಗಜೇಬನ ಮೇಲೆ ಸಾಗಿಹೋಗಿ ಅವರನ್ನು ನರ್ಮದೆಯ ಈಚೆಗೆ ಬರಕೂಡದಂತೆ ವ್ಯವಸ್ಥೆ ಇಡುವದಕ್ಕಾಗಿ ಕಳುಹಿಸಿದ್ದರು.

"ಜಸವಂತಸಿಂಗ-ಕಾಸಮುಖಾನರಂಥ ಮಹಾ ವೀರರ ಕಣ್ಣು ತಪ್ಪಿಸಿಕೊಂಡು ಶತ್ರುಗಳು ನರ್ಮದೆಯನ್ನು ದಾಟಿದ್ದು ಹೇಗೆ?" ಎಂದು ಸುಲೇಮಾನನು ಆವೇಶದಿಂದ ಕೇಳಿದನು.

"ಹುಜೂರ್, ರಾಜಾ ಜಸವಂತಸಿಂಗರಂಥ ಸಂಗ್ರಾಮಸಿಂಹರಾರೂ ಇಲ್ಲ. ಕಾಸಮುಖಾನರಾದರೂ ಅಸಾಧಾರಣರಾದ ವೀರರೆಂದು ನಾವೆಲ್ಲರೂ ಕೇಳಿದ್ದು. ಆದರೆ ಆಯುತ್ತವಾದ ಸಮಯದಲ್ಲಿ ಕಾಸಮುಖಾನರು ಶತ್ರುಗಳಿಗೆ ಅನುಕೂಲರಾಗಿ ಮದ್ದು-ಗುಂಡುಗಳಿಗೆ ನೀರು ಹೊಯ್ದು ರಣರಂಗದಿಂದ ಕಾಲ್ದೆಗೆದು ಓಡಿಹೋದರು."

ಅದನ್ನು ಕೇಳಿ ಸುಲೇಮಾನನು ಕ್ರೋಧಾವೇಶದಿಂದ ಕರಕರನೆ ಹಲ್ಲು ತಿಂದು, ತನ್ನ ಖಡ್ಗವನ್ನು ಹಿರಿದು, "ಖಬರ್‌ದಾರ್ ದಿಲ್‌ದಾರ ಖಾನ್!! ಸರದಾರ ಕಾಸವಖಾನರು ದ್ರೋಹಮಾಡಿದರೆಂದು ಹೇಳುವೆಯಾ? ನಿನ್ನ ಅಭದ್ರವಾದ ನಾಲಗೆಯು ಸುಳ್ಳು ಹೇಳಿದ್ದಾದರೆ ಅದನ್ನು ನಾನು ಹಿರಿದು ತೆಗೆದು ಕಚಕಚನೆ ಕಡಿದುಹಾಕಿ ಹದ್ದು-ಕಾಗೆಗಳ ಪಾಲು ಮಾಡುವೆನು; ಎಚ್ಚರದಿಂದ ಮಾತಾಡು!"

ದಿಲ್‌ದಾರನು ಭೀತಿಯಿಂದ ನಡುಗುತ್ತ ಸುಲೇಮಾನನಿಗೆ ನಮ್ರನಾಗಿ ಪ್ರಣಾಮ ಮಾಡಿ—"ಹುಜೂರ್, ಈ ಸೇವಕನು ಸರ್ವಥಾ ಸುಳ್ಳಾಡಿದವನಲ್ಲ. ನೀಚನಾದ ಕಾಸಮುಖಾನನು ದ್ರೋಹಿಯಾಗಿ ನಡೆದದ್ದು ನಿಜವು."

"ಕಾಸಮ್! ಕಾಸಮ್! ನೀನಿದನ್ನೇನು ಮಾಡಿದಿ? ಒಳ್ಳೇ ರಾಜನಿಷ್ಠನೆಂದು ಹೊಗಳಿಸಿಕೊಂಡು ನೀನು ನಿನ್ನ ಪಾಪಿಷ್ಠವಾದ ಕಲೇವರವನ್ನು ಮಹನೀಯರಾದ ಸರದಾರರ ಪಙ್ಕ್ತಿಯಲ್ಲಿ ತಂದಿರಿಸುತ್ತಿದ್ದಿಯಲ್ಲ! ಸತ್ಯನಿಷ್ಠನಾದ ಮುಸಲ್ಮಾನನು ಇಂಥ ದ್ರೋಹವನ್ನು ಮಾಡಬಹುದೆ! ಇನ್‌ಶಾಅಲ್ಲಾಃ! ಇನ್‌ಶಾಅಲ್ಲಾಃ!! ಮುಂದೆ?"

"ಆ ದ್ರೋಹಿಯ ದೋಷಕ್ಕಾಗಿ ವಿರಾಗ್ರೇಸರರಾದ ಜಸವಂತಸಿಂಗರು ಮಹತ್ತರ ಸಂಕಟಕ್ಕೀಡಾದರು. ಕಾಸಮಖಾನನು ಮದ್ದುಗುಂಡುಗಳಿಗೆ ನೀರು ಹೊಯ್ದುದ್ದರ ಮೂಲಕವಾಗಿ ಜಸವಂತಸಿಂಗರಿಗೆ ಬರಿಗೈಯಿಂದ ಶತ್ರುಗಳೊಡನೆ ಕಾದಬೇಕಾಯಿತು. ಶತ್ರುಗಳು ತೋಪು ತುಬಾಕಿಗಳ ಅಖಂಡವಾದ ಮಳೆಗರೆಯುತ್ತಿದ್ದರೂ ಆ ರಜಪೂತ ವೀರರು ಬೆಂಕಿಯಲ್ಲಿ ಒಳಹೊಕ್ಕು ಅತುಲವಾದ ಖಡ್ಗಯುದ್ಧವನ್ನು ಮಾಡಿ ಶತ್ರುಗಳ ಸೇನೆಯಲ್ಲಿ ಹಾಃಹಾಃಕಾರವನ್ನೆಬ್ಬಿಸಿದರಂತೆ. ಆದರೆ ನರದೇಹವು ಬೆಂಕಿಗೀಡಾಗುವದೆಂತು! ರಾಜಾಸಾಹೇಬರ ಸೈನ್ಯವೆಲ್ಲ ಹೊತ್ತಿ ಹುರಕಟ್ಲೆಯಾಗಿ ಹೋಯಿತು. ಅವರ ಗತಿಯೇನಾಯಿತೋ ಇನ್ನೂ ಚನ್ನಾಗಿ ತಿಳಿದಿಲ್ಲ!"

ಸುಲೇಮಾನನು ದುಃಖಾತಿರೇಕದಿಂದ ಎದೆಎದೆ ಬಡಕೊಂಡು "ತೋಬಾ! ತೋಬಾ!! ಯಾ ಅಲ್ಲಾಃ, ಯಾ ರಹೀಮ್! ಜಸವಂತಸಿಂಗಜೀ, ಹಿಂದುಸ್ಥಾನದ ರುಸ್ತುಮರಾದ ನಿಮ್ಮ ಅವಸ್ಥೆ ಹೀಗಾಯಿತೇ? ನಮ್ಮೀ ಮುಸಲ್ಮಾನೀ ರಾಜ್ಯದಲ್ಲಿ ಹಿಂದೂ ಮಹಾತ್ಮರು ರಾಜನಿಷ್ಠರಾಗಿ ನಡಕೊಂಡು ಸಾಮ್ರಾಜ್ಯದ ಆಧಾರಸ್ತಂಭವಾಗಿರುವಾಗ, ಅಮೀರ ಉಮ್ರಾವರೆನ್ನಿಸಿಕೊಳ್ಳುವ ಮುಸಲ್ಮಾನೀ ಪ್ರಜರು ದ್ರೋಹಿಗಳಾಗಿ ನಮ್ಮ ಗೋಣು ಮುರಿಯಬಹುದೆ! ಬುದ್ಧಿ ಪರಾಕ್ರಮ ರಾಜನಿಷ್ಠೆಗಳಲ್ಲಿ ಅದ್ವಿತೀಯರಾದ ಹಿಂದೂ ಪ್ರಜಾಜನರನ್ನು ಹಿಂದಕ್ಕೊತ್ತಿ ನನ್ನ ಮುತ್ತಾತರು ಮುಸಲ್ಮಾನರ ಹೆಣಚಂದ ಮಾಡಿದರಷ್ಟೆ? ಅಕಬರ ತಾತರೆ, ನಿಮ್ಮ ಉದಾರವಾದ ರಾಜ್ಯಪದ್ಧತಿಯ ನಿಯಮಗಳನ್ನು ಜಹಾಂಗೀರ ಶಹಾಜಹಾನ್ ಬಾದಶಹರು ಆದರಿಸದಿದ್ದ ಫಲವನ್ನು ಈಗ ನಾವೆಲ್ಲರು ಉಣ್ಣ

ಬೇಕಾಯಿತಲ್ಲವೆ? ಇನ್ನೀ ಅಂತಃಕಲಹದಲ್ಲಿ ಯಾವ ಯಾವ ದ್ರೋಹಿಗಳು ಎಂಥೆಂಥ ಅನರ್ಥಗಳನ್ನುಂಟು ಮಾಡುವರೋ ಜಗನ್ನಿಯಾಮಕನೇ ಬಲ್ಲ! ನಾವು ತೋಡರಮಲ್ಲರಂಥ ಮಂತ್ರಿಗಳನ್ನೂ ಮಾನಸಿಂಗ, ಜಯಸಿಂಗ, ಜಸವಂತಸಿಂಗರಂಥ ಸೈನ್ಯಾಧಿಕಾರಿಗಳನ್ನೂ ಎಲ್ಲ ಕಡೆಯಲ್ಲಿಯೂ ನಿಯಮಿಸಿದ್ದಾಗಿದ್ದರೆ, ಈ ಅನರ್ಥಗಳ ಭೀತಿಯು ನಮಗೆ ಇರುತ್ತಿದ್ದಿಲ್ಲ. ಉಪಾಯವಿಲ್ಲ! ದಿಲ್‌ದಾರ್, ಔರಂಗಜೇಬ ಸುಲ್ತಾನರು ನರ್ಮದೆಯನ್ನು ದಾಟಿ ಈಗ ಎಲ್ಲಿಗೆ ಬಂದಿರುವರೆಂಬ ವರ್ತಮಾನ ಉಂಟು?"

"ಅವರು ಚಂಬಳಾ ನದಿಯ ಸಮೀಪಕ್ಕೆ ಬಂದಿದ್ದು ಪ್ರಭುಗಳಾದ ದರಾಯಸ ಸುಲ್ತಾನರು ಅವರ ಮಾರ್ಗನಿರೋಧಕ್ಕಾಗಿ ಅತ್ತ ಕಡೆಗೆ ತೆರಳುವವರಾಗಿರುವರೆಂದು ಬೇಗಮ್‌ಸಾಹೇಬರವರು ನನಗೆ ಹೇಳಿ, ತಮ್ಮನ್ನು ಇತ್ತ ಕಡೆಗೆ ಬರಮಾಡುವಂತೆ ನನಗೆ ಆಜ್ಞಾಪಿಸಿರುವರು. ವೀರಶಿರೋಮಣಿಗಳಾದ ಸುಲೇಮಾನ್ ಶುಕೋರವರು ಪರಸ್ಥಳದಲ್ಲಿರುವಾಗ, ಔರಂಗಜೇಬರೊಡನೆ ಯುದ್ಧಮಾಡಲೆಸಗುವದು ಅವಿಚಾರವೆಂದು ರಾಜಧಾನಿಯಲ್ಲಿರುವ ಸೈನ್ಯಾಧಿಕಾರಿಗಳ ಅಭಿಪ್ರಾಯವಾಗಿರುವದು. ಆದ್ದರಿಂದ ಪ್ರಭುಗಳು ವಿಲಂಬಮಾಡದೆ, ರಾಜಧಾನಿಯ ಕಡೆಗೆ ದಯಮಾಡುವವರಾಗಬೇಕು."

"ದಿಲ್‌ದಾರಖಾನ್, ನೀನಾಡುವದು ಯಥಾರ್ಥವು. ಒಂದೇ ದಿವಸದ ವಿಲಂಬದಿಂದ ಅನಿವಾರವಾದ ಹಾನಿಗಳುಂಟಾಗಬಹುದು. ಯುದ್ಧಗಳು ನಡೆದಿರುವಾಗ ಸಮಾರಂಭ ಉತ್ಸವಗಳಲ್ಲಿ ತೊಡಗುವದು ಅಶುಭವೇ. ಇಂದಿನ ಉತ್ಸವದಲ್ಲಿ ಕಾಲಕಳೆದವನಾದ ನಾನೇ ಶತಮೂರ್ಖನು. ಮಹಬೂಬಖಾನ, ಈಗಿಂದೀಗಲೆ ರಾತ್ರಿ ಹಗಲೆನ್ನದೆ ಸೈನ್ಯವೆಲ್ಲ ಆಗ್ರಾದ ಮಾರ್ಗವನ್ನು ಹಿಡಿಯಲಿ. ನೀನೀಗಲೆ ಹೋಗಿ ಜೇಸಿಂಗರಾಜರಿಗೆ ನಡೆದ ವರ್ತಮಾನವನ್ನು ತಿಳಿಸಿ, ಆಗ್ರಾಕ್ಕೆ ಈಗಲೆ ಹೊರಡಬೇಕೆಂದು ಸೂಚಿಸು."

## ೨೯

ಔರಂಗಜೇಬನು ನರ್ಮದಾ ನದಿಯನ್ನು ದಾಟಿ ಧಾವಿಸುತ್ತ ಪಯಣಗತಿಯಿಂದ ಉತ್ತರಮಾರ್ಗವಾಗಿ ಸಾಗಿ ಬರುತ್ತಿರುವನೆಂಬ ವರ್ತಮಾನವನ್ನರಿತು, ಸುಲ್ತಾನ ದರಾಯುಸನಾದರೂ ಪ್ರಚಂಡವಾದ ಸೇನೆಯನ್ನು ಕೂಡಿಸಿದನು. ಒಂದು ಲಕ್ಷ ರಾವುತರೂ ಸಾವಿರಾರು ಆನೆಗಳೂ ಐವತ್ತು ಸಾವಿರ ಜನ ಕಾಲಾಳುಗಳೂ ನೂರಾರು ತೋಫು ಗಳೂ ಆ ಸುಲ್ತಾನನ ಆಜ್ಞೆಯಾಗುತ್ತಲೆ ಸಿದ್ಧವಾದವು. ಹೊತ್ತಾಟದ ಆಳು ಬಂಡಿಗಳೂ ಲಮಾಣಿಗರಾದ ವ್ಯಾಪಾರಸ್ಥರೂ ಅಸಂಖ್ಯರಾಗಿ ದ್ದರು. ದರಾಯುಸನ ಸೈನ್ಯವು ಯುದ್ಧಕಲೆಯನ್ನು ಅರಿತದ್ದು. ಪ್ರತ್ಯಕ್ಷ ಆ ರಾಜಕುಮಾರನೇ ಪರಾಕ್ರಮಶಾಲಿಯಾದ ಸೇನಾನಿಯು. ಇಂಥ ಪ್ರಚಂಡವಾದ ಸೇನೆಯು ಭರತಭೂಮಿಯಲ್ಲಾದ ಅರ್ವಾಚೀನ ಯುದ್ಧ ಗಳಲ್ಲಿ ಕಂಡದ್ದಲ್ಲ.

ದರಾಯುಸನ ಸೇನೆಯು ಔರಂಗಜೇಬ ಮುರಾದರ ಸಂಯುಕ್ತ ಸೇನೆಗಿಂತಲೂ ದೊಡ್ಡದಾಗಿಯೂ ನುರಿತದ್ದಾಗಿಯೂ ಇರುವದರಿಂದ, ಪ್ರಾಪ್ತಕಾಲದಲ್ಲಿ ಅವನು ತನ್ನ ಸೇನೆಯನ್ನು ತೆಗೆದುಕೊಂಡು, ಮುರಾದ ಔರಂಗಜೇಬರ ಮೇಲೆ ಸಾಗಿ ಹೋಗಿದ್ದರೆ, ಆ ಕನಿಷ್ಠ ಬಂಧುಗಳ ಹೆಡಕು ಮುರಿದು ಅವರನ್ನು ಹಿಂದಕ್ಕೆ ಓಡಿಸಿಬಿಡುವದು ಕರತಲಾಮಲಕ ದಂತೆ ಸುಲಭವಾಗಿತ್ತು. ಆದರೆ ಮೊಗಲ ವಂಶದ ಸಮಾಪ್ತಿಕಾಲವು ಸಮೀಪದಲ್ಲಿಯೇ ಒದಗಿ ಬಂದಿತ್ತೆಂದೋ, ಹಿಂದುಸ್ಥಾನದ ಪ್ರಜಾ ಜನರೇ ದುರ್ದೈವಿಗಳಾಗಿದ್ದರೆಂದೋ, "ಶುಭಸ್ಯ ಶೀಘ್ರಂ" ಎಂಬ ಕೆಲಸಕ್ಕೆ ವಿಘ್ನಗಳನ್ನು ತರುವವರು ಅನೇಕರಾದರು. ಪ್ರತ್ಯಕ್ಷ ಬಾದಶಹ ನಿಗೆ ಈ ಯುದ್ಧವು ಬೇಡಾಗಿತ್ತು. ಯುದ್ಧವನ್ನು ತಪ್ಪಿಸುವ ಮಾರ್ಗ ವನ್ನರಿಯದೆ ದರಾಯುಸನ ಪ್ರಗತಿಗೆ ಕಾಲ್ತೊಡಕಾಗಿ ಆ ವೃದ್ಧನಾದ ಸಾರ್ವಭೌಮನು ತನ್ನ ಹಿರಿಯ ಮಗನ ವಿರುದ್ಧವಾಗಿ ಅನೇಕವಾದ ಪ್ರತೀಕಾರಗಳನ್ನು ಕಲ್ಪಿಸಿದನು. ಶಾಇಸ್ತೇಖಾನ, ದಾನಿಶ್‌ಮಂದ ಖಾನ್‌ರೆಂಬ ವೀರರು ಈ ಯುದ್ಧವು ಸದ್ಯಕ್ಕೆ ಬೇಡವೆಂದು ಕೂಗಿ

ಕೊಂಡರು. ಮಧ್ಯಸ್ಥರಾದ ಸರದಾರರು “ಅಶುಭಸ್ಯ ಕಾಲಹರಣಂ” ಎಂಬಂತೆ ಸುಲೇಮಾನ ಶುಕೋನ ಆಗಮನವನ್ನು ನಿರೀಕ್ಷಿಸಬೇಕೆಂದು ಸೂಚಿಸಿದರು. ಶೂರನಾದ ದರಾಯಸನ ಅಭಿಪ್ರಾಯದ ಮೇರೆಗೆ ತತ್ಕಾಲಕ್ಕೆ ಉಪಾಯವನ್ನು ಮಾಡುವದೇ ತಕ್ಕದ್ದಾಗಿತ್ತು! ಆದರೇನು ಮಾಡುವದು? ಔರಂಗಜೇಬನ ದೈವವೇ ದೊಡ್ಡದಾಗಿತ್ತು. ಆಗ್ರಾದಲ್ಲಿ ನಡೆದಿರುವ ಅಕ್ಷಮ್ಯವಾದ ಕರ್ತವ್ಯಪರಾಙ್ಮುಖತೆಯು ಸಂಧಿಯನ್ನು ಸಾಧಿಸಿ, ಆ ಧೂರ್ತನು ಚಪಲಗತಿಯಿಂದ ಸಾಗಿ, ರಾಜಧಾನಿಯಿಂದ ಒಂದು ಪಯಣದ ಅಂತರದಲ್ಲಿ ಬಂದು ನಿಂತುಕೊಂಡನು.

ಇಷ್ಟಾದರೂ ಶಹಾಜಹಾನನಿಗೆ ಬುದ್ಧಿ ಬರಲಿಲ್ಲ. ದೌರ್ಮಂತ್ರ್ಯವೆಂಬ ಅಪಥ್ಯವನ್ನು ಸೇವಿಸಿದ್ದರಿಂದ, ಇದ್ದಷ್ಟು ಬುದ್ಧಿಯು ಕೆಟ್ಟು ಹೋಗಿತ್ತು. ಔರಂಗಜೇಬನ ಸಾಧುವೃತ್ತಿಯಲ್ಲಿ ಅವನಿಗೆ ಇನ್ನೂ ನಂಬಿಗೆ; ಆದರೂ ದಾರಾನಲ್ಲಿದ್ದ ಪ್ರೇಮವನ್ನಾದರೂ ಅವನು ಅಳಿಸಿ ಹಾಕಲಾರನು. ಯುದ್ಧದಲ್ಲಿ ತನ್ನ ಮಕ್ಕಳ ಜೀವಕ್ಕೆ ಅಪಾಯವಾಗಬಾರದೆಂಬ ಉತ್ಕಟವಾದ ಚಿಂತೆ ಅವನಿಗಿದ್ದರೂ, ಅವರೆಲ್ಲರ ಕುತ್ತಿಗೆಗೆ ಉರ್ಲು ತರುವಂಥ ಮಾರ್ಗವನ್ನೇ ಅವನು ಅವಲಂಬಿಸುತ್ತಿದ್ದನು.

“ದರಾಯುಸ್, ನೀನು ಅವಿಮರ್ಶಕಾರಿಯು! ಈಗಲೇ ನೀನು ಸೈನ್ಯವನ್ನು ಕಟ್ಟಿಕೊಂಡು ಹೋಗುವದು ನನಗೆ ವಿಹಿತವಾಗಿ ತೋರುವದಿಲ್ಲ. ಔರಂಗಜೇಬನು ಯುದ್ಧ ಮಾಡುವದಕ್ಕಾಗಿ ಇಲ್ಲಿಗೆ ಬರುವನೆಂತಲ್ಲ, ಅವನು ನಮ್ಮ ದರ್ಶನಾರ್ಥವಾಗಿ ಬರುತ್ತಿರುವನೆಂದು ಶಾಇಸ್ತೇಖಾನರು ಹೇಳುತ್ತಾರೆ.” ಎಂದು ಆ ವೃದ್ಧನಾದ ರಾಜನು ಮುದಿಹುಚ್ಚಿನ ಭರದಲ್ಲಿ ಮಾತಾಡಿದನು.

“ಹುಜೂರ್, ತಮ್ಮ ಔರಂಗಜೇಬ ಕುಮಾರನು ಪಿತೃಭಕ್ತಿಪರಾಯಣನಾಗಿ ತಮ್ಮ ದರ್ಶನಾರ್ಥವಾಗಿ ಬರುತ್ತಿದ್ದರೆ, ಕಾಸಮ್‌ಖಾನ್ ಜಸವಂತಸಿಂಗರ ಅವಸ್ಥೆ ಹಾಗೇಕಾಯಿತು? ಅವನೊಡನೆ ದೊಡ್ಡ ಸೇನೆಯೇಕೆ? ಸಾರ್ವಭೌಮರ ಸೇನೆಯೊಡನೆ ಜಗಳಾಡಿ ಬಂಡುಮಾಡಿದ ಔರಂಗಜೇಬನು ಪಿತೃಭಕ್ತಿಯುತನೆ?” ಎಂದು ದಾರಾಶಹನು ಕ್ರುದ್ಧನಾಗಿ ಕೇಳಿದನು.

“ದಾರಾಶಹ, ಔರಂಗಜೇಬನು ದುಷ್ಟಬುದ್ಧಿಯನ್ನು ತಳೆದು ಬರು

ತ್ತಿದ್ದರೂ ನಾನೀಗ ಅವನಿಗೆ ಬೇಡೆಂದು ಪತ್ರಬರೆದರೆ ಹಿಂದಿರುಗಿ ಹೋಗು ವನೋ ಇಲ್ಲವೊ ಪರೀಕ್ಷೆ ಮಾಡಿ ನೋಡು! ಯಾರಲ್ಲಿ? ಔರಂಗಜೇಬನಿಗೆ ಪತ್ರವನ್ನು ಬರೆಯಿರಿ !"

"ರಾಜಾಧಿರಾಜರೆ, ಸಮಯವೆಂಥದು ಬಂದೊದಗಿದೆ, ನೀವು ಮಾತಾಡುತ್ತಿರುವದೇಸು !!! ಇನ್ನು ಎರಡೇ ದಿವಸದ ವಿಲಂಬ ಮಾಡಿ ದರೆ. ನಿಮ್ಮಾ ಸತ್ಪುತ್ರನು ರಾಜಧಾನಿಗೆ ಮುತ್ತಿಗೆಯನ್ನಿಕ್ಕುವನು. ಅವನಿಗೆ ಅನುಕೂಲರಾಗಿರುವ ದ್ರೋಹಿಗಳು ಈ ಕೋಟೆಯ ಬಾಗಿಲವನ್ನು ಅವ ನಿಗೆ ತೆರೆದು ಕೊಡುವರು. ಬಾದಶಹರಿಗೆ ಈಗ ಉಪದೇಶಕರಾಗಿರುವ ಕೃತಘ್ನರೇ ನಾಳಿಗೆ ಅವರನ್ನು ಕಾರಾಗ್ರುಹಕ್ಕೆ ಕರೆದೊಯ್ಯುವರು. ನನ ಗಿನ್ನು ಉಪದೇಶಗಳ ವಾಕರಿಕೆ ಬಂದಿದೆ, ನಾನೀಗಲೆ ಔರಂಗಜೇಬನ ಸಮಾಚಾರಕ್ಕಾಗಿ ಹೊರಡುವೆನು. ನೀವಿಲ್ಲಿಯೇ ಆಲೋಚನಗಳನ್ನು ಮಾಡುತ್ತ ಕುಳಿತುಕೊಳ್ಳಿರಿ!" ಎಂದು ನುಡಿದು ಸುಲ್ತಾನ ದಾರಾಶಹನು ಹೊರಡಲು ಸಿದ್ಧನಾದನು.

"ತಡೆ ದರಾಯುಸ್! ನನ್ನ ಮಾತು ಮೀರಿ ನೀನು ಯುದ್ಧಕ್ಕೆ ಹೋದರೆ ಹೋಗು. ಆದರೆ ನೀನು ಅಪಜಯವನ್ನು ಹೊಂದಿ ಬಂದೆ ಯಾದರೆ ನಾನು ಯಾವಜ್ಜೀವ ನಿನ್ನ ಮುಖಾವಲೋಕನವನ್ನು ಮಾಡ ಲಿಕ್ಕಿಲ್ಲ." ಎಂದು ತಿಳುವಳಿಕೆ ಹೀನನಾದ ಆ ನೃಪಾಲನು ಕ್ರುದ್ಧನಾಗಿ ನುಡಿದನು.

ದರಾಯುಸನು ಅವನ ಮಾತಿಗೆ ಉತ್ತರಕೊಡಲು ಅಲ್ಲಿ ನಿಲ್ಲಲಿಲ್ಲ. ಕ್ರೋಧ, ವಿಷಾದ, ಜುಗುಪ್ಸೆ ಮುಂತಾದ ಮನೋವಿಕಾರಗಳಿಂದ ಅವನ ಹೃದಯವು ಒಳಿತಾಗಿ ಸಂಕ್ಷುಬ್ಧವಾಗಿ ಹೋಗಿದ್ದರಿಂದ, ಬಾಷ್ಪಾಕುಲೇ ಕ್ಷಣನಾದ ಅವನ ಕಣ್ಣಿಗೆ ಆ ಸಭೆಯೂ ಕಾಣಿಸಲಿಲ್ಲ; ಮಾತಾಡುವೆ ನೆಂದರೆ ಅವನ ಗಂಟಲಿನಿಂದ ಒಂದು ಅಕ್ಷರವಾದರೂ ಹೊರಡಲಿಲ್ಲ.

ಯುವರಾಜನೆದ್ದ ಕೂಡಲೆ ಅವನಲ್ಲಿ ನಿಷ್ಠೆಯುಳ್ಳವರೂ ಶೂರರೂ ಗುಣಪಕ್ಷಪಾತಿಗಳೂ ಆಗಿರುವ ಸರದಾರರೆಲ್ಲ ಬಾದಶಹನ ಸಿಂಹಾಸನಕ್ಕೆ ಮೌನದಿಂದ ಪ್ರಣಾಮ ಮಾಡಿ, ತ್ವರೆಯಿಂದ ಆ ಸಭಾಸ್ಥಾನವನ್ನು ಬಿಟ್ಟು ಕೊಟ್ಟು ನಡೆದರು. ದಾರಾಶಹನ ವೀರಾವೇಶವನ್ನೂ ಅವನ ಸೆಟೆಯನ್ನೂ

ಅವನ ಕ್ರುದ್ಧವಾದ ಮುಖಮುದ್ರೆಯನ್ನೂ ಕಂಡು ಅಲ್ಲಿ ಉಳಿದವರಾದ ಸಭಾಜನರೆಲ್ಲ ವಿಸ್ಮಯಾಕುಲರಾಗಿ ಒಬ್ಬರ ಮೋರೆಯನ್ನು ಒಬ್ಬರು ನೋಡುತ್ತ ನಿಂತರು. ಯುವರಾಜನ ಬೆನ್ನುಹತ್ತಿ ಹೋಗಲಿಲ್ಲಾದ್ದರಿಂದ ತಮಗೆ ರಾಜದ್ರೋಹದ ಲಾಂಛನವು ತಗಲಿತೋ ಎಂದು ಕೆಲವರು ಶಂಕಿಸಿದರು. ರಾಜಾಜ್ಞೆಯಾದರೆ ಯುವರಾಜನೊಡನೆ ಯುದ್ಧಕ್ಕೆ ಹೋಗಬಹುದೆಂದು, ಕೆಲ ಜನ ಮಧ್ಯಮರು ಯೋಚಿಸಿದರು. ದ್ರೋಹಿಗಳು ತಮ್ಮ ವಿಷದ ಹಲ್ಲುಗಳನ್ನು ಮುಚ್ಚಿಕೊಂಡು ಸಮಯನಿರೀಕ್ಷಣವನ್ನು ಮಾಡತಕ್ಕದ್ದೆಂದು ನಿರ್ಣಯಿಸಿಕೊಂಡರು.

ಶಹಾಜಹಾನನ ಮನಸ್ಸು ಅತ್ತಿತ್ತ ತೂಗಿತೂಗಿ ನಿಂತಬಳಿಕ, ಅವನು ಬಕ್ಷಿ ಕಲಿಲುಲ್ಲಾಖಾನನ್ನು ಕರೆದು, "ಬಕ್ಷಿ, ಯುದ್ಧವು ಅನಿವಾರ್ಯದಾಯಿತು. ಪ್ರಭುವಿನ ಸಂಕಲ್ಪಕ್ಕೆ ಉಪಾಯವಿಲ್ಲ. ನೀವು ನಮ್ಮ ದಾರಾ ಸುಲ್ತಾನರ ಪಕ್ಷವನ್ನು ವಹಿಸಿ ಅವರು ವಿಜಯಿಯಾಗುವಂತೆ ಯುದ್ಧ ಮಾಡಿರಿ. ಆದರೆ ಔರಂಗಜೇಬನ ಜೀವಕ್ಕೆ ಅಪಾಯವಾಗಕೂಡದೆಂಬದನ್ನು ನೀವು ಮರೆಯತಕ್ಕದ್ದಲ್ಲ!" ಎಂದು ಆಜ್ಞಾಪಿಸಿದನು. ಉಳಿದ ಸರದಾರರಿಗಾದರೂ ಶಹಾಜಹಾನನು ಅದೇ ಮೇರೆಗೆ ಆಜ್ಞಾಪಿಸಿದ ಬಳಿಕ ಸಭೆಯು ಮುರಿಯಿತು

## ೩೦

ಆಗ್ರಾದಲ್ಲಿ ಶಹಾಜಹಾನನು ಕೆಲವು ದಿನ ದಾರಾಶಹನ ಕೈಕಟ್ಟಿ ಕುಳ್ಳಿರಿಸಿದಂತೆ ಮಾಡಿದ ಸಮಯವನ್ನು, ಅನಲಸನೂ ಯುದ್ಧಕಲಾನಿಪುಣನೂ ಸಾಹಸಿಯೂ ಆದ ಔರಂಗಜೇಬನು ಸಾಧಿಸಿ, ಚಂಬಳಾ ನದಿಯನ್ನು ದಾಟುವ ಉದ್ಯೋಗವನ್ನು ನಡೆಸಿದ್ದನು. ಅಷ್ಟರಲ್ಲಿ ದಾರಾಶಹನು ತನ್ನ ಪ್ರಚಂಡವಾದ ಸೈನ್ಯವನ್ನು ಕಟ್ಟಿಕೊಂಡು ಸಮೀಪದಲ್ಲಿಯೇ ಬಂದಿರುವನೆಂಬ ವರ್ತಮಾನ ಬಂದಿತು. ಒಂದು ಯುಕ್ತಿಯು ಸಾಧಿಸದಿದ್ದರೆ ಮತ್ತೊಂದು ಯುಕ್ತಿಯನ್ನು ಔರಂಗಜೇಬನು ಮೊದಲೇ ಕಲ್ಪಿಸಿ ಇಟ್ಟುಕೊಂಡಿದ್ದನು. ಸಂಗಡಲೆ ನೆರೆಯಲ್ಲಿರುವ ಪ್ರಾಂತದ ರಾಜನಾದ ಸಂಪತ್‌ರಾಯನೆಂಬವನಿಗೆ ಹೇರಳವಾದ ಹಣವನ್ನು ಕೊಟ್ಟು

ಅವನ ರಾಜ್ಯದಲ್ಲಿ ಹಾದು ಅವನು ತೋರಿಸಿಕೊಟ್ಟ ಸ್ಥಳದಲ್ಲಿ ನದಿಯನ್ನು ದಾಟಿ, ಯಮುನಾ ನದಿಯ ಸಮೀಪದಲ್ಲಿ ಶಾಮುನಗರವೆಂಬ ಊರಿನ ಹತ್ತರ ಬಂದು, ತನ್ನ ಸೈನ್ಯವನ್ನು ನಿಲ್ಲಿಸಿಕೊಂಡು ನಿಂತನು. ದಾರಾಶಹ ನಾದರೂ ಎಷ್ಟುಮಾತ್ರವೂ ವಿಲಂಬಮಾಡದೆ ಔರಂಗಜೇಬನಿದ್ದ ಸ್ಥಳಕ್ಕೆ ಬಂದು ಅವನ ಎದೆಯ ಮೇಲೆ ನಿಂತುಕೊಂಡನು.

ದಾರಾಶಹನು ತನ್ನ ಬಲಭಾಗದಲ್ಲಿ ಮೂವತ್ತು ಸಾವಿರ ಮೊಗಲ ಸೈನಿಕರನ್ನು ಇಟ್ಟು ಅವರ ಮೇಲೆ ಕಲಿಲುಲ್ಲಾಖಾನನನ್ನು ನಿಯಮಿಸಿ ದನು. ಎಡಬದಿಯ ಸೈನ್ಯದ ಮೇಲೆ ರುಸ್ತುಮಖಾನ ದಖನಿ ಹಾಗು ರಾಮುಸಿಂಗ ರಾವುಳರೆಂಬ ದರಗಂಡ ವೀರರನ್ನು ನಿಲ್ಲಿಸಿದನು. ನಡುವೆ ಇರುವ ಪ್ರಚಂಡವಾದ ಸೇನೆಯ ನಿಯಾಮಕತ್ವವನ್ನು ಪ್ರತಾಪಶಾಲಿ ಯಾದ ದಾರಾಶಹನು ತನ್ನ ಕಡೆಗೆಯೇ ಇಟ್ಟುಕೊಂಡಿದ್ದನು. ಔರಂಗ ಜೇಬನ ಸೇನೆಯಾದರೂ ಒಳಿತಾಗಿ ಸನ್ನದ್ಧವಾಗಿತ್ತು.

ದಾರಾ ಔರಂಗಜೇಬರೀರ್ವರೂ ಹುಟ್ಟು ಕಲಿಗಳು. ರಣರಂಗದ ಭೀತಿಯು ತಿಲಮಾತ್ರವಾದರೂ ಅವರಿಗಿಲ್ಲ. ಇಬ್ಬರ ಸೈನ್ಯಗಳಾದರೂ ಸಮತೋಲವಾಗಿದ್ದವು. ಜಯಾಪಜಯಗಳು ದೈವಾಧೀನವಾದ ಸಂಗತಿ ಗಳೇ ಹೊರತಾಗಿ ಅವರವರ ಪ್ರಯತ್ನಗಳಲ್ಲಿ ದೋಷವಿರಲಿಲ್ಲ. ಅರು ಣೋದಯದ ಪೂರ್ವದಲ್ಲಿದ್ದು ದಾರಾಶಹನು ನಿಮಾಜಮಾಡಿ, ಭಗವತ್ ಪ್ರಾರ್ಥನೆಯನ್ನು ಮುಗಿಸಿಕೊಂಡು, ಇನ್ನು ಯುದ್ಧಕ್ಕೆ ಪ್ರಾರಂಭವಾಗ ಬೇಕೆಂದು ತನ್ನ ಅಧಿಕಾರಿಗಳಿಗೆಲ್ಲ ಆಜ್ಞೆಯನ್ನು ವಿಧಿಸಿದನು. ಸಂಗಡಲೆ ನಗಾರಿ, ನೌಬತ್ತು, ನಫೂರಿ, ತುತೂರಿ ಮುಂತಾದ ರಣವಾದ್ಯಗಳ ರಭ ಸದ ಸಪ್ಪಳವು ಶಬ್ದಗುಣವಾದ ಆಕಾಶದಲ್ಲೆಲ್ಲ ತುಂಬಿಕೊಂಡಿತು. ಔರಂಗಜೇಬನಾದರೂ ಜಾಗರೂಕನಾಗಿಯೇ ಇದ್ದನು. ಅವನ ಸೈನ್ಯ ದವರು ಪ್ರತ್ಯುತ್ತರವಾಗಿ ರಣವಾದ್ಯಗಳನ್ನು ಒಳಿತಾಗಿ ಹೊಡೆದರು.

ಸಿಡಿಲಿನಂತೆ ಆರ್ಭಟೆಯಿಂದ ಕಡಕಡಿಸುವ ಸಾವಿರಾರು ತೋಫು ಗಳೂ ಅರಳು ಹುರಿದಂತೆ ಎಡೆಬಿಡದೆ ಹಾರುತ್ತಿರುವ ತುಬಾಕಿಗಳೂ ಕೇಳುವವರ ಕಿವಿಗಳು ಗಡಚಿಕ್ಕುವಂತೆ ಹಾರಾಡಿ ಎತ್ತನೋಡಿದತ್ತ ಬೆಂಕೆಯ ಮಳೆಗರೆಯಲಾರಂಭಿಸಿದವು. ಸೈನಿಕರ ಶರೀರಗಳನ್ನು ಛಿನ್ನ

ವಿಚ್ಛಿನ್ನವಾಗಿ ಮಾಡುತ್ತಿರುವ ಸೀಸಿನ ಗುಂಡುಗಳೂ ದಟ್ಟಾಗಿ ಕವಿದಿರುವ ಹೊಗೆಯೂ ಉಸುಲುಗಟ್ಟುವಂಥ ಮದ್ದಿನ ನಾತವೂ ಉದ್ರಿಕ್ತರಾದ ಸೈನಿಕರ ಶರೀರಗಳನ್ನು ವಿಲಕ್ಷಣವಾಗಿ ಬಾಧಿಸುತ್ತಿದ್ದರೂ, ಅವರ ಉತ್ಸಾಹವು ಎಷ್ಟುಮಾತ್ರವೂ ಭಂಗವನ್ನು ಹೊಂದಲಿಲ್ಲ. "ತೋಯಿಸಿಕೊಳ್ಳುವ ತನಕ ಮಳೆಯ ಅಂಜಿಕೆ" ಎಂಬಂತೆ ಹೋರಾಟದಲ್ಲಿ ಹೋಗುವದೊಂದೇ ಎದೆಗುಕ್ಕು! ಯುದ್ಧ ಪ್ರಾರಂಭವಾದ ಬಳಿಕ ವೀರರಿಗೆ ಎಲ್ಲಿಂದ ಸ್ಫೂರ್ತಿ ಬರುತ್ತದೋ ಏನೋ; ಅವರಿಗೆ ಮರಣದ ಅಂಜಿಕೆಯೇ ಇಲ್ಲದಂತಾಗುವದು. ಶತ್ರುಸಂಹಾರದ ಹೊರತಾಗಿ ಬೇರೊಂದು ಹೀನತರವಾದ ವಿಚಾರಕ್ಕೆ ಅವರ ಹೃದಯದಲ್ಲಿ ಆಸ್ಪದವಿರದು. ಮಡಿದ ವೀರರು ಪರಲೋಕದಲ್ಲಿ ಪರಮಾತ್ಮನಿಂದ ಆದರಿಸಲ್ಪಡುವರೆಂಬದು ಅವರ ದೃಢವಾದ ನಂಬಿಗೆ! ಇದ್ದವರಿಗೆ ತಾವು ನಿಶ್ಚಯದಿಂದ ಇಹಲೋಕದ ಐಶ್ವರ್ಯವನ್ನು ಗೆಲ್ಲುವೆವೆಂಬ ಉತ್ಸಾಹ!!

ಉಭಯಪಕ್ಷದ ಸೈನ್ಯದವರು ತುಬಾಕಿ ತೋಫುಗಳ ಸುರಿಮಳೆಗಾಗಲಿ, ಸೂರ್ಯನನ್ನು ಅಡಗಿಸುವಂತೆ ದಟ್ಟಾಗಿ ಬರುತ್ತಿರುವ ಬಾಣಗಳ ವರ್ಷಣಕ್ಕಾಗಲಿ ಎದೆಗುಂದದೆ ಮುಗಿಬಿದ್ದು ಮುಂದೆಮುಂದಕ್ಕೆ ಸಾಗಿ ಬರುತ್ತಿದ್ದರು ಅಷ್ಟರಲ್ಲಿ ಕಲ್ಲುಸುರಿದಂತೆ ದೊಡ್ಡ ಮಳೆ ಬಿದ್ದಿತು ಬೆಂಕಿಗೆ ಅಂಜದ ವೀರರು ಮಳೆಯ ಭೀತಿಯನ್ನು ತಳೆಯುವರೆ? ದಾರಾಶಹನು ದೊಡ್ಡದೊಂದು ಮದ್ದಾನೆಯ ಮೇಲೆ ಕುಳಿತುಕೊಂಡು, "ಮಕ್ಕಳಿರಾ, ಇದೊಳ್ಳೇ ಸುಸಮಯವು. ಈಗಲೇ ನಾವು ನಾಲ್ಕು ಹೆಜ್ಜೆ ಮುಂದೆ ಸಾಗಿ ಹೋಗಿ ಶತ್ರುಗಳ ಎದೆಮೆಟ್ಟಿ ಸೀಳೋಣ ಬನ್ನಿರಿ! ಸಾಗಿರಿ, ನಿಮಗೆ ವಿಜಯವು ನಿಶ್ಚಯವಾಗಿ ಪ್ರಾಪ್ತವಾಗುವದು!" ಎಂದು ಹೇಳಿ ನಿರ್ಭೀತನಾಗಿ ತಾನೇ ಮುಂದಾಗಿ ಸಾಗಿನಡೆದನು. ಪ್ರಭುವೇ ಹೀಗೆ ಜೀವದ ಹಂಗುತೊರೆದು ಸಾಗುವಾಗ, ತಾವು ಹಿಂದುಳಿಯುವದು ಅನುಚಿತವೆಂದು ಸೈನಿಕರೆಲ್ಲರೂ ಇಮ್ಮಡಿಯಾದ ಉತ್ಸಾಹದಿಂದ ಸೇನಾಪತಿಯ ಬೆನ್ನುಬಿಡದೆ ರಣಗರ್ಜನೆಗಳನ್ನು ಮಾಡುತ್ತ ಧುಮುಕುತ್ತ ಸಾಗಿದರು.

ಭೂಮಿ ಗದ್ದರಿಸುವಂತೆ ಧಿಗ್ಗಧಿಗ್ಗನೆ ನೆಲವನ್ನು ಮೆಟ್ಟುತ್ತ ಸೈ

ಮೇಲೇರಿ ಬರುತ್ತಿರುವ ದಾರಾಶಹನ ಅಪರಿಮಿತವಾದ ಸೇನಾಸಮುದ್ರ ವನ್ನು ಕಂಡು ಔರಂಗಜೇಬನ ಸೈನ್ಯದವರು ಬೆದರಿದರು. ಸುಂಯಿ ಸುಯ್ಯೆಂದು ಬರುವ ಕೆಂಡದಂಥ ಗುಂಡುಗಳ ಹೊಡೆತವನ್ನು ಔರಂಗ ಜೇಬನ ಸೈನ್ಯದವರು ಸೈರಿಸದಾದರು. ರಾಮಸಿಂಗ ರಾವುಳನ ಕೈಕೆಳ ಗಿರುವ ಸೇನೆಯು ಮುರಾದ ಪಥಕವನ್ನು ನುಚ್ಚುನುಚ್ಚಾಗಿ ಕಡಿದು ಚಲ್ಲಿತು. ರುಸ್ತುಮಖಾನನು ತೋರಿಸಿದ ಪರಾಕ್ರಮವಾದರೂ ಅಸಾಧಾ ರಣವಾದದ್ದಾಗಿತ್ತು. ಔರಂಗಜೇಬ ದಾರಾಶಹರು ವ್ಯಕ್ತಪಡಿಸಿದ ರಣ ವೈಚಿತ್ರ್ಯವು 'ನ ಭೂತೋ ನ ಭವಿಷ್ಯತಿ'ಯಾಗಿ ತೋರಿತು. ಚಪಲನಾದ ದರಾಯಸನು ತುಬಾಕಿಗಳನ್ನು ಹಾರಿಸುತ್ತಿರುವಾಗ, ನಾಲ್ಕಾರು ಜನರು ಎಡೆಬಿಡದೆ ತುಂಬಿಕೊಡುತ್ತಿದ್ದರೂ ಸಾಲದೆ ಹೋಯಿತು. ಔರಂಜೇಬ ನಾದರೂ ಮನುಷ್ಯ ಶಕ್ತಿಯನ್ನು ಮೀರಿ ಯುದ್ಧ ಮಾಡುತ್ತಿದ್ದನು.

ಶಸ್ತ್ರಾಸ್ತ್ರಗಳ ತೀಕ್ಷ್ಣತರವಾದ ಪ್ರಹಾರಗಳನ್ನು ಸೈರಿಸದೆಯೂ, ಹೆಣಗಳ ಒಟ್ಟಿಲಗಳನ್ನು ಮೆಟ್ಟಲರಿಯದೆಯೂ, ರಕ್ತದ ಮಡುವುಗಳಲ್ಲಿ ಕಾಲಿಡಲೊಲ್ಲದೆಯೂ ಔರಂಗಜೇಬನ ಸೈನ್ಯವು ಎದೆಗುಂದಿ ಹಿಂದೆಹಿಂದಕ್ಕೆ ಕಾಲ್ದೆಗೆಯಲಾರಂಭಿಸಿತು. ಶತ್ರುಗಳ ಚರ್ಯೆಯನ್ನು ಕಂಡು ದಾರಾನ ಸೈನ್ಯವು ಇಮ್ಮಡಿಯಾದ ಉಬ್ಬಿನಿಂದ ಹುಯ್ಯೆಂದು ಸಾಗಿ ನಡೆದಿತು. ಅದೇ ಹುರುಪಿನಲ್ಲಿ ಇನ್ನೊಂದು ಪ್ರಹರ ಯುದ್ಧವು ನಡೆದಿದ್ದರೆ, ಅಂದಿಗೆ ಔರಂಗಜೇಬನ ಇತಿಶ್ರೀಯಾಗಿ ಹೋಗುತ್ತಿತ್ತು.

ಆ ಸಮಯಕ್ಕೆ ಕಾಲಿಲುಲ್ಲಾಖಾನನು ದಾರಾಶಹನ ಆನೆಯಿದ್ದಲ್ಲಿಗೆ ಬಂದು, ಮೇಲೆ ಕುಳಿತಿರುವ ಯುವರಾಜನಿಗೆ ಅನೇಕಾವರ್ತಿ ಪ್ರಣಾಮ ಮಾಡಿ, "ಹುಜುರ್, ವಿಜಯವು ನಮ್ಮದಾಯಿತು. ಇಂದಿಗೆ ದಿಲ್ಲಿಯ ಮುಕುಟವು ತಮ್ಮ ಉತ್ತಮಾಂಗದಲ್ಲಿ ವಿರಾಜಿಸುವದು; ಆದರೆ ಈ ವಿಜಯಪ್ರಾಪ್ತಿಯ ಕಾಲದಲ್ಲಿ ತಾವು ಹಾಗೆ ಆನೆಯ ಮೇಲೆ ಕುಳಿತು ಶತ್ರುಗಳ ಅಸ್ತ್ರಕ್ಕೆ ಗುರಿಯಾಗಿರುವದು ಸರ್ವಥಾ ಉಚಿತವಲ್ಲ. ಪಾಪಿ ಯೋರ್ವನ ಗುಂಡು ಯುವರಾಜರಿಗೆ ತಾಕಿದರೆ ಸಂಪಾದಿಸಿದ ವಿಜಯ ವೆಲ್ಲ ನಿರರ್ಥಕವಾದೀತು. ದಯಮಾಡಿ ಆನೆಯಿಂದ ಇಳಿದು ಯುವ ರಾಜರು ಅಶ್ವಾರೂಢರಾಗಬೇಕು. ಇನ್ನೊಂದು ಪ್ರಹರದಲ್ಲಿ ಔರಂಗ

ಜೇಬ ಮುರಾದರನ್ನು ಹೆಡಮುರಿಕೆ ಬಿಗಿದು ಈ ಪಾದಗಳ ಮುಂದೆ ನಿಲ್ಲಿಸುವದು ಈ ದಾಸನ ಕೆಲಸವು" ಎಂದು ಬಹುಪರಿಯಾಗಿ ಸೂಚಿಸಿದನು.

ದ್ರೋಹವನ್ನರಿಯದ ಉದಾರನಾದ ಆ ರಾಜಪುತ್ರನಿಗೆ ದ್ರೋಹಿಯಾದ ಕಾಲಿಲುಲ್ಲಾಖಾನನು ಆಡಿದ್ದೆಲ್ಲ ಯಥಾರ್ಥವಾಗಿ ತೋರಿತು. ದರಾಯುಸನು ಆನೆಯಿಂದಿಳಿದು ತನಗಾಗಿ ಸಿದ್ಧವಾಗಿರುವ ಕುದುರೆಯನ್ನೇರಿದನು. ಆನೆಯಿಂದಿಳಿದದ್ದೇ ದಾರಾಶಹನ ಇತಿಶ್ರೀಗೆ ಕಾರಣವಾಯಿತು. ಕೃತಘ್ನನೂ ನೀಚನೂ ಮಾನವ ರಾಕ್ಷಸನೂ ಆದ ಕಾಲಿಲುಲ್ಲಾಖಾನನು ಅದೇ ಕ್ಷಣವೇ ಬೊಬ್ಬೆ ಹೊಡೆಯುತ್ತೆ "ಘಾತ! ಘಾತ!! ಯುವರಾಜರು ಮಡಿದು ಹೋದರು!!!' ಎಂದು ಹೇಳಿ ಅಶುಭಸೂಚಕವಾದ ರಣವಾದ್ಯಗಳನ್ನು ಹೊಡಿಸಿದನು. ಸೇನಾನಾಯಕರೂ ಸೈನಿಕರೂ ಕಾಲಿಲುಲ್ಲಾಖಾನನು ಎಬ್ಬಿಸಿದ ದುರ್ವಾರ್ತೆಯನ್ನು ಕೇಳಿ ಹಾಹಾರಿ, ಯುವರಾಜನ ಆನೆಯಕಡೆಗೆ ನೋಡಿದರು. ಅಲ್ಲಿ ಅವನಿಲ್ಲ!! ಘಾತವಾಯಿತೆಂದವರೇ ಸೇನಾನಿಗಳೆಲ್ಲರೂ ಯುವರಾಜನನ್ನು ಹುಡುಕಲಾರಂಬಿಸಿದರು. ಚಾಂಡಾಲನಾದ ಕಾಲಿಲನು ತನ್ನ ಕೈಕೆಳಗಿರುವ ಸೇನೆಯನ್ನು ಕಟ್ಟಿಕೊಂಡು, ರಣಭೂಮಿಯನ್ನು ಬಿಟ್ಟು ಓಡಲಾರಂಬಿಸಿದನು. ಅವನ ಕೃತಿಯನ್ನು ಕಂಡು ಉಳಿದ ದಳವಾಯಿಗಳಾದರೂ ಹಾಗೆಯೇ ಮಾಡಿದರು. ದಾರಾಶಹನು ತಾನು ಜೀವಂತನಾಗಿರುವೆನೆಂದು ಕೂಗುತ್ತೆ ರಣಭೂಮಿಯ ತುಂಬ ಕುದುರೆಯನ್ನೋಡಿಸುತ್ತೆ ತಿರುಗಿದರೂ ಅವನನ್ನು ಯಾರೂ ನೋಡಲೊಲ್ಲರು. ಅವನ ಕೂಗನ್ನಾರೂ ಕೇಳಲೊಲ್ಲರು. ಸೈನ್ಯವೆಲ್ಲ ಅನಾಯಕವಾಗಿ ಕಂಡಕಂಡಂತೆ ಓಡತೊಡಗಿತು.

ಈ ಅಂತರ್ದ್ರೋಹವು ಔರಂಗಜೇಬನಿಗೆ ಮೊದಲೆಯೇ ತಿಳಿದಿತ್ತು. ಅವನ ಸೂಚನೆಯ ಮೇಲಿಂದಲೇ ಪಾಪಾತ್ಮನಾದ ಕಾಲಿಲುಲ್ಲಾಖಾನನು ಸ್ವಾಮಿದ್ರೋಹದ ಕೃತ್ಯವನ್ನು ಮಾಡಿದನು. ಔರಂಗಜೇಬನ ಸೇನೆಯು ದಾರಾಶಹನ ಹೊಡೆತವನ್ನು ಸೈರಿಸದೆ ಓಡತೊಡಗಿದಾಗ, ಮುರಾದನೇ ಮೊದಲಾದ ಅವನ ಪಕ್ಷದವರು ಔರಂಗಜೇಬನನ್ನು ಕುರಿತು, "ಸುಲ್ತಾನರೆ, ನಮಗಿದು ಅಪಜಯದ ಕಾಲವು, ಈ ದಿವಸ ನಾವು ಹಿಂದಕ್ಕೆ ಸರಕೊಂಡು जीवन्नरो भद्र शतानि पश्यति ಎಂಬ ನ್ಯಾಯದಂತೆ ಮುನ್ನೊಂದು

ಅನುಕೂಲವಾದ ಸಮಯಪ್ರತೀಕ್ಷೆಯನ್ನು ಮಾಡುವದು ಯೋಗ್ಯವಾಗಿ ತೋರುತ್ತದೆ'' ಎಂದು ಸೂಚಿಸಿದರು. ಔರಂಗಜೇಬನು ಮಂದಸ್ಮಿತನಾಗಿ, "ಬಂಧುಗಳೇ ಹೆದರಬೇಡಿರಿ. ನಮಗುಂಟಾದ ಈ ಅಪಜಯವು ಭ್ರಾಂತಿಮೂಲಕವಾದದ್ದು. ದೇವರು ಇದ್ದಾನೆ! ಇನ್ನೊಂದು ಕ್ಷಣ ತಡೆಯಿರಿ. ದೈವಗತಿಯ ಲೀಲೆಯು ಹೇಗಿರುವದೆಂಬದು ನಿಮಗೆ ಕಾಣುವದು. ಯುದ್ಧದಲ್ಲಿ ಪರಾಕ್ರಮವೊಂದೇ ಮುಖ್ಯವಾದದ್ದಲ್ಲ. ಚಿತ್ರವನ್ನು ಮಸಿಯು ನುಂಗುವಂತೆ ಭೇದವು ಸಾವಿರಪಟ್ಟಿನ ಪರಾಕ್ರಮವನ್ನು ನುಂಗಿಬಿಡುವದು.'' ಎಂದು ನುಡಿದು, ಹತಾಶರಾದ ತನ್ನ ಸರದಾರರನ್ನು ತಡೆದು ನಿಲ್ಲಿಸಿದನು.

ಔರಂಗಜೇಬನ ಮಾತು ಮುಗಿಯುವಷ್ಟರಲ್ಲಿಯೇ ದಾರಾಶಹನ ಸೈನ್ಯದಲ್ಲಿ ವಿಲಕ್ಷಣವಾದ ಹಾಃಹಾಃಕಾರವೆದ್ದಿತು. ತನ್ನಿಂದ ತಾನೇ ಅವನ ಸೈನ್ಯದವರು ಬೆದರಿದ ದನಗಳಂತೆ ಓಡಲಾರಂಭಿಸಿದರು. ಕಾಲಿಲುಲ್ಲಾಖಾನನು ತನ್ನ ಸೈನ್ಯವನ್ನು ಕಟ್ಟಿಕೊಂಡು ಔರಂಗಜೇಬನಿದ್ದಲ್ಲಿಗೆ ಹೊರಟುಬರುತ್ತಿರುವದನ್ನು ಕಂಡು, ಆ ಕಪಟಿಯಾದ ರಾಜಪುತ್ರನು ತನ್ನ ಸೈನ್ಯದಲ್ಲಿ ಜಯಭೇರಿಯನ್ನು ಹೊಡೆಸಿದನು.

ಹೇಳುವದೇನು? ಓಡಿ ಹೋಗುತ್ತಿರುವ ದಾರಾ ಸುಲ್ತಾನನ ಸೈನ್ಯವನ್ನು ಬೆನ್ನಟ್ಟಿ ಔರಂಗಜೇಬನು ವಿಜಯಿಯಾದನು. ಸ್ವಪರಾಕ್ರಮದಿಂದ ವಿಜಯಿಯಾಗಿದ್ದ ದಾರಾ ಸುಲ್ತಾನನು ಮೋಸಕ್ಕೀಡಾಗಿ ದುರ್ಧರವಾದ ಅಪಜಯವನ್ನು ಹೊಂದಿ, ನಿಲ್ಲಲು ಸ್ಥಳವಿಲ್ಲದೆ ದಿಕ್ಕೆಟ್ಟು ಪಾಮರನಂತೆ ಓಡುತ್ತ ಎಲ್ಲಿಯೋ ಹೊರಟಿದ್ದು ಹೋದನು. ಕಪಟವೆ, ನಿನ್ನ ವಿಲಕ್ಷಣವಾದ ವ್ಯಾಪಾರಗಳನ್ನು ಉದಾರರೂ, ಗುಣಿಗಳೂ, ಸರಲಸ್ವಭಾವದವರೂ ಕಂಡಿದ್ದರೆ, ಲೋಕದಲ್ಲಿ ಪಾಪಕ್ಕೆ ನೆಲೆಯಿರುತ್ತಿದ್ದಿಲ್ಲ! ಗುಣಗಳಿಗೆ ಹ್ರಾಸವಿರುತ್ತಿದ್ದಿಲ್ಲ! ನೀಚರು ಉಚ್ಚರಾಗಿಯೂ ಉಚ್ಚರು ನೀಚರಾಗಿಯೂ ಇರುವ ವಿಪರೀತವನ್ನು ಲೋಕವು ಕಾಣುತ್ತಿದ್ದಿಲ್ಲ!!!

## ೩೧

ದಾರಾ ಸುಲ್ತಾನನು ದೈವದುರ್ವಿಪಾಕದ ಮೂಲಕವಾಗಿ ಪರಾಜಿತನಾಗಿ ರಣಾಂಗಣವನ್ನು ಬಿಟ್ಟು ಓಡಿಹೋದ ಸಂಗತಿಯನ್ನು ಕಂಡು, ಔರಂಗಜೇಬನಿಗೆ ಪರಮಾವಧಿಯ ಸಂತೋಷವಾಯಿತು. ಹರ್ಷವಾಯುವಿನಿಂದ ಉನ್ಮತ್ತನಾಗಿ ಅವನು ಮುರಾದಬಕ್ಷನನ್ನು ಅಪ್ಪಿಕೊಂಡು, ಆನಂದಾಶ್ರುಗಳನ್ನು ಸುರಿಸಿದನು. ಒಳ್ಳೇ ಕರ್ತೃತ್ವವನ್ನು ಮಾಡಿ, ಕೃತಕೃತ್ಯನಾದ ಕಾಲಿಲುಲ್ಲಾ ಖಾನನನ್ನು ದರ್ಪಯುಕ್ತನಾದ ಆ ರಾಜಪುತ್ರನು ಒಳ್ಳೇ ಸನ್ಮಾನದಿಂದ ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡು, ಬಹುಪರಿಯಾಗಿ ಸಂಭಾವಿಸಿದನು. ವಸ್ತ್ರಾಲಂಕಾರಗಳನ್ನು ಎಲ್ಲರಿಗೂ ಬೀರಿಸುವದಾಯಿತು. ಯಾರ ಹೃದಯದಲ್ಲಿಯೂ ಧನ್ಯತೆಯ ಉಬ್ಬು! ಯಾರ ಮುಖದಲ್ಲಿಯೂ ಸಂತೋಷದ ಉಕ್ಕು!!

ವಿಜಯಿಗಳ ಪಕ್ಷದ ಪ್ರಮುಖರಾದ ಸರದಾರರ ಸಭೆ ಕೂಡಿತು. ಸಭಾಸ್ಥಾನದ ದೃಶ್ಯಭಾಗದಲ್ಲಿ ಒಂದು ಸಿಂಹಾಸನವನ್ನು ಇರಿಸಿದ್ದರು. ಆ ಸಿಂಹಾಸನದ ಎರಡೂ ಬದಿಗೂ ಹಿಂದೂ ಮುಸಲ್ಮಾನ ಸರದಾರರು ತಾರತಮ್ಯಾನುಸಾರವಾಗಿ ಕುಳಿತುಕೊಂಡ ಬಳಿಕ, ಫಕೀರನ ವೇಷಧಾರಿಯಾದ ಔರಂಗಜೇಬ ಸುಲ್ತಾನನು ಸಾರ್ವಭೌಮನ ವೇಷಧಾರಿಯಾದ ಮುರಾದಬಕ್ಷನ ಕೈಹಿಡಿದುಕೊಂಡು ಸಭೆಯಲ್ಲಿ ಕರತಂದ ಕೂಡಲೆ ಸರದಾರರೆಲ್ಲರೂ ಆದರದಿಂದ ಎದ್ದುನಿಂತು, ಆ ರಾಜಕುಮಾರರೀರ್ವರಿಗೂ ಪ್ರಣಾಮ ಮಾಡಿದರು. ಔರಂಗಜೇಬನು ಮುರಾದನನ್ನು ನೆಟ್ಟಗೆ ಸಿಂಹಾಸನಕ್ಕೆ ಕರತಂದು ಅದರಲ್ಲಿ ಅವನನ್ನು ವಿನಯದಿಂದ ಕುಳ್ಳಿರಿಸಿ, ಸಭಾಜನರನ್ನು ಕುರಿತು ಉಚ್ಚಸ್ವರದಿಂದ ನುಡಿದದ್ದೇನಂದರೆ :—

" ಪರಾಕ್ರಮಶಾಲಿಗಳಾದ ವೀರರೇ, ದಿಲ್ಲಿಯ ಸಾಮ್ರಾಜ್ಯದ ಆಧಾರಭೂತರಾದ ದಿಗ್ಗಜಗಳೇ, ಸರ್ವಶಕ್ತಿಮಂತನೂ ಯೋಗ್ಯಾಯೋಗ್ಯವಾದ ಮಾತುಗಳ ನಿರ್ಣಯಕರ್ತನೂ ಆದ ಸರ್ವೋತ್ತಮನಾದ ದೇವರು ಇಂದಿಗೆ ಸತ್ಪಕ್ಷದವರಾದ ನಮಗೆ ವಿಜಯವನ್ನು ದಯಪಾಲಿಸಿದ್ದಕ್ಕಾಗಿ ನಾವೆಲ್ಲರೂ ಆ ಪ್ರಭುವಿಗೆ ಋಣಿಯಾಗಿದ್ದೇವೆ. ಶೂಕ್ರ

ಅಲ್ಲಾಃ! ಕಾಫರನಾದ ದರಾಯುಸನಿಗೆ ತಕ್ಕದಾದ ಪ್ರಾಯಶ್ಚಿತ್ತವಾಯಿತು. ಸತ್ಯಧರ್ಮದ ರಕ್ಷಣದ ಚಿಂತೆಯು ಪರಮಾತ್ಮನಿಗೆ ಇರದಿದ್ದೀತೆ? (ಸಭಿಕರೆಲ್ಲರೂ "ಶೂಕ್ರ ಅಲ್ಲಾಃ! ಶೂಕ್ರ ಅಲ್ಲಾಃ! ಅಲ್ಲಾಃ ಹೋ ಅಕಬರ!!" ಎಂದು ಕೂಗಿ ಉದ್ಗಾರ ತೆಗೆದರು.)

ಔರಂಗಜೇಬನು ಜಪಮಾಲಾಯುತವಾದ ತನ್ನ ಹಸ್ತವನ್ನೆತ್ತಿ ಸಂತೋಷದಿಂದ ನಕ್ಕು, ಮತ್ತೆ ನುಡಿದದ್ದು:— "ಮಹನೀಯರೇ, ಇಂದು ನಮಗುಂಟಾದ ವಿಜಯಪ್ರಾಪ್ತಿಯ ಶ್ರೇಯಸ್ಸೆಲ್ಲ ಈ ನಿಮ್ಮ ಭಾವೀ ಚಕ್ರವರ್ತಿಗಳಾದ ಮುರಾದಶಹರದೆಯೇ ಹೊರತಾಗಿ ಮತ್ತೊಬ್ಬರದಲ್ಲ. ಮುರಾದಶಹರು ರಣರಂಗದಲ್ಲಿ ತೋರಿಸಿದ ಪರಾಕ್ರಮವನ್ನೆಲ್ಲ ನೀವು ಕಂಡವರೇ ಆಗಿರುತ್ತೀರಿ. ಪ್ರಾರಂಭದಿಂದಲೇ ನಮ್ಮ ಪಕ್ಷವು ಬಲವತ್ತರವಾದ ಸ್ವರೂಪವನ್ನು ಹೊಂದಿತು. ಸ್ವಧರ್ಮನಿಷ್ಠರಾದ ಈ ಮಹಾನುಭಾವರ ಔದಾರ್ಯ ಶೌರ್ಯ ಮುಂತಾದ ಅದ್ವಿತೀಯವಾದ ಗುಣಗಳನ್ನು ಕಂಡೆಯೇ ಇವರಿಗೆ ಪಟ್ಟಗಟ್ಟಬೇಕೆಂಬ ಸಂಕಲ್ಪವನ್ನು ನಾವು ಮಾಡಿದ್ದು. ಆ ಸುಸಂಕಲ್ಪವು ಇಂದಿಗೆ ಕೊನೆಗಂಡದ್ದೂ ನೋಡಿ ದೇವರೇ ನಮ್ಮ ಅಭೀಷ್ಟೆಗೆ ಅನುಕೂಲನಾಗಿರುವನೆಂಬದು ಸಿದ್ಧಾಂತವು. ನಮ್ಮ ಪರಮಪೂಜ್ಯ ತಾತರಾದ ಶಹಾಜಹಾನ್ ಬಾದಶಹರ ತಲೆಯ ಮೇಲೆ, ಭಾರವಾಗಿ ಕುಳಿತಿರುವ ಮುಕುಟವನ್ನು ಇಳಿಸಿ, ಅದನ್ನು ಧರಿಸಲು ಸರ್ವಥಾ ಯೋಗ್ಯರಾಗಿರುವ ಈ ನಮ್ಮ ಭಾವೀ ಚಕ್ರವರ್ತಿಗಳ ತಲೆಯ ಮೇಲಿಡುವ ವರೆಗೆ ಈ ಚಿಕ್ಕದಾದ ಮುಕುಟವನ್ನು ನಾನೀಗ ಇರಿಸುವೆನು." ಎಂದು ಹೇಳಿ ಔರಂಗಜೇಬನು ಮುರಾದನ ತಲೆಯ ಮೇಲೆ ತನ್ನ ಕೈಯಲ್ಲಿರುವ ರತ್ನಖಚಿತವಾದ ಮುಕಟವನ್ನು ಇರಿಸಿದನು. ಸಭಿಕರೆಲ್ಲರೂ ಉನ್ಮಾದದಿಂದ ಮುರಾದನ ಜಯಜಯಕಾರವನ್ನು ಮಾಡಿ, ತುಮುಲವಾದ ಕರತಲಧ್ವನಿಯನ್ನು ಮಾಡಿದರು. ಸಂಗಡಲೆ ಭೇರಿ-ದುಂದುಭಿ, ನಗಾರಿ-ನೌಬತ್ತು ಮುಂತಾದ ವಾದ್ಯಗಳ ಕೋಲಾಹಲವಾಯಿತು. ಧಡಧಡಲ್ಲನೆ ಸಾವಿರಾರು ತೋಪುಗಳು ಹಾರಿದವು.

ಮುಕುಟಧಾರಣ ಸಮಾರಂಭವು ಮುಗಿಯಿತು! ಇಂದು ಜಗತ್ತಿ

ನಲ್ಲಿ ಧನ್ಯನೆಂದರೆ ಮುರಾದನೋರ್ವನೇ. ಅವನ ಕಣ್ಣುಗಳಿಂದ ಆನಂದಾಶ್ರುಗಳು ಸುರಿದವು. ಗದ್ಗದಿತಕಂಠನಾದ ಅವನ ಮುಖದಿಂದ ಮಾತಾಡಲು ಅಕ್ಷರಗಳು ಹೊರಡಲೊಲ್ಲವು. ಅವನು ತಟ್ಟನೆ ಸಿಂಹಾಸನದಿಂದಿಳಿದು ಔರಂಗಜೇಬನ ಕಾಲ್ಗೆರಗಿ ಅವನನ್ನು ಬಹುಪರಿಯಾಗಿ ಕೊಂಡಾಡಿದನು. ಆಗ ಔರಂಗಜೇಬನು ತಮ್ಮನನ್ನು ಎತ್ತಿ ಅಪ್ಪಿಕೊಂಡು ನಿಃಸ್ಪೃಹನಾಗಿ ನುಡಿದದ್ದು:—

"ಬಾದಶಹರೆ, ಫಕೀರನಾದ ನಾನು ಈ ಮುಕುಟವನ್ನು ನಿಮ್ಮ ತಲೆಯ ಮೇಲಿಡದೆ ಅದನ್ನೇನು ನನ್ನ ತಲೆಯ ಮೇಲೆ ಇಟ್ಟುಕೊಳ್ಳಲಿಯಾ? ನೀವು ನನ್ನ ಮಾತನ್ನು ಆದರಿಸಿ ಈ ಮುಕುಟವನ್ನು ಧರಿಸಿದ್ದು ನೋಡಿ ನಾನೇ ಅದನ್ನು ಧರಿಸಿಕೊಂಡಿರುವಷ್ಟು ಸಂತೋಷವು ನನಗಾಗಿದೆ."

ಸಾಯಂಕಾಲದ ಭೋಜನಸಮಾರಂಭವಾದ ಬಳಿಕ ಔರಂಗಜೇಬನು ಮೀರಜುಮ್ಲಾನ ದಾಸೀ ಪುತ್ರನಾದ ಹಜರತ್ತ ಸಾಹೇಬರನ್ನು ಕರೆಯಿಸಿ ಆಜ್ಞಾಪಿಸಿದ್ದು:— "ಸರದಾರ ಹಜರತ್ತ ಸಾಹೇಬ, ಯುದ್ಧದಲ್ಲಿ ನಾವು ಮಾಡತಕ್ಕ ಪರಾಕ್ರಮವನ್ನೆಲ್ಲ ಮಾಡಿದೆವು. ಇನ್ನು ನೀವು ಮಾಡತಕ್ಕ ಮಹತ್ಕಾರ್ಯವು ಉಳಿದಿರುವದು. ಮುರಾದ ಬಾದಶಹರಿಗೆ ಸಂಗ್ರಾಮದ ಖೇದವು ಬಹಳವಾಗಿದೆ. ಅದನ್ನು ನೀವು ಹೇಗೆ ಜಾಣತನದಿಂದ ನಿವಾರಿಸುವಿರೋ ನೋಡುತ್ತೇನೆ. ಮಂಜುಗಾನೆಯರಾದ ಕಲಾವಂತಿನಿಯರ ಲಲಿತವಾದ ನೃತ್ಯಗಾನಗಳೂ, ಚಾರುವಾಕರ ವಿನೋದದ ಮಾತುಕಥೆಗಳೂ, ಶಿರಾಜ, ಇಸ್ತಂಬೂಲ, ಫಿರಂಗಿಸ್ತಾನ, ಇಂಗ್ಲಿಷ್‍ಸ್ತಾನ್, ಮುಂತಾದ ಪ್ರಾಂತಗಳಿಂದ ತರಿಸಿದ ಅಮೃತತುಲ್ಯವಾದ ಮದಿರಾರಸದ ಕಾವಲಿಗಳೂ ಹರಿಯಲಿ. ಇಂಥ ಕೆಲಸಗಳಲ್ಲಿ ನೀವೊಬ್ಬೇ ನಿಪುಣರೆಂಬ ಖ್ಯಾತಿಯಿದೆ ನಿಮಗೇನು ಹೇಳುವದು?"

## ೩೨

ಮುರಾದ ಸುಲ್ತಾನನು ಇನ್ನು ಬಾದಶಹನೆಂದು ಪ್ರತಿಚಾಣಕ್ಯನಾದ ಔರಂಗಜೇಬನೇ ರಾಜಾ, ನವಾಬ, ಅಮೀರ, ಉಮ್ರಾವ, ಸರದಾರ

ಸುಭೇದಾರರ ಮುಂದೆ ಸಾರಿ ಹೇಳಿರಲು, ಆ ಮಾತಿನ ಸಂದೇಹವು ಉಳಿಯಲೇ ಇಲ್ಲ. ಯಾರೊಬ್ಬರು ಮುರಾದನ ಮುಂದೆ ಬದ್ಧಾಂಜಲಿಗಳಾಗಿ ನಿಂತೇ ಇದ್ದರು. ಸಕಲ ಸನ್ಮಾನಗಳು ಅವನಿಗೆ ಸಲ್ಲಿದವು. ಯಾವದೊಂದು ಮಾತಾದರೂ ಅವನ ಆಜ್ಞೆಯಿಲ್ಲದೆ ನಡೆಯಲಿಲ್ಲ. ಬುಟ್ಟಿಬುಟ್ಟಿ ತುಂಬಿ ಅಕಬರೀ ಮೋಹರುಗಳನ್ನು ಅವನು ಹೇಗೆ ಬೇಕಾದ ಹಾಗೆ ಚಲ್ಲನೆ ಚಲ್ಲಾಡಿದರೂ ಕೈಹಿಡಿಯುವವರಿಲ್ಲ! ಇಷ್ಟೆಲ್ಲ ವೈಭವವನ್ನು ಮುರಾದನು ಕಾಣದವನೆಂತಲ್ಲ, ಇದಕ್ಕೆ ಇಮ್ಮಡಿಯಾಗಿ ಮೆರೆದ ರಾಜಕುಮಾರನವನು. ಆದರೆ ಬಾದಶಹನ ಪ್ರತಿಷ್ಠೆಯೆಲ್ಲಿ! ರಾಜಪುತ್ರನ ಪ್ರತಿಷ್ಠೆಯೆಲ್ಲಿ! ಸೇನಾಪತಿಯು ಹತ್ತುವ ಕುದುರೆಯು ಅಂಥದೇ, ಸಿಲೇದಾರರು ಹತ್ತುವ ಕುದುರೆಯು ಅಂಥದೇ. ಆದರೆ ರಹಸ್ಯವಿರುವದು ಹೆಸರಿನಲ್ಲಿ !!

ಇಂದಿನ ರಾತ್ರಿಯೆಂದರೆ ವಿಜಯಮಹೋತ್ಸವದ ಸಮಯವು. ಮುರಾದ ಬಾದಶಹನ ತಂಬುವಿನಲ್ಲಿ ದೀಪೋತ್ಸವಗಳಾಗತಕ್ಕವು. ನೃತ್ಯಗಾನಗಳ ಸಮಾರಂಭವಾಗತಕ್ಕದ್ದು. ಮದಿರಾ, ಶರಾಬ, ದ್ರಾಕ್ಷಾಪಾಕಾದಿಗಳ ಅವಿಚ್ಛಿನ್ನವಾದ ಸಂತರ್ಪಣವಾಗಬೇಕಾಗಿತ್ತು. ಹಿಮಾದ್ರಿಯ ಭವ್ಯವಾದ ಶಿಖರಗಳಂತೆ ಶುಭ್ರವಾಗಿ ಮೆರೆಯುತ್ತಿರುವ ತಂಬುಗಳ ಮಧ್ಯದಲ್ಲಿರುವ ಮುಖ್ಯ ತಂಬುವಿನ ಶೃಂಗಾರವು ಅವರ್ಣನೀಯವಾಗಿತ್ತು. ವಿವಿಧ ವರ್ಣದ ಸಹಸ್ರಾವಧಿ ಕಾಚಸ್ಫಟಿಕ ಕನ್ನಡಿಗಳ ಗಡಿಗೆ ಝುಂಬರಗಳಲ್ಲಿ ಪ್ರಕಾಶಿಸುವ ಅಸಂಖ್ಯಾಕವಾದ ದೀಪಮಾಲಿಕೆಗಳ ವಿಲಕ್ಷಣವಾದ ಜ್ಯೋತಿರಾಶಿಯು, ಹೊರಗೆ ಮುಸಿಗಿರುವ ಕಗ್ಗತ್ತಲೆಯಿಂದ ಹೆಚ್ಚು ಪ್ರಖರವಾಗಿ ಉರಿಯುವಂತೆ ಕಾಣುತ್ತಿತ್ತು. ತಂಬುವಿನ ಛತ್ತು ಗೋಡೆಗಳಿಗೆಲ್ಲ ಜರದ ಹೂವಿನ ರೇಶಿಮೆಯ ವಸ್ತ್ರಗಳ ಆಚ್ಛಾದನಗಳನ್ನು ಮಾಡಿದ್ದರು. ಚೀನ-ಜಪಾನ ದೇಶಗಳ ಕುಶಲರಾದ ಕಲಾನಿಪುಣರು ಮಾಡಿದ ಚಮಚಮತ್ಕಾರವಾದ ರೇಶಿಮೆಯ ಅಂತಃಪಟಗಳ ರಚನೆಗಳಿಂದ, ಆ ತಂಬುವಿನಲ್ಲಿ ದರಬಾರ, ಭೋಜನಗೃಹ, ವಿಲಾಸಮಂದಿರ, ಅಂತಃಪುರ, ಗಾನಶಾಲೆಗಳ ನಿರ್ಮಾಣವಾಗಿತ್ತು. ಅಲ್ಲಲ್ಲಿ ಶುಭ್ರವಾದ ಆಸ್ತಾರಣಗಳಿಂದ ಸ್ಪೃಹಣೀಯವಾಗಿ ತೋರುವ ದಿಂಬ

ತಿಪಾಸಿಗೆಗಳನ್ನಿಟ್ಟಿದ್ದರು. ಊದಿನಕಟ್ಟಿ, ಪಟವಾಸ, ದವನ, ಕುಸುಮ
ಗಳು ಸುಗಂಧವನ್ನು ಅಖಂಡವಾಗಿ ಉಗುಳುತ್ತಿದ್ದವು. ಚಮಚಮತ್ಕಾರ
ವಾದ ಹೂಗಳಾಕಾರವಾಗಿಯೂ, ಪಕ್ಷಿಗಳಾಕಾರವಾಗಿಯೂ, ಮೀನು
ಗಳಾಕಾರವಾಗಿಯೂ ಕಟ್ಟಿದ ತಾಂಬೂಲಗಳ ಕವಳಗಳನ್ನು ಬೆಳ್ಳಿ
ಬಂಗಾರದ ಹರಿವಾಣಗಳಲ್ಲಿ ತುಂಬಿತುಂಬಿ ಇಟ್ಟಿದ್ದರು.

ಒಂಟೆಯಂತೆ ಎತ್ತರನಾಗಿಯೂ ಬಡಕನಾಗಿಯೂ ಇರುವ ಗಾಯ
ಕನು ಹೂವಿನ ಗಿಡದ ರೇಸಿಮೆಯ ಉದ್ದಂಗಿಯನ್ನು ತೊಟ್ಟು, ಗಳಿಗೆ
ಬಟ್ಟಲಿನ ಮಾಟದ ಕೆಂಪು ಬನಾತಿನ ಟೊಪ್ಪಿಗೆಯನ್ನು ತಲೆಗಿಟ್ಟುಕೊಂಡು,
ತನ್ನ ಕೈಯನ್ನು ಒಮ್ಮೆ ಗಡ್ಡದ ಮೇಲೂ ಒಮ್ಮೆ ತಂಬೂರಿಯ ತಂತಿಯ
ಮೇಲೂ ಆಡಿಸುತ್ತ, ಗಾನದ ಪೂರ್ವಸಿದ್ಧತೆಯಲ್ಲಿ ತೊಡಗಿದ್ದನು ಮರೆ
ಯಲ್ಲಿ ನಿಂತಿರುವ ಓರ್ವ ವಾರಸುಂದರಿಯು ನೂಪುರಗಳ ಇನಿದಾದ
ಧ್ವನಿಯೊಡನೆ ಮೆಲ್ಲನೆ ಒಂದೆರಡು ಹೆಜ್ಜೆ ಕುಣಿದು ಪದವಿನ್ಯಾಸದ
ನುರಿತವನ್ನು ಪರೀಕ್ಷಿಸಿ, " ಗೇಂದಾ ಬಾಲಾ ಜಾ " ಎಂದು ಗಂಟಲಿನಲ್ಲಿ
ಹಾಡಿ ನೋಡಿದಳು. ಮತ್ತೋರ್ವ ಕುಚೇಷ್ಟಿತೆಯು " ಏಽಽರಾ ಆ ಆ
ಆ ಸಾ ಆ ಆ ಮಿಾ ಮಿನಾರಾ" ಎಂದು ಆ ಗಾಯಕನ ಪ್ರೀತ್ಯಾಸ್ಪದವಾದ
ದಾಕ್ಷಿಣಾತ್ಯ ಪದವನ್ನು ಅವನಂತೆಯೇ ಅನುಸರಿಸಿ ಹಾಡಿ, ಜೇರೆ ಗುಲ್ಲು
ಗಂಟೆಯನ್ನು ಕೂಡಿಸಿಕೊಂಡು ಖೊಳ್ಳನೆ ನಗುತ್ತಿದ್ದಳು. ಕೆಲ ಜನ
ಕುಟಿಲಕುಂತಳೆಯರ ಹೆಣಿಲು ಕೇಶಾಲಂಕಾರಗಳಿನ್ನೂ ಮುಗಿದಿದ್ದಿಲ್ಲ,
ಕೆಲವರ ಸೀರೆ ಕುಪ್ಪಸಗಳು ನಡೆದಿದ್ದವು. ಆಗ ಸರದಾರ ಹಜರತ್ತ
ಸಾಹೇಬರು ಆ ಸಾನಿಯರಿದ್ದಲ್ಲಿಗೆ ಧಾವಿಸಿ ಬಂದು, " ಎಂಥ ಅಕ್ಷಮ್ಯ
ವಾದ ವಿಲಂಬವಿದು! ನೀವು ಸಿದ್ಧರಾಗಿರುವಿರೋ ಇಲ್ಲವೋ ನೋಡಿ
ಬಾರೆಂದು ನೂತನರಾದ ಬಾದಶಹರು ನನಗೆ ಅಜ್ಞಾಪಿಸಿರುವರು. ಏಳಿರಿ
ಪ್ಯಾರಾಜೀ, ಗುಲಾಬಜೀ ಎಷ್ಟು ತಡವಿದು? ಛೇ! ಛೇ! ಛೇ! ಸುಂದ್ರಾಜಿ
ಯವರೇ, ಮುಖ ತೊಳೆಯುವದನ್ನು ಸಾಕು ಮಾಡಿರಿ. ನಿಮ್ಮ ಮೋರೆ
ಮುತ್ತಿಗಿಂತಲೂ ಮುತ್ತಾಗಿರುವದೆಂದು ಪ್ರತ್ಯಕ್ಷ ಬಾದಶಹರೇ ಅಡಿ
ತೋರಿಸಿದ್ದಾರೆ." ಎಂದು ಅವಸರ ಮಾಡಿದನು.

" ಏನು ಪೀಡೆಯಿದು! ಇನ್ನೂ ದರಬಾರ ಮಂದಿರದಲ್ಲಿ ಹಾಸಿಲ್ಲ.

ನಮ್ಮ ಎಲಾಸಿಗಳಾದ ಬಾದಶಹರು ಇನ್ನೂ ಸಮಾರಂಭಕ್ಕೆ ಸಿದ್ಧ ರಾಗಿಲ್ಲ. ಮಧ್ಯದಲ್ಲಿ ಈ ಅಡಬಡದಿಂಗಿಗಳ ಗೊಂದಲವೇ ಬಹಳ" ಎಂದು ಮೋಹನಾಜಿಯು ನಿಲುವುಗನ್ನಡಿಯಲ್ಲಿ ತನ್ನ ಸುಂದರವಾದ ಮುಖವನ್ನು ನೋಡಿ ಸಂತೋಷದಿಂದ ಗೋಣು ಅಲ್ಲಾಡಿಸಿ ನಗುತ್ತೆ ನುಡಿದಳು.

ಹಜರತ್ತನು ಕಿಂಚಿತ್ ರುಷ್ಟನಾಗಿ, "ಹೀಗೆಯೇ ಹೋಗಿ ನಾನು ಬಾದಶಹರಿಗೆ ಹೇಳಿಬಿಡುವೆನು. ನಿಮ್ಮ ಮರ್ಯಾದೆ, ಇನಾಮು ಮುಂತಾದವುಗಳನ್ನು ಕಸುಕೊಂಡರೆಯೇ ನೀವು ಮೆತ್ತಗಿರುತ್ತೀರಿ." ಎಂದು ನುಡಿದು ಈಗ ಬಾದಶಹರ ಕಡೆಗೆ ಹೋಗುವನೋ ಎಂಬ ಆವೇಶವನ್ನು ತಾಳಿದನು.

"ಹೀಗೆ ಮಾಡಿದರೆ ಹೇಗೆ ಸಾಹೇಬರೆ? ನಿಮ್ಮ ನಮ್ಮ ಹೊಟ್ಟೆ ತುಂಬಿಕೊಳ್ಳುವ ಮಾರ್ಗವು ಒಂದೇ ಆಗಿರುವದು. ನಾವೆಲ್ಲರೂ ಹೊರಟು ಹೋದರೆ ನಿಮ್ಮ ಅಧಿಕಾರವು ಕೂಡ ಇಲ್ಲದಂತಾಗುವದು ಕಂಡಿರಾ?" ಎಂದು ಮಲಕಾಜಾನೆಯು ಪರಿಹಾಸದಿಂದ ನುಡಿದಳು.

"ಅಂದರೆ ನೀವು ನಾಲ್ಕು ಜನರಲ್ಲಿ ನಮ್ಮ ಮರ್ಯಾದೆಯನ್ನು ತೆಗೆದುಕೊಳ್ಳಬೇಕೇನು?" ಎಂದು ಆ ಸಾಹೇಬರು ಜಂಬದಿಂದ ನುಡಿದರು.

"ಹಾಃ! ಹಾಃ!! ಮಿಯಾಸಾಹೇಬ ನಿಮಗೆ ಮರ್ಯಾದೆ ಅಮರ್ಯಾದೆಗಳ ಚಿಂತೆ ಈ ಪರಿಯಾಗಿ ಹುಟ್ಟಿದ ಬಳಿಕ ನಿಮ್ಮೀ ಸ್ಥೂಲ ಕಾಯವು ಬೇಗನೆ ಒಣಗಿಹೋದೀತು! ಜೋಕೆ!!" ಎಂದು ಮೋಹನಾಜಿಯು ಸೂಚಿಸಿದಳು.

"ಅವಳ ಮಾತೇನು ಹಜರತ್ತಸಾಹೇಬ, ಹೀಗೆ ಬನ್ನಿರಿ! ನಾನು ನಿಮ್ಮ ಉದ್ದವಾದ ಗಡ್ಡಕ್ಕೆ ಅತ್ತರವನ್ನು ಹಚ್ಚಿ ಓರಣವಾಗಿ ಹಿಕ್ಕುತ್ತೇನೆ. ದರಬಾರದಲ್ಲಿ ಕೂಡತಕ್ಕವರು ನೀವು!" ಎಂದು ಮಲಕಾಜಾನೆಯು ಅವನ ಗಡ್ಡವನ್ನು ಹಿಡಿದು ಜಗ್ಗಿದಳು.

"ಹೀಗೆ ನಮ್ಮನ್ನು ಉಬ್ಬಿಸಿ ನೀವೆಲ್ಲರೂ ಹೊತ್ತುಗಳೆಯಬೇಕೆನ್ನುವಿರಿ. ಆಗಲಿ ಇನ್ನಾದರೂ ತ್ವರೆ ಮಾಡಿರಿ!" ಎಂದು ಆ ವಾರಾಂಗನಾ

ಮನೋರಂಜಕನು ಸಂತೋಷದಿಂದ ನಗುತ್ತ ನುಡಿದನು

ದರಬಾರದ ಮುಂದಿರವು ಸಜ್ಜೀಕೃತವಾಯಿತು. ಗಾನಲೋಲು ಪರೂ, ಸುರಾಭಕ್ತರೂ, ವಾರಾಂಗನೆಯರ ಕೃಪಾಕಟಾಕ್ಷಜೀವಿತರೂ, ವಂಚಕರೂ, ದ್ರೋಹಿಗಳೂ, ಆತ್ಮಘಾತಕರೂ ನಡಗರದ ಉಡುಗೆ-ತೊಡಿಗೆ ಗಳನ್ನು ಮಾಡಿಕೊಂಡು ಮೆಲ್ಲಮೆಲ್ಲನೆ ಅಲ್ಲಿಗೆ ಬರುವವರಾದರು. ತನ ಗಾಗಿ ಸಿದ್ಧಪಡಿಸಿಟ್ಟ ಮಹಾಸಿಂಹಾಸನದಲ್ಲಿ ಮುರಾದ ಸುಲ್ತಾನನು ವಿರಾಜಿತನಾದ ಕೂಡಲೆ ನೃತ್ಯಗಾಯನಗಳಿಗೆ ಪ್ರಾರಂಭವಾಯಿತು. ಗಾನವು ಭರಕ್ಕೆ ಬಂದ ಬಂದ ಹಾಗೆ 'ವಹವ್ವಾ! ಕ್ಯಾ ಬಾತ್ ಹೈ!! ಖಾಸೀ !!!' ಎಂಬ ಸಂಭಾವನಾದ್ಯೋತಕವಾದ ಉದ್ಗಾರಗಳು ಅನೇಕ ಮುಖಗಳಿಂದ ಹೊರಡಲಾರಂಭಿಸಿದವು. ಅನುರಾಗಯುತವಾದ ವಿಲಾಸಿಗಳು ತಮ್ಮ ತಮ್ಮ ಪ್ರೀತಿಪಾತ್ರರ ಮೇಲೆ ವಸ್ತ್ರಾಲಂಕಾರಗಳ ಮಳೆಗರೆದರು

ಹೀಗೆ ಆ ಮಹೋತ್ಸವವು ಉದ್ರೇಕದಿಂದ ನಡೆದಿರುವಾಗ, ಮುರಾದಶಹನು ಹಜರತ್ ಸಾಹೇಬನ ಕಡೆಗೆ ಸೂಚಕದೃಷ್ಟಿಯಿಂದ ನೋಡಿದನು. ಸಂಗಡಲೆ ಮದಿರಾರಸದಿಂದ ಪೂರಿತವಾದ ಚೀನೀ ಹೂಜಿ ಗಳು ಸಭಾಮಧ್ಯದಲ್ಲಿ ಬಂದಿಳಿದವು. ಬಂಗಾರದ ಹರಿವಾಣಗಳಲ್ಲಿರಿಸಿದ ರತ್ನಖಚಿತವಾದ ಚಷಕಗಳ (ಕುಡಿಯುವ ಪಾತ್ರೆ) ರಾಶಿಗಳು ಒಟ್ಟಿದವು. ಆಗ ಮುರಾದಬಕ್ಷನು ಸಂತೋಷದಿಂದ ಗವಾಯಿಯನ್ನು ಕುರಿತು, "ಖಾನಸಾಹೇಬ, **ಮಧುವಾ ಭರಲಾದೆ ಮೋರೀರೆ** ಎಂಬ ಚೀಜ ಹೇಳಿರಿ." ಎಂದು ಆಜ್ಞಾಪಿಸಿದನು. ಮದ್ಯಪಾನಮಾಡಿದ ಆ ಗಾಯಕನಿಗೆ ಮಧುರಸ ದಲ್ಲಿಯೂ ಅದರ ಸ್ತುತಿಪರವಾಗಿರುವ ಆ ಚೀಜಿನಲ್ಲಿಯೂ ವಿಶೇಷವಾದ ಪ್ರೇಮವಿರುವದರಿಂದ ಅವನು ಆ ಲಲಿತವಾದ ಪದವನ್ನು ಕಾನಡಾ ರಾಗದಲ್ಲಿ ಬಹು ಇಂಪಾಗಿ ಹಾಡಿದನು. ವಾರನಾರಿಯರೆಲ್ಲರೂ ಮಧು ಭಾಂಡಗಳ ಬಳಿಯಲ್ಲಿ ಬಂದು ಕುಳಿತು ಬಹು ಲೀಲಾವಿಲಾಸಗಳಿಂದ ಚಷಕಗಳಲ್ಲಿ ಆ ಸುಧಾರಸವನ್ನು ತುಂಬಿ ತುಂಬಿ ಇಡಲಾರಂಭಿಸಿದರು. ಗಾಯಕನ ಗಾನಮಾಧುರ್ಯಕ್ಕೆ ಮೆಚ್ಚಿ ಮುರಾದನು 'ಷಾಬ್ಬಾ! ವಾಹವ್ವಾ' ಎಂದು ಕೂಗಿ ಮಲಕಾಜಾನೆಯನ್ನು ಕುರಿತು ರಾಗದಲ್ಲಿಯೇ

**हम् तुम् भर भर पीवे** ಎಂದು ಮಂದಹಾಸದಿಂದ ಚಷಕಗಳ ಕಡೆಗೆ ಕೈಮಾಡಿ ಹಾಡಿದನು. ಮಲಕಾಜಾನೆಯು ಒಂದು ಚಷಕವನ್ನೆತ್ತಿ ಆ ಮೂರು ಮುಕ್ಕಾಲುಗಳಿಗೆಯ ಸಾರ್ವಭೌಮನ ಬಾಯಿಗೆ ಹಿಡಿದಳು. ಅವನು ಅದರಲ್ಲಿಯ ಅರ್ಧ ರಸವನ್ನಾಸ್ವಾದಿಸಿ ಉಳಿದದ್ದನ್ನು ಮಲಕಾಜಾನೆಯ ಮುಖಕ್ಕೆ ಒಳ್ಳೇ ಪ್ರೇಮದಿಂದ ಹಿಡಿದನು. ಹೀಗೆ ನೈವೇದ್ಯ ಸಮರ್ಪಣವಾದ ಕೂಡಲೆ ಉಳಿದ ಸ್ತ್ರೀಪುರುಷರೆಲ್ಲರೂ ಒಳ್ಳೇ ಆಸ್ಥೆಯಿಂದಲೂ ವಿಲಾಸದಿಂದಲೂ ಅನ್ಯೋನ್ಯರಿಗೆ ಮಧುಪಾನ ಮಾಡಿಸಿದರು. ಕೆಲಕೆಲವರು ಮೂರುಮೂರು ನಾಲ್ಕುನಾಲ್ಕು ಎಂಟೆಂಟು ಚಷಕಗಳನ್ನು ತಮ್ಮ ತಮ್ಮ ಹೊಟ್ಟೆಬಾಕತನದ ಪ್ರಮಾಣದ ಮೇರೆಗೆ ಗಂಟಲಿನಲ್ಲಿ ಸುರುವಿಕೊಂಡರು. ಎಲ್ಲರೂ ಮದೋದ್ರಿಕ್ತರಾಗಿ ಕಂಡ ಕಂಡ ಹಾಗೆ ಕೂಗಾಡಲಾರಂಭಿಸಿದರು. ಇವನು ರಾಜಪುತ್ರನು ಇವನು ಪಾಮರನೆಂಬ ತಾರತಮ್ಯವು ಉಳಿಯಲಿಲ್ಲ. ಗಂಡು ಹೆಣ್ಣೆಂಬ ಮರ್ಯಾದೆ ಉಳಿಯಲಿಲ್ಲ. ಕಂಡಕಂಡವರು ಕಂಡಕಂಡವರ ಕೈಹಿಡಿದು ಕುಣಿದರು. ಸ್ಖಲಿತವಿಸ್ಖಲಿತವಾದ ವಾಣಿಯಿಂದ ಸ್ವರಾಪಸ್ವರಗಳ ವಿಚಾರವಿಲ್ಲದೆ ಅವರೆಲ್ಲರು ಹಾಡಿ ಕೇಸರಿಟ್ಟರು.

ಮುರಾದನು ಮಿತಪಾನದವನಾಗದಿದ್ದರೂ ಅಲ್ಪಪಾನದಿಂದಲೇ ಅವನಿಗೆ ಮತಿಭ್ರಮವಾಗುತ್ತಿತ್ತು. ಹಜರತ್ತನು ಮಲಕಾಜಾನೆಗೆ ಕಣ್ಣುಸನ್ನೆ ಮಾಡಿ ಆ ಮುಂದುಗಾರನಾದ ರಾಜಕುಮಾರನಿಗೆ ಮತ್ತಿಷ್ಟು ಮದಿರೆಯನ್ನು ಕುಡಿಸಹೇಳಿದನು. ಆ ಕುಟಿಲೆಯು ಕೊಟ್ಟ ಮೋಹರಸವನ್ನು ಅವನು ಗಟಗಟನೆ ಕುಡಿದೇ ಕುಡಿದನು.

ಈ ಮಧುಪರೆಲ್ಲರು ಹೀಗೆ ಆ ಪಾನೋತ್ಸವದಲ್ಲಿ ನಿಮಗ್ನರಾಗಿರುವಾಗ ಔರಂಗಜೇಬ ಸುಲ್ತಾನನು ಫಕೀರ ವೇಷವನ್ನಾಂತು ಶಸ್ತ್ರಪಾಣಿಯಾಗಿ ರಾತ್ರಿಯ ಗಸ್ತಿಗಾಗಿ ತಾಣ್ಯದಲ್ಲಿ ಸಂಚಾರ ಮಾಡುತ್ತ ಮುರಾದನ ತಂಬುವಿನ ಕಡೆಗೆ ಬಂದನು. ಒಳಗೆಲ್ಲ ಪ್ರಮಾದ ಅತ್ಯಾಚಾರ ಬೀಭತ್ಸ ಕೃತಿಗಳು ನಡೆದಿರಲು ತಂಬುವಿನ ಹೊರಗೆ ಶಾಹಬ್ಬಾಸನೆಂಬ ಮುರಾದನ ಸೇನಾಪತಿಯು ಅಲ್ಲಿ ಸೈನಿಕರ ಭದ್ರವಾದ ಕಾವಲನಿರಿಸಿ ತಾನು ಮೇಲ್ವಿಚಾರಣೆಗಾಗಿ ಅಶ್ವಾರೂಢನಾಗಿ ಕಾದುಕೊಂಡಿದ್ದನು.

ಔರಂಗಜೇಬನು ಶಾಅಬ್ಬಾಸನ ಸ್ವಾಮಿನಿಷ್ಠೆಯನ್ನು ಮನಸಿನಲ್ಲಿಯೇ ಕೊಂಡಾಡಿ ಮೆಲ್ಲನೆ ಅವನ ಸಮೀಪಕ್ಕೆ ಬಂದನು. "ಯಾರಲ್ಲಿ?" ಎಂದು ಉದ್ಗಾರ ತೆಗೆದವನೇ ಶಾಅಬ್ಬಾಸನು ತನ್ನ ಕುದುರೆಯನ್ನು ಟಣ್ಣನೆ ಹಾರಿಸಿ ಔರಂಗಜೇಬನ ಎದುರಿನಲ್ಲಿ ಬಂದು ನಿಂತನು. ಸಮರ ವಿಜಯಿಯಾದ ಆ ಸಾರ್ವಭೌಮ ಪುತ್ರನನ್ನು ಕಂಡು ಶಾಅಬ್ಬಾಸನು ವಿನಯದಿಂದ ಪ್ರಣಾಮ ಮಾಡಿ, ಸುಲ್ತಾನರವರು ಇಂಥ ರಾತ್ರಿಯಲ್ಲಿ ದಯಮಾಡಿಸಿದ ಕಾರಣವೇನೆಂದು ಅರ್ಧ ವಿನಯದಿಂದಲೂ, ಅರ್ಧ ನಿಷೇಧಿಸಿಯೂ ಪ್ರಶ್ನೆಮಾಡಿದನು. ತನ್ನ ಕಾರ್ಯಸಾಧನಕ್ಕೆ ಇದು ತಕ್ಕಸಮಯವಲ್ಲೆಂದು ನೆನಿಸಿ ಆ ಕಪಟಿಯು ಶಾಅಬ್ಬಾಸನ ಪ್ರಣಾಮ ವನ್ನು ಬಹು ಪ್ರಸನ್ನಮುಖನಾಗಿ ಸ್ವೀಕರಿಸಿ, "ನಮ್ಮ ಭಾವೀ ಚಕ್ರವರ್ತಿ ಗಳು ಯಾವ ಕಾರ್ಯಕ್ರಮದಲ್ಲಿ ತಮ್ಮ ದಿವ್ಯಚಿತ್ತವನ್ನಿರಿಸಿರುವರು?" ಎಂದು ಮಂದಹಾಸದಿಂದ ಕೇಳಿದನು.

"ವಿಶ್ರಾಂತಿಗಾಗಿ ಪ್ರಭುಗಳು ಗಾನವಾದನಗಳನ್ನು ನಿಮಿಷ ಮಾತ್ರ ಕೇಳುವ ಕುತೂಹಲದಿಂದ ಸಭಾಮಂದಿರದಲ್ಲಿ ಕುಳಿತಿರುವರು." ಎಂದು ಆ ಸೇನಾಪತಿಯು ಬಹು ವಿನಯದಿಂದ ಜಿಸಗೊಂಡನು.

"ಓ! ಹಾಗಾದರೆ ಸಾಗಲಿ! ರಾಜಕಾರಣಗಳ ವಿಚಾರಕ್ಕೆ ಇದು ಅವಸರವಲ್ಲ. ಈ ಸಮಯದಲ್ಲಿ ನನ್ನ ಪ್ರಿಯಬಂಧುವಿಗೆ ತೊಂದರೆ ಕೊಡುವದು ಸರಿಯಲ್ಲ. ಆದರೆ ಕೆಲವೊಂದು ಲಷ್ಕರೀ ವಿಚಾರವನ್ನು ಕುರಿತು ಈಗಲೇ ಆಲೋಚಿಸಬೇಕಾಗಿತ್ತು. ಆಗಲಿ ನೀವಾದರೂ ಧುರೀಣ ರಾದ ಸೇನಾಪತಿಗಳು; ನಿಮ್ಮೊಡನೆ ಆಲೋಚಿಸಿದರೂ ಅಡ್ಡಿ ಇಲ್ಲ. ದಯಮಾಡಿ ನೀವು ನನ್ನ ತಂಬುವಿನ ವರೆಗೆ ಬಂದರೆ ಒಳಿತಾಗುವದು. ಅಲ್ಲಿ ದಾನಿಶ್‌ಮಂದಖಾನಸಾಹೇಬರೂ, ಕಾಲಿಲುಲ್ಲಾಖಾನ ಬಕ್ಷಿಯ ವರೂ ಕುಳಿತಿದ್ದಾರೆ."

ಶಾಅಬ್ಬಾಸನು ಬಲೆಗೆ ಬಿದ್ದನು. ತನಗಿಂಥ ಗೌರವವು ಪ್ರಾಪ್ತ ವಾಯಿತೆಂದು ತಿಳಿದು ಆ ಸರದಾರನು ಔರಂಗಜೇಬನ ಇಚ್ಛೆಯ ಮೇರೆಗೆ ಅವನ ತಂಬುವಿಗೆ ಬಂದನು. ಅಲ್ಲಿ ನೆರೆದ ಸರದಾರರೆಲ್ಲರೂ ಔರಂಗ ಜೇಬನ ಸನ್ನೆಯ ಮೇರೆಗೆ ಶಾಅಬ್ಬಾಸನನ್ನು ಒಳ್ಳೇ ಆದರದಿಂದ

ಮೇಲಕ್ಕೆ ಕುಳ್ಳಿರಿಸಿಕೊಂಡು, ಸ್ವಾಗತದ ಅತಿರೇಕವನ್ನು ಮಾಡಿದ ಬಳಿಕ ಔರಂಗಜೇಬನು ಆ ಸರಲಸ್ವಭಾವದ ವೀರನನ್ನು ಕೈಹಿಡಿದು ಅಂತ ಗೃ್ಹಕ್ಕೆ ಕರೆದೊಯ್ದನು. ಅಲ್ಲಿ ಹೋದ ಕೂಡಲೆ ಇಬ್ಬರು ಜವಾನರು ಶಾಅಬ್ಬಾಸನ ಬಾಯಿಗೆ ಚಂಡಿಕ್ಕಿ ಅವನನ್ನು ಹಗ್ಗಗಳಿಂದ ಕಟ್ಟಿ ಹಾಕಿದರು.

ಔರಂಗಜೇಬನು ಅಲ್ಲಿಂದೆದ್ದು ಮತ್ತೆ ತ್ವರದಿಂದ ಮುರಾದನ ತಂಬುವಿಗೆ ಬಂದನು. ಶಾಅಬ್ಬಾಸನ ಕೈಕೆಳಗಿನ ಅಧಿಕಾರಿಯು ಔರಂಗಜೇಬನ ಲಂಚದಲ್ಲಿದ್ದವನಾದ್ದರಿಂದ ಅವನ ಮುಖಾಂತರವಾಗಿ ಅಲ್ಲಿದ್ದ ಕಾವಲುಗಾರರಿಗೆಲ್ಲ ತಮ್ಮ ತಮ್ಮ ಸ್ಥಳಕ್ಕೆ ಹೋಗಿ ಮಲಗಿಕೊಳ್ಳಲು ಅಪ್ಪಣೆ ಕೊಡಿಸಿದನು. ಹೀಗೆ ಎಲ್ಲ ವಿಘ್ನಗಳ ನಿವಾರಣವಾದ ಬಳಿಕ ಆ ಫಕೀರ ಶ್ರೇಷ್ಠನು ಹತ್ತೆಂಟು ಜನ ಸೈನಿಕರನ್ನು ಕರಕೊಂಡು, ನೆಟ್ಟಗೆ ಮುರಾದನಿದ್ದಲ್ಲಿಗೆ ಬಂದನು.

ಪಾಪ! ಮುರಾದನು ಮದಿರಾ ಮದಪರವಶನಾಗಿ ತಾನಾರು ತನ್ನ ಅವಸ್ಥೆಯೇನೆಂಬ ಎಚ್ಚರವಿಲ್ಲದೆ ಮಲಕಾಜಾನೆಯೊಡನೆ ಅಸಂಬದ್ಧವಾದ ಪ್ರಲಾಪವನ್ನು ಮಾಡುತ್ತ ಅಸ್ತವ್ಯಸ್ತವಾದ ಸ್ಥಿತಿಯಲ್ಲಿದ್ದನು. ಶಸ್ತ್ರಪಾಣಿಯಾಗಿ ಆ ಸಾಧುವರ್ಯನು ಕ್ರೋಧಾಗ್ನಿಯಿಂದ ಪ್ರದೀಪ್ತವಾಗಿರುವ ನೇತ್ರಗಳಿಂದ ಬಿರಿನೋಟವನ್ನು ನೋಡುತ್ತ ಕಾಳಸರ್ಪನಂತೆ ಮುರಾದನ ಮೈಮೇಲೆ ಸಾಗಿಬಂದನು. ಅವನನ್ನು ಕಂಡು ಮಲಕಾಜಾನೆಯು ಭಯತ್ರಸ್ತಳಾಗಿ ಚೀರಿ, ಮುರಾದನನ್ನು ಎಚ್ಚರಗೊಳಿಸಿದಳು.

ಮುರಾದನು ಮದಿರೆಯ ಗುಂಗಿನಲ್ಲಿಯೇ "ಯಾರು ಬಂದರೆಂದಿ ಪ್ರಿಯೆ? ಔರಂಗಜೇಬ? ಔರಂಗಜೇಬನೆಂದರೆ ಈ ಮುರಾದ ಬಾದಶಹನ ಕೈಕೆಳಗಿನವನಾದ ಒಬ್ಬ ಸುಭೇದಾರನು! ಬಾದಶಹನು ಈ ಸಮಯದಲ್ಲಿ ನಿನ್ನನ್ನು ಕಾಣಲಿಚ್ಛಿಸುವದಿಲ್ಲೆಂದು ಅವನಿಗೆ ತಿಳಿಸು. ಬೇಕಾದರೆ ಅವನೂ ಒಂದು ಹೂಜಿ ಮದಿರೆಯನ್ನು ಕಡಿದು ಹೋಗಲಿ. ತುಂಬ ತುಂಬಿದ ಒಂದು ಹೂಜಿಯೆಂದು ಹೇಳು!! ಇಲ್ಲೇನು ಮುಕ್ತದ್ವಾರವಿದೆ!" ಎಂದು ಬಡಬಡಿಸಿದನು.

ಔರಂಗಜೇಬನು ಸರಿದು ನಿಂತು ಮೊಹ್ಲೆಗಾಲಿನಿಂದ ಆ ಬಾದಶಹನ

ಬೆನ್ನ ಮೇಲೆ ಒಳಿತಾಗಿ ಬಿದ್ದನು. ಬಲಿಷ್ಠನಾದ ಆ ಫಕೀರನ ಬಲವತ್ತರವಾದ ಪಾದಾಘಾತದಿಂದ ಮುರಾದನ ಸರ್ವಾಂಗವೆಲ್ಲ ಜುಂಯೆನೆ ಜುಮ್ಮೆಟ್ಟಿತು. ಮದವೆಲ್ಲ ಇಳಿದುಹೋಗಿ, ಮುರಾದನು ಕಣ್ಣೆತ್ತಿ ನೋಡಲಾಗ ಶಸ್ತ್ರಪಾಣಿಯಾದ ಔರಂಗಜೇಬನನ್ನೇ ಕಂಡನು.

"ಯಾರು? ಅಣ್ಣಾ, ಏನು ಕಾರಣವೀ ಅಸಭ್ಯವಾದ ವರ್ತನಕ್ಕೆ?" ಎಂದು ಅವನು ಭಯವಿನಯ ಕ್ರೋಧಗಳ ಸಮ್ಮಿಶ್ರವಾದ ಭಾವದಿಂದ ಕೇಳಿದನು.

"ದುರಾತ್ಮಾ, ಯಾರಿಗೆ ಅಣ್ಣನೆಂದು ಕರೆಯುವಿ? ಕಾಫರ್, ನೀನು ದಿಲ್ಲಿಯ ಸಿಂಹಾಸನಕ್ಕೆ ಯೋಗ್ಯನೆ! ಯಾರಲ್ಲಿ? ಈ ಸ್ತ್ರೈಣನಾದ ಹೆಂಡಬಾಕನನ್ನು ಈಗಲೆ ಮುಸುಗೆ ಬಿಗಿಯಿರಿ!"

ಮುರಾದನ ಹೊಟ್ಟೆಯಲ್ಲಿ ಭಯಂಕರವಾದ ಕ್ರೋಧಾಗ್ನಿಯು ಪ್ರಜ್ವಲಿತವಾಯಿತು. ಬಲಿಷ್ಠನೂ ಯುದ್ಧಕಲಾನಿಪುಣನೂ ಆಗಿರುವ ಆ ವೀರನು ಹುಲಿಯಂತೆ ಟಣ್ಣನೆ ಹಾರಿ ಎದ್ದು ನಿಂತು, ಹಸ್ತಲಾಘವದಿಂದ ಔರಂಗಜೇಬನ ಕೈಯಲ್ಲಿಯ ಶಸ್ತ್ರವನ್ನು ಸೆಳೆಕೊಂಡನು. ಅದರಿಂದಲೇ ಆ ಘಾತಕನಾದ ಅಣ್ಣನನ್ನು ಹೊಡೆಯಬೇಕೆಂದು ಹವಣಿಸಿದನು. ಆದರೆ ಆ ಬಿಚ್ಚುಗತ್ತಿಯನ್ನು ಸೆಳೆಕೊಳ್ಳುವಾಗ ಮುರಾದನ ಹಸ್ತಕ್ಕೆ ಭಯಂಕರವಾದ ಗಾಯವಾಗಿದ್ದರಿಂದ ಹನಿನಾಳಿಗೆಯಿಂದ ನೀರು ಬೀಳುವಂತೆ ರಕ್ತವು ಪುಟಿಯಲಾರಂಭಿಸಿತು. ಅದೇ ಸಮಯದಲ್ಲಿ ಔರಂಗಜೇಬನ ಆಳುಗಳು ಆ ದುರ್ದಮನಾದ ವೀರನ ಹಿಂದೆ ಬಂದು ಅವನ ಕೈಕಾಲುಗಳನ್ನು ಕಟ್ಟಿದರು. ಮುರಾದನು "ದಗಾ! ದಗಾ!! ಘಾತ! ಘಾತ!!" ಎಂದು ಕೂಗಿಕೊಂಡನು. ಮುರಾದನ ಪಕ್ಷದವರೇ ಅಂದು ಆ ತಾಣ್ಯದಲ್ಲಿ ಇದ್ದಿಲ್ಲ. ಇದ್ದವನೊಬ್ಬ ಶಾಹಬ್ಬಾಸನು! ಅವನ ಕೈಕೆಳಗಿರಿಸಿದ ಸೈನಿಕರಾದರೂ ಔರಂಗಜೇಬನ ತಂತ್ರದವರೇ. "ಶಾಹಬ್ಬಾಸ ಮೇರೆ ದೋಸ್ತ! (ಜೀವದ ಗೆಳೆಯನೇ!)" ಎಂದು ಕೂಗಿ ಕೂಗಿ ಅತ್ತನು. ಪಾಪ! ಶಾಹಬ್ಬಾಸನ ಅವಸ್ಥೆಯು ಇದಕ್ಕೂ ಹೀನವಾಗಿತ್ತು.

"ಶಾಹಬ್ಬಾಸನೆ, ಸ್ವಾಮಿಕಾರ್ಯನಿಷ್ಠನೆ, ಕಪಟಿಯೂ, ಕೃತಘ್ನನೂ

ಭ್ರಾತೃಘಾತಕನೂ ಆದ ಈ ದುರಾತ್ಮನಾದ ಔರಂಗಜೇಬನ ಮೋಸಕ್ಕೆ ಈಡಾಗಬೇಡವೆಂದು ನೀನು ನನ್ನ ಕೈಯಲ್ಲಿ ಕಟ್ಟಿಯನ್ನು ಕೊಟ್ಟು, ಹೇಳಿದರೂ ಮೂರ್ಖನಾದ ನಾನು ನಿನ್ನ ಮಾತು ಕೇಳದೆ ಈ ದುರವಸ್ಥೆಯನ್ನು ಹೊಂದಿದೆನು. ಔರಂಗಜೇಬ, ನನ್ನನ್ನು ಕೊಲ್ಲುವದೇ ನಿನ್ನ ಹೈವಾನೀ ( ರಾಕ್ಷಸೀ ) ಇಚ್ಛೆಯಾಗಿದ್ದರೆ ಈ ಬಂಧಗಳನ್ನು ಬಿಚ್ಚಿಸಿ ನನ್ನೊಡನೆ ಖಡ್ಗಯುದ್ಧಕ್ಕೆ ನೀನು ನಿಲ್ಲು. ನಾನು ಎಡಗೈಲೆ ಯುದ್ಧ ಮಾಡುವೆನು ನೀನು ಬಲಗೈಯಿಂದ ಮಾಡು.''

ಔರಂಗಜೇಬನು ತಿರಸ್ಕಾರದಿಂದ ನಕ್ಕು, '' ಮುರಾದ, ನಾನಾದರೂ ಯುದ್ಧಕಲಾಕುಶಲನೆಂಬದನ್ನು ನೀನು ಚನ್ನಾಗಿ ಬಲ್ಲಿ! ನಾನು ಹೇಡಿತನಕ್ಕಾಗಿ ನಿನ್ನೊಡನೆ ದ್ವಂದ್ವಯುದ್ಧಕ್ಕೆ ಒಲ್ಲೆನೆನ್ನುವದಿಲ್ಲ. ಆದರೆ ನಿಷ್ಕಾರಣವಾಗಿ ಅಮೌಲ್ಯವಾದ ನಿನ್ನ ಜೀವವನ್ನು ಸಂಕಟದಲ್ಲಿ ನೂಕಿದರೆ ಏನು ಸಾರ್ಥಕವಾಯಿತು ?'' ಎಂದು ನುಡಿದು ಮುರಾದನನ್ನು ಬಂದಿವಾಸಕ್ಕೆ ತೆಗೆದುಕೊಂಡು ಹೋಗಿರೆಂದು ಸೈನಿಕರಿಗೆ ಆಜ್ಞಾಪಿಸಿದನು

" ಔರಂಗ! ಔರಂಗ! ಫಕೀರನಂತೆ ನೀನು ಸಾಧುವೃತ್ತಿಯನ್ನು ನಟಿಸುತ್ತಿರುವಿಯಲ್ಲವೆ? ನಾನೇನು ತಪ್ಪುಮಾಡಿರುವೆನೆಂದು ನೀನು ಹೀಗೆ ವಿಶ್ವಾಸಘಾತವನ್ನು ಮಾಡಿದಿ ಹೇಳಬಾರದೆ? "

'' ಸುಮ್ಮನಿರುವಿ ನೀನು ಮುರಾದ! ರಾಜಕಾರಣವು ತಪ್ಪುತಡೆಗಳನ್ನು ಹುಡುಕುವ ಗೋಜಿಗೆ ಹೋಗುವದಿಲ್ಲ.''

"ಔರಂಗಜೇಬ, ನಿನ್ನ ಉದ್ದೇಶವಾದರೂ...." ಎಂದು ಮುರಾದನು ಮಾತುಮಾತಾಡುವಷ್ಟರಲ್ಲಿ ಯೇ ಜವಾನರು ಅವನನ್ನು ಎಳಕೊಂಡು ಹೋದರು.

೩೩

ಶ್ಯಾಮನಗರದ ಯುದ್ಧದಲ್ಲಿ ನಿಶ್ಚಯವಾಗಿ ವಿಜಯಿಯಾಗಿದ್ದ ದಾರಾಶಹನು ದೈವಗತಿಯ ದುರ್ವಿಪಾಕದಿಂದ ಪರಾಜಿತನ ದುರವಸ್ಥೆಯನ್ನು

ಹೊಂದಿ ಕಾಲೂರಿ ನಿಂದಿರಲು ಸ್ಥಳ ಕಾಣದೆ "ಯಃಪಲಾಯತಿ ಸಜೀವತಿ" ಎಂಬಂತೆ ಹಾದಿ ಹುಟ್ಟಿದೆಡೆಗೆ ಓಡಿಹೋದನು. ಸೋತವನಾದ ಔರಂಗಜೇಬನು ವಿಜಯಲಕ್ಷ್ಮಿಯನ್ನು ಮೋಸಗೊಳಿಸಿ ಅವಳ ಕೈಯಲ್ಲಿರುವ ಮಾಲೆಯನ್ನು ಸೆಳಕೊಂಡು ತನ್ನ ಕೊರಳಿಗೆ ಹಾಕಿಕೊಂಡು, ಉದ್ರೇಕದಿಂದ ಕುಣಿದಾಡಿದನು. ಚಮತ್ಕಾರವಾಗಿರುವ ಆ ಯುದ್ಧದ ಪರಿಣಾಮದ ವಾರ್ತೆಯನ್ನು ಕೇಳಿ ಮಹಾನ್ ಮಹಾನ್ ಪ್ರಭೃತಿಗಳ ವೃತ್ತಿಯಲ್ಲಿ ವಿಲಕ್ಷಣವಾದ ಹೆಚ್ಚು ಕಡಿಮೆಯಾಯಿತು. ಗೆದ್ದ ಎತ್ತಿನ ಬಾಲವನ್ನು ಹಿಡಿಯತಕ್ಕದ್ದೆಂದು ಮಧ್ಯಸ್ಥವೃತ್ತಿಯನ್ನು ತಳೆದವರ ಮನಃಪ್ರವೃತ್ತಿಗಳು ಔರಂಗಜೇಬನ ಕಡೆಗೆ ಒಲೆದವು. ದಾರಾಶಹನಲ್ಲಿ ಪಕ್ಷಪಾತವನ್ನು ತಳೆದವರು ಇನ್ನೇತರ ಆಶೆಯೆಂದು ನಡುನೀರಿನಲ್ಲಿ ಅವನ ಕೈಬಿಟ್ಟುಬಿಟ್ಟರು.

ಆಗಿನ ಕಾಲದ ರಾಜ್ಯಾವಸ್ಥೆ, ಆ ಕಾಲದ ರಾಜನೀತಿ, ಆ ಕಾಲದ ಪ್ರಜಾಜನರ ಕರ್ತವ್ಯತೆಗಳನ್ನು ನಿರೀಕ್ಷಿಸಲಾಗಿ ಇಡೀ ಸಾಮ್ರಾಜ್ಯದಲ್ಲೆಲ್ಲ ಬಾದಶಹನೊಬ್ಬನೇ ಒಬ್ಬನು. ಉಳಿದವರೆಲ್ಲ ಕೇವಲವಾಗಿ ಅವನ ಇಚ್ಛಾನುವರ್ತಿಗಳಾದ ದಾಸರೇ ಹೊರತಾಗಿ ಅವರಿಗೆ ಸ್ವತಂತ್ರವಾದ ಅಸ್ತಿತ್ವವಿರಲೇ ಇಲ್ಲ. ಪ್ರಜಾಜನರಿಗೆ ಹೇಳಿಕೊಳ್ಳುವಂಥ ಸ್ವತ್ವ ಅಧಿಕಾರಾದಿಗಳೇನೂ ಇದ್ದಿಲ್ಲ. ಬಾದಶಹನ ಕೃಪಾಪಾತ್ರನಾದವನೇ ಇಂದ್ರಚಂದ್ರನು. ಅಂಥ ಕೃಪೆಯಿಲ್ಲದವನು ತೃಣಕ್ಕೂ ಕಡಿಮೆಯಾಗುವನು. ವತನವೃತ್ತಿ ಜಮೀನದಾರಿ ಜಾಗೀರುಗಳು ಕ್ಷಣಕ್ಷಣಕ್ಕೆ ಭಿನ್ನಭಿನ್ನರಾದ ಪುರುಷರ ಕೈಸೇರುತ್ತಿದ್ದವು. ಆಗಿನ ಸಾಮ್ರಾಜ್ಯದಲ್ಲಿ ಯಾವನಿಗಾದರೂ ಯಾವದರಲ್ಲಿಯೂ ಅಭಿಮಾನ ಆಸ್ಥೆಗಳಿದ್ದಿಲ್ಲ. ರಾಜನು ಸ್ವಾರ್ಥಪರಾಯಣನಾಗಿರುವಂತೆಯೇ ಪ್ರಜರಾದರೂ ಸ್ವಾರ್ಥಪರಾಯಣರೇ. "ಇಂತಿಂಥ ಆಸ್ತಿಗಳು ನಮ್ಮವು. ಈ ಆಸ್ತಿ ಸಮುಚ್ಚಯವೇ ಒಂದು ಸಾಮ್ರಾಜ್ಯವು." ಎಂಬ ವಿಚಾರವೇ ಆಗಿನ ಜನರಲ್ಲಿ ಇದ್ದಿಲ್ಲವಾದ್ದರಿಂದ ಸ್ವಾಭಿಮಾನಕ್ಕಾಗಿ ಸಾಮ್ರಾಜ್ಯವನ್ನು ಕಾಯತಕ್ಕದ್ದೆಂಬ ಉದಾತ್ತವಾದ ಕಲ್ಪನೆಯು ಆ ಕಾಲದ ಜನರ ಮನಸ್ಸಿನಲ್ಲಿ ಉದ್ಭವಿಸುವ ಸಂಭವವೆಲ್ಲಿ ? ಎಲ್ಲರೂ ಕ್ಷಣಿಕವಾದ ಸ್ವಾರ್ಥವನ್ನೇ ಅನುಲಕ್ಷಿಸಿ

ಕೆಲಸ ಮಾಡುತ್ತಿದ್ದರು. ಗುಣಗೇಡಿಗಳು ವಂಚನೆ ಚಾಡಿಗಳ ಬಲದಿಂದ ಟಣಟಣನೆ ಗುಣಿಗಳ ತಲೆಮೆಟ್ಟಿ ಹಾರಿ ಬಾದಶಹರ ಸಿಂಹಾಸನದ ಬಳಿಗೆ ಹೋಗಿ ನಿಲ್ಲುತ್ತಿರಲು ಗುಣಿಗಳಾದರೂ ಅನಿವಾರ್ಯಕ್ಕಾಗಿ ಅದೇ ಮಾರ್ಗವನ್ನವಲಂಬಿಸದೆ ಮತ್ತಿನ್ನೇನು ಮಾಡತಕ್ಕದ್ದು! ಅಕಬರನು ಗುಣಪಕ್ಷಪಾತಿಯೂ ಸಾರಾಸಾರ ವಿಚಾರವಂತನೂ ಆಗಿದ್ದರೆ ಆ ಗುಣ ಗಳು ಕೆಲವಂಶಗಳಲ್ಲಿ ಪ್ರಜರಲ್ಲಿ ಕೂಡಾ ಕಂಡುಬಂದವು. ಜಹಾಂಗೀರ ಶಹಾಜಾನರು ದುಂದುಗಾರರಾದರೆ ಪ್ರಜರಲ್ಲಿಯೂ ಅವೇ ಗುಣಗಳು. ಔರಂಗಜೇಬನು ಕಪಟಿಯೂ ಸ್ವಾರ್ಥಪರಾಯಣನೂ ಆಗಿರಲು, ಪ್ರಜ ಗಳಲ್ಲಿಯಾದರೂ ಅವೇ ಗುಣಗಳಿಗೆ ಕೊರತೆಯಿರಲಿಲ್ಲ. ಸಾರಾಂಶ, ಹಿಂದುಸ್ಥಾನದಲ್ಲಿ ರಾಷ್ಟ್ರೀಯ ಗುಣವಿಶೇಷವೆಂಬುದು ಅಶ್ರುತವಾದ ಮಾತಾಗಿತ್ತು. ಸಾಮ್ರಾಜ್ಯದ ಉತ್ಕರ್ಷ ಸುಸ್ಥಿತಿಗಳಿಗಿಂತಲೂ ಅನೇಕರಿಗೆ ಅಂತಃಕಲಹ ಅರಾಜಕತೆಗಳೇ ಇಷ್ಟವಾಗಿದ್ದವೆಂದು ಹೇಳಿ ದರೆ ವಿಶೇಷವಾದ ತಪ್ಪಾಗಲಿಕ್ಕಿಲ್ಲ. ಏಕನಿಷ್ಠೆಯಿಂದ ಒಂದು ಪಕ್ಷಕ್ಕೆ ಅಂಟಿಕೊಂಡಿರುವವನು ಮೂರ್ಖನೂ ಆತ್ಮಘಾತಕನೂ ಎಂದೆನ್ನಿಸಿ ಕೊಳ್ಳುತ್ತಿದ್ದನು. ಹೀಗೆ ಕಾರ್ಯಸಾಧುಗಳಾದ ಜನರಿಗೆ ದಾರಾಶಹ ನಿಂದೇನು; ಮತ್ತೊಬ್ಬನಿಂದೇನು? ತಮ್ಮ ಬೇಳೆಯೊಂದು ಬೆಂದರಾಯಿತು.

ರಾಜನಿಷ್ಠೆಯಿದ್ದರೆ ರಾಜಧಾನಿಯಲ್ಲಿಯೇ ಎಂದು ನಂಬಿ ಆ ಹತ ಭಾಗ್ಯನಾದ ಯುವರಾಜನು ಇಂದ್ರಜಾಲದಂಥ ಮೋಸದಿಂದ ತನ ಗುಂಟಾದ ಅಪಜಯದ ನಂತರ ಆಗ್ರಾಪಟ್ಟಣಕ್ಕೆ ಧಾವಿಸಿ ಬಂದನು. ಆದರೆ ಅವನು ಅಲ್ಲಿಗೆ ಬರುವದಕ್ಕೆ ಮುಂಚಿತವಾಗಿಯೇ ಅವನ ದುರ್ದೈ ವವು ಅಲ್ಲಿ ಒಂದು ಸಿಂತೆಯೇ ಇದ್ದಿತು. ದಾರಾನ ಪಕ್ಷದವರಲ್ಲಿ ಪ್ರಮುಖರೆಂಬವರು ಅನಾವಸ್ಥೆಯನ್ನು ತಳೆದು ಬಾಯಿಯಲ್ಲಿ ಅಕ್ಕಿಯ ಕಾಳುಗಳನ್ನಿಟ್ಟುಕೊಂಡು ಕುಳಿತಿದ್ದರು. ಔರಂಗಜೇಬನ ಪಕ್ಷದವರಿಗೆ ಮಾತ್ರ ಘನವಾದ ಉತ್ತೇಜನವುಂಟಾಗಿದ್ದರಿಂದ ಅವರು ತಮ್ಮ ಠಾಣ ಸ್ಥಾನಗಳನ್ನು ಒಳ್ಳೇ ಜಾಗ್ರತೆಯಿಂದಲೂ ಯಶಸ್ಸಿನಿಂದಲೂ ನಡೆಸಿ ದ್ದರು. ಬಾದಶಹನ ಪ್ರೇಮವು ದಾರಾ ಸುಲ್ತಾನನಲ್ಲಿ ಅಧಿಕವಾಗಿರುವ ದರಿಂದ ಅವನಿಂದ ಆ ಸುಲ್ತಾನನಿಗೆ ಮತ್ತೆ ಸಹಾಯ ದೊರಕಿಗಿರಕೀ

ತೆಂಬ ಶಂಕೆಯಿಂದ ದಾರಾನ ವೈರಿಗಳಾದ ಶಾಇಸ್ತೇಖಾನ ಹಾಗು ಖಾಲಿಲುಲ್ಲಾಖಾನರು ಬಾದಶಹನಿಗೆ ಇಲ್ಲದ ದುರ್ಬೋಧನೆಗಳನ್ನು ಮಾಡಲಾರಂಭಿಸಿದರು.

“ದಾರಾಸುಲ್ತಾನರನ್ನು ಆಗ್ರಾಪಟ್ಟಣದಲ್ಲಿ ಹಿಡಿಸಿಕೊಂಡರೆ ಜಯೋದ್ರಿಕ್ತರಾದ ಔರಂಗಜೇಬ ಮುರಾದಬಕ್ಷರು (ಪಾಪ! ಮುರಾದನ ದುರವಸ್ಥೆಯ ವಾರ್ತೆಯು ಇನ್ನೂ ರಾಜಧಾನಿಯುಲ್ಲಿರಲಿಲ್ಲ) ರಾಜಧಾನಿಯಲ್ಲಿ ಹೊಕ್ಕು ಅಸಹ್ಯವಾದ ಅನರ್ಥಗಳನ್ನುಂಟುಮಾಡುವರು. ಅದರಿಂದ ಬಾದಶಹನಿಗೂ, ರಾಣೀವಾಸಕ್ಕೂ, ನಾಗರಿಕರಾದ ಮಹಾಜನಕ್ಕೂ ಸ್ಥಾವರ ಜಂಗಮವಾದ ಸಮಸ್ತ ಆಸ್ತಿಗಳಿಗೂ ವಿಲಕ್ಷಣವಾದ ಹಾನಿಯುಂಟಾಗದೆ ಇರದು. ಈಗಾದ ಅನರ್ಥಗಳೇ ಸಾಕು. ಇನ್ನು ಮುಂದೆ ಈ ಅಂತಃಕಲಹದ ಸಮಯದಲ್ಲಿ ನಾವು ಜಾಣರಂತೆ ವರ್ತಿಸದಿದ್ದರೆ ನಮ್ಮ ಸಾಮ್ರಾಜ್ಯವು ಮುಳುಗಿ ಹೋಯಿತೆಂದೇ ತಿಳಿಯತಕ್ಕದ್ದಾಗಿದೆ. ಧರ್ಮಪರಾಯಣರಾದ ನಮ್ಮ ಔರಂಗಜೇಬ ಸುಲ್ತಾನರವರು ಸಹಸಾ ಪಿತೃಭಕ್ತಿಯನ್ನು ಉಲ್ಲಂಘಿಸಲಾರರು. ಇಲ್ಲಿ ಬಂದ ಬಳಿಕ ಅವರನ್ನು ಹೇಗಾದರೂ ಒಡಂಬಡಿಸಿ ಮತ್ತೆ ದಕ್ಷಿಣದ ಸುಭೇದಾರಿಗೆ ಅಟ್ಟಬಹುದು. ಮುಂದೆ ಸಮಾಧಾನ ಸುವ್ಯವಸ್ಥೆಗಳಾದ ಬಳಿಕ ದಾರಾ ಸುಲ್ತಾನರನು ಕರೆಸಿಕೊಳ್ಳುವಿರಂತೆ! ಸದ್ಯಕ್ಕೆ ಅವರ ಕೈಯಲ್ಲಿ ಸೇನೆಯನ್ನು ಕೊಡುವದೆಂದರೆ ಕುತ್ತಿಗೆ ಕೊಯ್ದುಕೊಳ್ಳುವದಕ್ಕಾಗಿ ಶಸ್ತ್ರವನ್ನು ಕೊಟ್ಟಂತಾಗುವದು. ಬಾದಶಹರು ದಾರಾಸುಲ್ತಾನರಿಗೆ ಅನುಕೂಲರಿರುವರೆಂದು ಔರಂಗಜೇಬನಿಗೆ ತಿಳಿದಿದ್ದಾದರೆ ಅವರು ಆಗ್ರಹಕ್ಕೀಡಾಗಿ ಏನು ಮಾಡುವರೆಂಬುದನ್ನು ಯಾರು ಹೇಳಬಲ್ಲರು?”

ಈ ಬಣ್ಣದ ಮಾತಿಗೆ ಮರುಳಾಗಿ ಶಹಾಜಹಾನನು ದಾರಾನಿಗೆ ಸಹಾಯಮಾಡುವ ವಿಚಾರವನ್ನು ಸಡಿಲಿಸಿದನು. ಆವನ ವಿಚಾರವನ್ನರಿತು ಹಾಗೆ ಮಾಡಕೂಡದೆಂದು ಬೇಗಮ್ ಸಾಹೇಬಳು ಎಷ್ಟು ಸರಿಯಾಗಿ ಹೇಳಿಕೊಂಡರೂ ಆ ಮುದುಕನಿಗೆ ತಿಳಿಯಲೊಲ್ಲದಾಯಿತು.

“ತಾತನೆ, ಈ ಸಂಕಟಸಮಯದಲ್ಲಿ ನೀವು ನನ್ನ ಪ್ರಿಯಬಂಧುವಿಗೆ ಅನುಕೂಲರಾಗದಿದ್ದರೆ ಆವನ ಕುಟುಂಬದ ವಧವನ್ನೇ ನೀವು ಕುಳಿತು

ಮಾಡಿಸಿದಂತಾಗುವದು. ಈಗ ದಾರಾಶಕುರಿಗುಂಟಾದ ಆಪತ್ತಿಗೆಲ್ಲ ನೀನೇ ಕಾರಣರಾಗಿರುವಿರಿ. ಮಿತಿಮೀರಿದ ತೃಷ್ಣೆಯುಳ್ಳವನಾದ ಔರಂಗ ಜೇಬನೆಂಬ ಗೋಮುಖ ವ್ಯಾಘ್ರನು ನಿಮ್ಮ ಮಕ್ಕಳ ಮೊಮ್ಮಕ್ಕಳ ಗಂಟ ಲಿಗೆ ಹಾರಿ ರಕ್ತವನ್ನು ಹೀರಿಕೊಳ್ಳದೆ ಬಿಡನು."

"ಬೇಗಮ್, ನಾನು ಸತ್ತಬಳಿಕ ಏನಾಗುವದೋ ಹೇಳಲಾರೆನು. ಆದರೆ ಈ ಶಹಾಜಹಾನನು ಜೀವಂತವಿರುವಾಗಲೇ ನನ್ನ ಪ್ರೀತಿಯ ಮಗನ ಉಂಗುಷ್ಟಕ್ಕಾದರೂ ಅಪಾಯಮಾಡಿದವರನ್ನು ಪಾತಾಳಕ್ಕೆ ಮೆಟ್ಟಿಹಾಕುವೆನು. ನಾನಿನ್ನೂ ದಿಲ್ಲಿಯ ಚಕ್ರವರ್ತಿಯು. ನಾನೊಂದು ಇಚ್ಛೆಯನ್ನು ತಳೆದನೆಂದರೆ ಸತ್ತವರು ಕೂಡಾ ಎದ್ದು ಬಂದು ಆ ಕಾರ್ಯ ವನ್ನು ನಿರ್ವಾಹಿಸಿಕೊಟ್ಟು ಹೋಗುವರು. ಔರಂಗಜೇಬನೆಷ್ಟಾದರೂ ನನ್ನ ಮಗನು. ಹೀಗೆ ಮಾಡೆಂದು ನಾನು ಆಜ್ಞಾಪಿಸಿದರೆ ಆಜ್ಞೆಯನ್ನು ಉಲ್ಲಂಘಿಸಲು ಅವನಿಂದ ಸಹಸಾ ಆಗದು. ಹೋಗು, ದಾರಾಶಹರ ಜೀವಕ್ಕೆ ಏನಾದರೂ ಆದರೆ ನಾನಿದ್ದೇನೆ!" ಎಂದು ಶಹಾಜಹಾನನು ತನ್ನ ಇತಿಶ್ರೀಯಾಗಿರುವದೆಂಬದನ್ನು ಅರಿಯದೆ ಮಾತಾಡಿದನು.

ಬೇಗಮ್ ಸಾಹೇಬಳು ದುಃಖಾತಿರೇಕದಿಂದ ಕಣ್ಣೀರ ಧಾರೆ ಯನ್ನು ಸುರಿಸುತ್ತ ಉಪಾಯವನ್ನರಿಯದೆ ತಂದೆಯ ಮಂದಿರವನು ಬಿಟ್ಟು ಎದ್ದು ನಡೆದಳು.

ನೀನು ಅಪಜಯವನ್ನು ಹೊಂದಿ ಬಂದರೆ ನಾನು ನಿನ್ನ ಮುಖಾ ವಲೋಕನವನ್ನು ಮಾಡಲಿಕ್ಕಿಲ್ಲವೆಂದು ಶಹಾಜಹಾನನು ದಾರಾಯನ ನಿಗೆ ಆಣೆತೋರಿಸಿದ್ದನು. ತಾನೀಗ ಯುದ್ಧದಲ್ಲಿ ಸೋತು ಬಂದು ತಂದೆಯ ದರ್ಶನಕ್ಕೆ ಹೋಗಬಹುದೋ ಇಲ್ಲವೋ ಎಂಬ ವಿಚಾರದಲ್ಲಿ ಆ ಹತಾಶ ನಾದ ರಾಜಪುತ್ರನಿದ್ದನು. ಆ ಸಮಯದಲ್ಲಿ ತಂದೆ ಮಕ್ಕಳ ಸಂದರ್ಶನ ವಾದರೆ ತಮ್ಮ ಕಾರಸ್ಥಾನಗಳನ್ನೆಲ್ಲ ಮೂಲೆಗೊತ್ತಿ ಬಾದಶಹನು ದಾರಾ ನಿಗೆ ಸಹಾಯಮಾಡದೆ ಇರನೆಂಬದನ್ನು ಔರಂಗಜೇಬನ ಪಕ್ಷದವರು ತರ್ಕಿಸಿಯೇ ಇದ್ದರು ಅದಕ್ಕಾಗಿ ಆ ಪಿತಾಪುತ್ರರ ಸಂದರ್ಶನವಾಗ ಗೊಡಬಾರದೆಂದು ಅವರು ತಮ್ಮ ಕೈಯಿಂದಾದಷ್ಟು ಸಾಹಸವನ್ನು ಮಾಡಿದರು. ಹಿತಶತ್ರುವಾದವನೊಬ್ಬ ನೀಚನನ್ನು ಕರಿಸಿ ತೆಗೆದು ಅವರು

ಅವನನ್ನು ದಾರಾ ಸುಲ್ತಾನನ ಕಡೆಗೆ ಕಳಿಸಿದರು. ಅವನು ಆ ಯುವ ರಾಜನ ಬಳಿಗೆ ಬಂದು ಖಿನ್ನವದನನಾಗಿ—

"ಹುಜೂರ್, ಏನು ಹೇಳಲಿ! ದೇವರೇ ನಿಮ್ಮ ಮೇಲೆ ಮುನಿ ದಂತಾಗಿದೆ. ಸಮರವ್ಯಾಘ್ರರಾದ ನಿಮ್ಮ ಪಾಲಿಗೆ ಅಪಜಯವೆಂತು ಬಂದಿತೋ ಬಂದಿತು. ಬಾದಶಹರ ಸೇನೆಯನ್ನು ನೀವೇ ಅಚಾತುರ್ಯ ದಿಂದ ಕೊಳೆಗೀಡು ಮಾಡಿದಿರೆಂದು ನಂಬಿ ಪ್ರಭುಗಳು ನಿಮ್ಮ ಮೇಲೆ ಅತ್ಯಂತವಾಗಿ ಮುನಿದಿದ್ದಾರೆ. ಮೊದಲಿನ ಪ್ರತಿಜ್ಞೆಗನುಸರಿಸಿ, ಅವರು ನಿಮ್ಮ ಮುಖಾವಲೋಕನವನ್ನು ಕೂಡಾ ಮಾಡುವದಿಲ್ಲವೆಂದು ಸಭೆ ಯಲ್ಲಿ ಆಡಿತೋರಿಸಿರುವರು. ನಿಮಗಾದ ಪ್ರಾಯಶ್ಚಿತ್ತವು ಯಥಾ ಯೋಗ್ಯವಾಯಿತೆಂದೂ ಔರಂಗಜೇಬರೇ ತಮಗಿನ್ನು ವೃದ್ಧಾಪ್ಯದಲ್ಲಿ ಆಧಾರರೆಂದೂ ಬಾದಶಹರು ನಿರ್ಣಯಿಸಿರುವರು. ಆದಕ್ಕಾಗಿ ನೀವಿನ್ನು ರಾಜಧಾನಿಯನ್ನು ಬಿಟ್ಟುಕೊಟ್ಟು ಹೊರಗಿನ ಸಹಾಯವನ್ನು ಪಡೆದು ಮತ್ತೆ ದೈವಪರೀಕ್ಷೆಯನ್ನು ಮಾಡುವದೇ ವಿಹಿತವಾಗಿ ತೋರುತ್ತದೆ." ಎಂದು ಆಪ್ತನಾದ ಸ್ನೇಹಿತನಂತೆ ಆಲೋಚನೆಯನ್ನು ಹೇಳಿದನು.

ಬೇಗಮ್‌ಸಾಹೇಬಳು ಹೇಳಿದ ಸಂಗತಿಯನ್ನೂ ಈ ನೀಚನು ತಂದಿರುವ ವರ್ತಮಾನವನ್ನೂ ಕಲಿಸಿ ನೋಡಿದರೆ ತನಗಿನ್ನು ಆಗ್ರಾ ಪಟ್ಟಣದಲ್ಲಿ ಆಧಾರ ದೊರಕುವ ಆಶೆ ಸರ್ವಥಾ ಬಯಲಾಯಿತೆಂದು ನೆನೆದು ದಾರಾಶಹನು ಪರಮದುಃಖಿತನಾದನು. ಇನ್ನು ಆ ಪಟ್ಟಣದಲ್ಲಿ ನಿಂದಿರುವದು ತನಗೂ ತನ್ನ ಪರಿವಾರದವರಿಗೂ ಸರ್ವಥಾ ಕ್ಷೇಮವಲ್ಲೆಂದು ನೆನೆದು ಆ ರಾಜಪುತ್ರನು ತನ್ನ ಹೆಂಡರು ಮಕ್ಕಳನ್ನು ಕರಕೊಂಡು ಎದ್ದು ಹೋಗಬೇಕೆಂದು ನಿಶ್ಚಯಿಸಿದನು. ಬಳಿಯಲ್ಲಿ ಹಣವಿಲ್ಲ; ಜನರ ಅನುಕೂಲವಿಲ್ಲ; ಎಲ್ಲಿಗೆ ಹೋಗತಕ್ಕದ್ದೆಂಬ ನಿರ್ಧಾರವಿಲ್ಲ. ದಿಲ್ಲಿಯ ಸಿಂಹಾಸನವು ಪಿತ್ರಾರ್ಜಿತವಾಗಿ ತನ್ನದೇ ಎಂದು ತಿಳಿದು ಆ ಮಹಾ ಸಾಮ್ರಾಜ್ಯವನ್ನು ಆಳುವೆನೆಂಬ ನ್ಯಾಯವಾದ ಅಭಿಲಾಷೆಯನ್ನು ತಳೆದು ಆ ಉದಾರನಾದ ವೀರನು ಮೊನ್ನೆಯೇ ಒಳ್ಳೇ ಉಬ್ಬಿನಿಂದ ಯುದ್ಧಕ್ಕೆ ಸನ್ನದ್ಧನಾಗಿ ನಿಂತಿದ್ದನಷ್ಟೆ? ಇಂದಿನ ದಿವಸ ಅವನಿಗುಂಟಾದ ದುರ ವಸ್ಥೆಯನ್ನು ನೋಡಿರಿ! ಪ್ರತ್ಯಕ್ಷ ತನ್ನ ಹೆಂಡರು ಮಕ್ಕಳನ್ನು ಕಾಪಾಡು

ವದು ಕೂಡ ಅವನಿಗೆ ಭಾರವಾಗಿ ಹೋಯಿತು.

**यदि नाम न तस्य ( भगवतः ) वशे सकलं ॥**
**कथमेव तु नित्यसुखं न भवेत् ॥**

ತಾನು ಬಾದಶಹನ ಪ್ರತಿನಿಧಿಯಾಗಿ ವೈಭವದಿಂದ ಆಳುತ್ತಿರುವ ರಾಜಧಾನಿಯನ್ನು ದಾರಾ ಪ್ರತಾಪನಿಧಿಯು ರಾತ್ರಿಯಲ್ಲಿ ಕಳ್ಳನಂತೆ ಅಲ್ಲಿಂದ ಹೊರಟೆದ್ದು ಹೋದನು. ಸಂಗಡ ಕಾಕಾಳಿಗಳಾದ ನಾನೂರು ಐನೂರು ಬುನುಗು ಜನರು ಮಾತ್ರ ಇದ್ದರು. ಮಾರ್ಗದಲ್ಲಿ ನಿಂತು ನೀರು ಕುಡಿಯುವೆನೆಂದರೆ ಹಿಂದೆ ಯಾರು ಬೆನ್ನಟ್ಟಿ ಬರುವರೋ ಎಂಬ ಬಲವತ್ತರವಾದ ಭೀತಿ! ತನ್ನ ಅನುಯಾಯಿವರ್ಗದಲ್ಲಿಯೇ ಸೇರಿ ಕೊಂಡಿರುವ ದ್ರೋಹಿಗಳು ತನ್ನನ್ನು ಯಾವಾಗ ಹಿಡಿದು ಔರಂಗಜೇಬನ ಸ್ವಾಧೀನ ಮಾಡುವರೋ ಎಂಬ ಕಟುತರವಾದ ಚಿಂತೆಯಿಂದ ಅವನು ಕಣ್ಣಿಗೆ ಕಣ್ಣು ಹಚ್ಚಲಿಲ್ಲ. ಕುದುರೆಯ ಮೇಲಿನ ಜೀನು ತೆಗೆಸಲಿಲ್ಲ. ವೈಭವೋಚಿತರಾದ ಅವನ ಸುಕುಮಾರ ಸತಿಯರು ಹಸಿವೆಗಾಗಿ ಕಣ್ಣೀರಿನಿಂದ ತೋಯ್ದ ಒಣರೊಟ್ಟಿಯನ್ನು ಕಡಿದರು; ಸಂಪತ್ತಿನ ಸೌಕರ್ಯ ವಂತೂ ಇಲ್ಲವೆ ಇಲ್ಲ; ಬಳಿಯಲ್ಲಿದ್ದ ಜನರಿಂದ ಯೋಗ್ಯವಾದ ಆದರ ಸನ್ಮಾನಗಳು ಕೂಡ ಅವನಿಗೆ ಸಲ್ಲದಾದವು. ವೈಭವವೆಂಬ ವೇತಾಳವು ನಮ್ಮ ವಶದಲ್ಲಿರುವ ವರೆಗೆ ಎಲ್ಲವೂ ಚಂದ! ಅದು ತಿರುಗಿ ನಿಂತರೆ ನಮ್ಮನ್ನು ಮುರಿದು ನುಂಗಲಿಕ್ಕೆ ಅದಕ್ಕೆ ಅವಕಾಶ ಬೇಕೆ?

## ೩೪

ದಾರಾ ಸುಲ್ತಾನನು ರಣಾಂಗಣದಿಂದ ಓಡಿ ಹೋಗಿ ಆಗ್ರಾ ಪಟ್ಟಣದಲ್ಲಿ ಸೇರಿಕೊಂಡನೆಂಬ ಸಮಾಚಾರವನ್ನರಿತು ಇದು ಒಳಿತಾಗ ಲಿಲ್ಲೆಂದೆಣಿಸಿ ಔರಂಗಜೇಬನು ಒಳ್ಳೇ ತ್ವರಮಾಡಿ ತನ್ನ ಸೈನ್ಯವನ್ನು ಕಟ್ಟಿ ಕೊಂಡು ಆಗ್ರಾಪಟ್ಟಣಕ್ಕೆ ಮುತ್ತಿಗೆಯನ್ನಿಡಬೇಕೆಂದು ಧಾವಿಸಿ ಬಂದನು. ಬರುವಷ್ಟರಲ್ಲಿ ಆ ದುರ್ದೈವಿಯಾದ ದಾರಾನು ಅಲ್ಲಿಂದ ಎದ್ದೇ ಹೋಗಿ

ದ್ದನು ಪೊಸಳೆಯು ಮಡುವನ್ನು ಬಿಟ್ಟು ಕಡೆಗೆ ಹೋದ ಸಮಾಚಾರ ವನ್ನರಿತು ಪರಮ ಸಂತುಷ್ಟನಾಗಿ ಅವನು ರಾಜಧಾನಿಯ ಒಳಿಯಲ್ಲಿರುವ ತೋಟದಲ್ಲಿ ಇಳುಕೊಂಡನು.

ಇನ್ನು ಮುಂದೇನು? ತಾನು ತಂದೆಯ ದರ್ಶನಕ್ಕೆ ಹೋಗುವದು ಇಷ್ಟವೋ ಅಲ್ಲವೊ? ಅರಮನೆಯಲ್ಲಿ ಹೋದರೆ ಬೋನಿನಲ್ಲಿ ಸಿಕ್ಕಿ ಕೊಂಡ ಹುಲಿಯ ಅವಸ್ಥೆಯೇ ತನ್ನದಾದೀತೆಂಬ ಶಂಕೆಯಿಂದ ಅವನು ಆ ವಿಚಾರವನ್ನು ಬಿಟ್ಟುಕೊಟ್ಟು ತನ್ನ ಅನುಗ್ರಹಕ್ಕೆ ಪಾತ್ರನಾಗಿರುವ ಒಬ್ಬ ಖೊಜ್ಜಿಯನ್ನು ಕೊಟ್ಟು ತಾನ್ನು ಬಾದಶಹರ ಪಾದವಂದನಕ್ಕಾಗಿ ಬಂದಿರುವೆನೆಂಬ ಸಂದೇಶವನ್ನು ಕಳುಹಿದನು. ಸವಿಮಾತಿನವನಾದ ಆ ಯವನದೂತನು ಬಾದಶಹನಿಗೆ ಮಣಿಮಣಿದು ಪ್ರಣಾಮ ಮಾಡಿ ಔರಂಗಜೇಬನ ಸೌಜನ್ಯವನ್ನು ಬಣ್ಣಿಬಣ್ಣಿಸಿ, ದಾರಾಶಹನ ಅನಿಯಂತ್ರಿತ ವಾದ ರಾಜ್ಯತೃಷ್ಣೆಯ ಮೂಲಕವಾಗಿ ಇಷ್ಟೆಲ್ಲ ಅನಾಹುತವಾದ ಸಂಗತಿ ಗಳು ನಡೆದವೆಂದು ಹೇಳಿ ಔರಂಗಜೇಬ ಸುಲ್ತಾನರು ಪಿತೃಪಾದಾರವಿಂದ ಗಳನ್ನು ಕಂಡು ಕೃತಾರ್ಥರಾಗಿ ಮುಂದೆ ರಾಜಾಜ್ಞೆಯಾದಂತೆ ನಡಕೊ ಳ್ಳಲು ಸಿದ್ಧರಾಗಿರುವರೆಂದು ಸೂಚಿಸಿದನು.

ಇದಕ್ಕೆ ಶಹಾಜಹಾನನಿನ್ನೇನು ಹೇಳತಕ್ಕದ್ದು? ಹೊತ್ತೇರಿ ದಂತೆಯೇ ಕೊಡೆಯನ್ನು ಹಿಡಿಯುವದು ಲೇಸೆಂದೆಣಿಸಿ, ಆ ವೃದ್ಧನಾದ ತಂದೆಯು ಸವಿಮಾತಿನಿಂದಲೇ ಹೇಳಿ ಕಳಿಸಿದ್ದೇನಂದರೆ:— "ಔರಂಗ ಜೇಬ, ನಿನ್ನ ಪಿತೃಭಕ್ತಿಯನ್ನು ಕಂಡು ನನಗೆ ತುಂಬಾ ಸಂತೋಷ ವಾಗಿದೆ ಎಂದಿಗಾದರೂ ನೀನು ಪಾಪಭೀರುವೆಂಬದನ್ನು ನಾನು ಅರಿ ಯನೇ? ಈ ಯುದ್ಧವು ಬೇಡೆಂದು ನಾನು ದಾರಾಶಹನ ಕೈಯಲ್ಲಿ ಕಡ್ಡಿಯನ್ನು ಕೊಟ್ಟು ಹೇಳಿದರೂ ಆ ಮತಿಮಂದನಿಗೆ ಬುದ್ಧಿ ಬರಲಿಲ್ಲ. ಅವನು ತನ್ನ ಫಲಭೋಗವನ್ನುಣ್ಣುವನು. ನನ್ನ ಮಕ್ಕಳಲ್ಲಿ ವಿನಯ ಸೌಜನ್ಯ ಸುವಿಚಾರಸಂಪನ್ನನೆಂದರೆ ನೀನೊರ್ವನೇ. ನೀನು ಮಾಡಿದ್ದೇ ಉಚಿತವಾಯಿತೆಂದು ನನ್ನ ಅಭಿಪ್ರಾಯವಾಗಿದೆ. ಪ್ರಿಯ ಕುಮಾರನೆ, ನಿನ್ನ ಮುಖವನ್ನು ಕಾಣದೆ ಎಷ್ಟಾದರೂ ದಿವಸಗಳಾಗಿ ಹೋದವೆಂದು ಹೇಳಲಿ! ಇಂದು ಪ್ರತ್ಯಕ್ಷ ನೀನೇ ಬರುವಿಯೆಂದು ತಿಳಿದು ವಾತ್ಸಲ್ಯ

ದಿಂದ ನಾನು ಮಾರ್ಗಪ್ರತೀಕ್ಷೆ ಮಾಡುತ್ತಿರುವಾಗ ಇದೇನು ವಿಲಂಬವು? ನೀನು ಸಮಕ್ಷಮವಾಗಿ ಒಂದು ಕೇಳಿಕೊಳ್ಳಲು ಯಾವ ಕೋರಿಕೆಯನ್ನಾದರೂ ನಾನು ಮನ್ನಿಸಿದೆನು."

"ಶಾಬ್ಬಾಸ್! ಸಕ್ಕರೆಯ ಚೀಲದಂತೆ ಅತಿ ಮಧುರವಾಗಿರುವ ಈ ಸಂದೇಶದ ಗರ್ಭಿತವು ನನಗೆ ಕಾಣದಿದ್ದೀತೆ? ಔರಂಗಜೇಬನು ನಾನು! ಈ ಸವಿಮಾತಿಗೆ ಮೆಚ್ಚಿ ನಾನು ಈಗ ಅರಮನೆಗೆ ಹೋದರೆ ಅಂಥಂ ತಮಸ್ಸಿನಂತಿರುವ ತಳಮನೆಯು ನನಗೆ ಶಾಶ್ವತವಾದ ನಿವಾಸಸ್ಥಾನವಾಗದಿರದು. ಇದೆಲ್ಲ ಬೇಗಮ್ ಸಾಹೇಬಳ ಕುಮಂತ್ರದ ಜಾಲವು! ಬಾದಶಹರಿಗಿಷ್ಟೆಲ್ಲ ತಿಳಿಯುತ್ತಿದ್ದರೆ ಅವರಿಗೆ ನಾಳಿನ ಒಂದಿವಾಸವೆಲ್ಲಿ ಬಡಿಸಿ ಇಡುತ್ತಿತ್ತು? ಬೇಗಮ್, ನೀನು ನಂದರ ಅಮಾತ್ಯನಾದ ರಾಕ್ಷಸನಿಗೆ ಸಮಾನಳಾಗಿದ್ದರೆ ನಾನು ಪ್ರತ್ಯಕ್ಷ ಚಾಣಕ್ಯನು! ಆಗಲಿ, ನಿನ್ನ ಮಂತ್ರವನ್ನು ನಿನ್ನ ಮೇಲೆಯೆ ಹೊರಳಿಸದಿದ್ದರೆ ನಾನೆಂಥ ಔರಂಗಜೇಬನು?" ಎಂದು ಉದ್ಗಾರ ತೆಗೆದು ಆ ಕಪಟಪಟುವು ತನ್ನ ಆಪ್ತರೊಡನೆ ಆಲೋಚಿಸಬೇಕೆಂದು ಸಂಕಲ್ಪ ಮಾಡಿದನು. ರೋಶನಾರೆಯ ಮೇಣೆಯು ಬಂದಿತು; ಶಾಇಸ್ತೇಖಾನನ ಮೆರವಣಿಗೆಯು ಕುದುರೆಯು ಬಂದಿತು ತಮ್ಮದಿಷ್ಟು ಕಾಲು ಚಾಚಿಕೊಳ್ಳಲು ಇದೇ ಸಮಯವೆಂದು ಎಣಿಸಿ ಕೆಲ ಜನ ಸ್ವಾರ್ಥಸಾಧಕರು ಮೇಲುಮೇಲಾಟ ಮುಂದಕ್ಕೆ ಹೋಗಿ ಔರಂಗಜೇಬನ ಮುಂದೆ ದಾರಾನ ಅಂತಸ್ಥ ವಿಚಾರಗಳನ್ನು ತಿಳಿಸಲು ಬಂದರು.

ಆಪ್ತಾಲೋಚನವಾದ ಬಳಿಕ ತಾನಿನ್ನು ಬಾದಶಹನೊಡನೆ ಹೇಗೆ ವರ್ತಿಸತಕ್ಕದ್ದೆಂಬದನ್ನು ನಿರ್ಣಯಿಸಿಕೊಂಡನು. ಒಣಜಿಗನಾಗಲಿ, ಕಾರ್ಯಸಾಧುವಾಗಲಿ ಉದ್ದಾಮನಾಗಿ ವರ್ತಿಸಿದರೆ ಅದರಿಂದ ಹಿತವಾಗದೆ ಹಾನಿಯಾಗುವ ಸಂಭವವಿರುವದು. ಆದಕ್ಕಾಗಿ ಆ ಸ್ವಕಾರ್ಯಸಾಧುವರ್ಯನು ತನಗೆ ವಿಜಯದ ಹೆಮ್ಮೆಯಿಲ್ಲವೆಂದೂ, ತನ್ನಲ್ಲಿ ದರಾಯನ ವಿಷಯವಾಗಿ ಸರ್ವಥಾ ದ್ವೇಷಬುದ್ಧಿಯಿಲ್ಲವೆಂದೂ, ತನಗೆ ಬಾದಶಹರ ಇಚ್ಛೆಯೇ ಪ್ರಮಾಣವೆಂದೂ ಹೇಳಿ ಕಳಿಸಿ, ಸೈನ್ಯದ ವ್ಯವಸ್ಥೆಯನ್ನು ಮಾಡಬೇಕಾಗಿರುವದರಿಂದ ಬಾದಶಹರ ಸಂದ

ರ್ಶನದ ಲಾಭವು ಒಂದೆರಡು ದಿವಸ ಹಿಂದಕ್ಕೆ ಬಿದ್ದದ್ದಕ್ಕಾಗಿ ಬಹುಪರಿಯಾಗಿ ವಿಷಾದಪಡುತ್ತೇನೆಂದು ಕೂಡಾ ಬಿನ್ನೈಸಿದನು. ಈಪರಿಯಾದ ದಾಂಭಿಕವಾದ ಪಿತೃಪ್ರೇಮದ ಆಡಂಬರವನ್ನು ಮಾಡಿ ಔರಂಗಜೇಬನು ರಾಜಧಾನಿಯಲ್ಲಿರುವ ಸ್ವಪಕ್ಷೀಯರನ್ನು ದೃಢೀಕರಿಸಿಕೊಳ್ಳುವದರಲ್ಲಿಯೂ ಸಮಯಾವಕಾಶವನ್ನು ಪಡಕೊಂಡನು.

ಆಗ್ರಾಪಟ್ಟಣದ ತುಂಬೆಲ್ಲ ಆಪ್ತಾಲೋಚನ, ಗುಪ್ತವಿಚಾರ, ಬಲಾಬಲಗಳ ತೂಕ, ರಾಜಕಾರಣಗಳ ವಿಹಿತಾವಿಹಿತಗಳನ್ನು ಕುರಿತು ಬಾದಶಹ ವಜೀರರೂ, ಸೇನಾಪತಿ ಸರದಾರರೂ, ವೃದ್ಧ ತರುಣರೂ, ಅಹರ್ನಿಶವಾಗಿ ಗುಜುಗುಜುನೆ ಮಾತಾಡುತ್ತಲೇ ಇದ್ದರು. ಅಂಗಡಿಕಾರರು ಶ್ರೀಮಂತರ ಮನೆಯ ಅಡಿಗೆ ನೀರಿನವರನ್ನು ಕೂಡಿಸಿಕೊಂಡು, ತಂಬಾಕ ತಾಂಬೂಲಗಳನ್ನು ಕೊಟ್ಟು, ಇನ್ನು ದಾರಾ ಔರಂಗಜೇಬ ಸುಲ್ತಾನರ ಕಲಹದ ಪರಿಣಾಮವೆಲ್ಲಿಗೆ ಮುಟ್ಟುವದೆಂದು ಕೇಳುವರು. ನಾಪಿಕನು ಸರದಾರನೋರ್ವನ ಗಡ್ಡವನ್ನು ತನ್ನ ಹಣಿಗೆಯಿಂದ ಹಿಕ್ಕಿ 'ದೇವರೂ, ಇದೊಂದು ಬಿಳಿ ಕೂದಲು ಸಮಗ್ರವಾದ ಗಡ್ಡದ ಮಾನವನ್ನು ತೆಗೆಯುವದು' ಎಂದು ಹೇಳಿ ಆ ಕುಂದನ್ನು ಕಿತ್ತಿ ಹಾಕಲು ತನ್ನ ಹಸಿಬೆಯಲ್ಲಿಯ ಚಿಮುಟಿಗೆಯನ್ನು ತೆಗೆದು, "ಒಡೆಯರೇ, ಬಾದಶಹರು ದಾರಾ ಸುಲ್ತಾನರವರನ್ನು ತಮ್ಮ ಬೆನ್ನಿಗೆ ಕಟ್ಟಿಕೊಳ್ಳುವದಿಲ್ಲವೆಂದು ಹೇಳಿದರಂತೆ. ಆದರೆ ನಿನ್ನೆ ರಾತ್ರಿಯೇ ಎರಡು ಮುದ್ದಾನೆಗಳು ಹೊರಲಾರದಷ್ಟು ಹೊನ್ನು ಹೇರಿಕೊಂಡು, ದಾರಾ ಸುಲ್ತಾನರಿದ್ದೆಡೆಗೆ ಹೋದವೆಂಬ ವಾರ್ತೆ ಕೇಳಿದ್ದೇನೆ. ಇದೇನು ಸೋಜಿಗವು?" ಎಂದು ಒಳ್ಳೇ ಕಳಕಳಧ್ವನಿಯಿಂದ ಕೇಳಿದನು.

ರಾಷ್ಟ್ರದಲ್ಲಿ ಆದ್ಯರೆಂದೆನಿಸಿಕೊಳ್ಳುವವರಿಗಂತೂ ಒಳಸಂಚು ಆಪ್ತಾಲೋಚನೆಗಳ ಮೂಲಕ ಸ್ನಾನ-ಭೋಜನಗಳ ಎಚ್ಚರವಿಲ್ಲ. ನಿದ್ದೆ ನೀರಡಿಕೆಗಳ ಅರಿವಿಲ್ಲ. ಒಬ್ಬರೊಬ್ಬರ ಗೋಣು ಮುರಿಯುವ ವಿಚಾರಗಳೇ ಅವು! ಸ್ವಾರ್ಥದ ಮುಂದೆ ತಂದೆತಾಯಿಗಳನ್ನು ನೋಡಬಾರದಾಗಿತ್ತು. ಪ್ರಸಂಗ ಬಂದಾಗ ಸಾರ್ವಭೌಮನ ಸಿಂಹಾಸನ ಮುಕುಟಗಳ ಬೆಲೆಯಿಡಬಾರದಾಗಿತ್ತು. ಒಂದು ಪಕ್ಷದ ಕಡೆಗೆ ಔರಂಗಜೇಬ,

ದಾನಿಶ್‌ಮಂದಖಾನ್, ಶಾಇಸ್ತೇಖಾನ್, ಕಾಲಿಲುಲ್ಲಾಖಾನ ಮುಂತಾದ ಅಧಿಕಾರಾಪನ್ನರಾದ ದೊಡ್ಡದೊಡ್ಡ ವ್ಯಕ್ತಿಗಳು. ಮತ್ತೊಂದು ಪಕ್ಷದ ಮುಖ್ಯಳೆಂದರೆ ಬೇಗಮ್ ಸಾಹೇಬಳು. ಅವಳು ತಿರುವಿದ ಚಕ್ರದಂತೆ ಸುತ್ತಾಡುವವರು ಅನೇಕರಾದ ಸರದಾರರಾಗಿದ್ದರೂ ಅವರ ಹೆಸರುಗಳನ್ನು ಬಹಿರಂಗವಾಗಿ ಹೇಳುವಂತಿದ್ದಿಲ್ಲ. ಸೋತವನಾದ ದಾರಾಶಹನ ಪಕ್ಷವದು! ಈ ಪಕ್ಷದವರ ವರ್ತಮಾನವನ್ನು ಆ ಪಕ್ಷದವರಿಗೂ ಆ ಪಕ್ಷದವರ ವರ್ತಮಾನವನ್ನು ಈ ಪಕ್ಷದವರಿಗೂ ಹೇಳುತ್ತ ಅನೇಕ ಜನ ಪಾಳತಿಗಾರರು ಹೇರಳವಾದ ಹಣವನ್ನು ಸಂಪಾದಿಸಿಕೊಂಡರು.

ಸುಲೇಮಾನನ ಸಹಾಯಕಾರಿಗಳಾಗಿದ್ದ ರಾಜಾ ಜಯಸಿಂಗ, ದಿಲೇರಖಾನರನ್ನು ವಂಚಿಸಿ ಆ ರಾಜಪುತ್ರನು ಊರಿಕೊಳ್ಳುವ ಕೋಲುಗಳನ್ನು ಅಪಹರಿಸಿಕೊಳ್ಳುವ ಯತ್ನದಲ್ಲಿರಲು, ಬೇಗಮ್‌ಸಾಹೇಬಳು ಪ್ರತ್ಯಕ್ಷ ಔರಂಗಜೇಬನ ಮಗನಾದ ಸುಲ್ತಾನ ಮುಹಮ್ಮದನಿಗೆ ಸಿಂಹಾಸನದ ಆಸ್ಥೆಯನ್ನು ತೋರಿಸಿ ತಂದೆಯಾದ ಔರಂಗನ ಕಣ್ಣಲ್ಲಿ ಅವನು ಮಗನ ಬಟ್ಟುಗಳನ್ನೇ ಚುಚ್ಚುವ ಯತ್ನ ನಡೆಸಿದ್ದಳು.

ಬಾದಶಹನ ದರ್ಶನಕ್ಕೆ ತಾನಿಂದು ಬರುವೆನು ನಾಳಿಗೆ ಬರುವೆನೆಂದು ದಿನಮೋಕ ಮಾಡಿ, ಔರಂಗಜೇಬನು ರಾಜಧಾನಿಯಲ್ಲೆಲ್ಲ ತನ್ನ ಬಲೆಯೊಡ್ಡಿಕೊಂಡು ಕುಳಿತನು. ಕೋಟೆಯ ಬೀಗದ ಕೈಗಳು ಬಾದಶಹನ ಸ್ವಾಧೀನದಲ್ಲಿ! ಬಾದಶಹನಲ್ಲಿ ಕೇವಲವಾದ ನಿಷ್ಠೆಯುಳ್ಳ ಜನರೇ ಅಲ್ಲಿಯ ಕಾವಲುಗಾರರು. ಹೀಗಿರಲು ತಾನು ರಾಜಧಾನಿಯಲ್ಲಿ ಬರುವದು ಸರ್ವಥಾ ಹಿತಕರವಾದದ್ದಲ್ಲೆಂದೆಣಿಸಿ ಔರಂಗಜೇಬನು ತನ್ನ ಮಗನಾದ ಸುಲ್ತಾನ ಮುಹಮ್ಮದನಿಗೆ ಕಾವಲುಗಾರರನ್ನು ವಂಚಿಸಿ ಕೋಟೆಯ ಬೀಗಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವ ಕೆಲಸವನ್ನು ಹೇಳಿದ್ದನು. ಸುರಾಪಾನ ಧನದಾನ ಸನ್ಮಾನಗಳ ಬಲವತ್ತರವಾದ ಆಶೆಯನ್ನು ಕಾವಲುಗಾರರಿಗೆ ತೋರಿಸಿ, ಸುಲ್ತಾನ ಮುಹಮ್ಮದನು ತನ್ನ ಕೆಲಸವನ್ನು ಅರ್ಧಕರೆ ಸಜ್ಜುಮಾಡಿಟ್ಟಿದ್ದನು.

ಸುಲ್ತಾನ ಮುಹಮ್ಮದನು ಹೀಗೆ ವಸ್ತುತಃ ಕೋಟೆಯ ಸ್ವಾಮಿ-

ಯಾಗಿರುವ ಸಂಗತಿಯನ್ನರಿತು ಇನ್ನು ಕಂಟಕದಿಂದಲೇ ಕಂಟಕವನ್ನು ತೆಗೆಯಬೇಕೆಂದು ಆಲೋಚಿಸಿ, ಬೇಗಮ್ ಸಾಹೇಬಳು ಸುಲ್ತಾನ ಮಹಮ್ಮದನೊಡನೆ ಒಳಸಂಚು ನಡೆಸಿ, ಅವನ ತಲೆಯ ಮೇಲೆ ಈಗಲೇ ಮುಕುಟವನ್ನು ಇರಿಸುವ ಆಶ್ವಾಸನವನ್ನು ಬಾದಶಹನಿಂದ ಕೊಡಿಸಿ, ಔರಂಗಜೇಬನಿಗೆ ವಿರುದ್ಧವಾಗಿ ನಡಕೊಳ್ಳುವಂತೆ ಅವನಿಗೆ ಬೋಧಿಸಿದಳು. ತಂದೆಯನ್ನು ದೂಡಿ ಸಾಮ್ರಾಜ್ಯದ ಮುಕುಟಧಾರಣವನ್ನು ಮಾಡುವೆನೆಂಬ ದುರ್ವಿಚಾರವು ಜಹಾಂಗೀರ ಬಾದಶಹನಿಂದ ಆನುವಂಶಿಕವಾಗಿ ಸುಲ್ತಾನ ಮುಹಮ್ಮದನಲ್ಲಿ ಪ್ರಾಪ್ತವಾಗಿತ್ತು. ಬೇಗಮ್ ಸಾಹೇಬಳ ವಿಚಾರವು ಅವನಿಗೆ ತ್ಯಾಜ್ಯವಾಗಿ ತೋರಲಿಲ್ಲ. ಇತ್ತ ಔರಂಗಜೇಬನು ಶಹಾಜಹಾನನಿಗೆ ಇಲ್ಲದ ನೆವ ಹೇಳಿ ಕಾಲಕ್ಷೇಪ ಮಾಡುತ್ತಿರುವಂತೆಯೇ ಸುಲ್ತಾನ ಮುಹಮ್ಮದನಾದರೂ ಔರಂಗಜೇಬನೊಡನೆ ನಡಕೊಳ್ಳಲಾರಂಭಿಸಿದನು.

ಹೀಗೆ ಗಂಟಿಗೆ ಗಂಟು, ಕುಯುಕ್ತಿಗೆ ಕುಯುಕ್ತಿಗಳು ನಡೆದಿರಲು ಇಂಥ ಕಾರಸ್ಥಾನವನ್ನು ಹೇಗಾದರೂ ಮಾಡಿ ಮುರಿಯಬೇಕೆಂದು ಔರಂಗಜೇಬನು ನಿಶ್ಚಯಿಸಿದನು. ಸುಲ್ತಾನ ಮುಹಮ್ಮದನು ರಾತ್ರಿಯ ಭೋಜನ ತೀರಿಸಿಕೊಂಡು ಏಕಾಕಿಯಾಗಿ ಮನೋರಥದಲ್ಲಿ ಕುಳಿತು ಏನೇನೋ ಆಲೋಚಿಸುತ್ತಿದ್ದನು. ಅಷ್ಟರಲ್ಲಿ ಧಡಲ್ಲನೆ ಬಾಗಿಲವನ್ನು ನೂಕಿ ಔರಂಗಜೇಬನು ಸೆಟ್ಟನೆ ತನ್ನ ಮಗನ ಸಮ್ಮುಖನಾಗಿ ನಿಂತುಕೊಂಡನು. ಮುಹಮ್ಮದನು ಆಶ್ಚರ್ಯಭಯಗಳಿಂದ ಚಕಿತನಾಗಿ ಪಲ್ಲಂಗದ ಮೇಲಿಂದ ಹಾರಿ ನೆಲದ ಮೇಲೆ ಶಸ್ತ್ರಸಹಾಯನಾಗಿ ನಿಂತುಕೊಂಡನು. ಔರಂಗಜೇಬನು ಅಶಸ್ತ್ರನಾಗಿದ್ದರೂ ಶಸ್ತ್ರಪಾಣಿಯಾಗಿರುವ ಮಗನನ್ನು ಕಂಡು, ತಿಲಮಾತ್ರ ಹೆದರದೆ ಮಂದಹಾಸಗೈದು,

"ಸಲಾಮು! ಸುಲ್ತಾನ ಸಾಹೇಬ, ಯಾವದೋ ನಿಮಿತ್ತವಾಗಿ ನೀವು ನಿಮ್ಮ ಜನ್ಮದಾತೃವನ್ನು ಮರೆತೇಬಿಟ್ಟಿರಾಗಿ ತೋರುತ್ತದೆ!" ಎಂದು ನುಡಿದನು.

ಆ ಜಿತಾಬ್ರಹ್ಮೇತಿಯು ಹಾಗೆ ಸುಲ್ತಾನ ಮುಹಮ್ಮದನ ಎಡೆಯ ಮೇಲೆ ನಿಂತಂತೆ ಮಾಡಿ, ಆ ರೀತಿಯಾಗಿ ಪ್ರಶ್ನಮಾಡಲು ಆ ತರುಣನು

ಒಳಗಿಂದೊಳಗೆಯೇ ಥರಥರನೆ ನಡುಗಿದನು. ಹಾಗೂ ಹೀಗೂ ಧೈರ್ಯವನ್ನವಲಂಬಿಸಿ ಅವನಂದದ್ದು:

"ಮರೆತುಬಿಟ್ಟೆನೆ? ತಮ್ಮ ಆಜ್ಞೆಯ ಮೇರೆಗೆ ಕಾರ್ಯವನ್ನು ಸಂಪೂರ್ಣವಾಗಿ ಜರುಗಿಸಬೇಕಾದರೆ ಕಾಲಾವಧಿಯಾಯಿತು. ಅದಕ್ಕೆ ನನ್ನ ಯತ್ನವಿಲ್ಲ."

"ಹೀಗೋ!!! ಸುಲ್ತಾನ, ನಿಮ್ಮ ಒಳಸಂಚು ನನಗೆ ತಿಳಿಯದೆ ಇಲ್ಲ! ಮೂರ್ಖನಾದ ತರುಣನೆ, ನಿನ್ನನ್ನು ಹಡೆದ ತಂದೆಯಾದ ನನ್ನನ್ನು ದೂಡಿ, ನಮ್ಮ ಮುದುಕನ ತಲೆಯ ಮೇಲಿನ ಮುಕುಟವನ್ನು ನೀನು ಅತ್ತಿಂದತ್ತಲೇ ಎತ್ತಿಕೊಳ್ಳಬೇಕೆನ್ನುವಿ ಅಲ್ಲವೆ? ನನ್ನ ಪ್ರೀತಿಯ ಕುಮಾರನೇ, ಈ ಔರಂಗಜೇಬನು ಇಷ್ಟು ಸಾಹಸವನ್ನು ಮಾಡಿ, ದಿಲ್ಲಿಯ ಸಿಂಹಾಸನವನ್ನು ಹಿಡಿದುಕೊಳ್ಳಲೆಸಗಿರುವದು ಯಾರ ಸಲುವಾಗಿ ಹೇಳಬಾರದೆ? ನನ್ನ ಪಶ್ಚಾತ್ ನನ್ನ ತಲೆಯ ಮೇಲಿನ ಮುಕುಟವನ್ನು ಬೀದಿಯನ್ನುಡುಗುವ ಹೊಲೆಯನಿಗೆ ಕೊಟ್ಟು ಹೋಗಬೇಕೆನ್ನುವೆನೆ? ಈ ಮಾತು ಹಾಗಿರಲಿ! ನನ್ನನ್ನು ದೂಡಿ ಈಗಲೇ ನಿನಗೆ ಮುಕಟವನ್ನು ಗಳಿಸುವದಿದ್ದರೆ ನಿನ್ನ ಮಾರ್ಗದಲ್ಲಿ ಕಂಟಕನಾಗಿರುವ ನನ್ನನ್ನು ಈಗಲೇ ನಿನ್ನ ಖಡ್ಗದಿಂದ ಕಡಿದು ಹಾಕು. ನಾನು ಬೇಕಾಗಿ ಶಸ್ತ್ರವನ್ನು ಬಿಟ್ಟು ಬಂದಿದ್ದೇನೆ. ಇಂಥ ದುರ್ನೀತರಾದ ಮಕ್ಕಳನ್ನು ನೋಡಿಕೊಂಡಿರುವದಕ್ಕಿಂತಲೂ ಕಣ್ಣು ಮುಚ್ಚಿಕೊಂಡು, ಹೋಗುವದು ಒಳ್ಳೆಯದು. ಹಿರಿ! ಖಡ್ಗವನ್ನು ಹಿರಿ! ನಿನ್ನ ಅಭೀಷ್ಟ ಚಿಂತನವನ್ನು ಮಾಡುತ್ತಿರುವವನಾದ ನಿನ್ನ ತಂದೆಯ ಶಿರಸ್ಸನ್ನು ಛೇದಿಸಿ ಕೃತಾರ್ಥನಾಗು!" ಎಂದು ಔರಂಗಜೇಬನು ತನ್ನ ಗೋಣು ಎತ್ತಿಕೊಂಡು ನಿಂತನು.

ಸುಲ್ತಾನ ಮಹಮ್ಮದನು ದುಃಖನಿರ್ಭರನಾಗಿ ತನ್ನ ಕೈಯಲ್ಲಿರುವ ಖಡ್ಗವನ್ನು ಆವೇಶದಿಂದ ನೆಲಕಪ್ಪಳಿಸಿ, ಕಣ್ಣೀರು ಸುರಿಸುತ್ತ ತನ್ನ ತಂದೆಯ ಕಾಲುಗಳ ಮೇಲೆ ಬಿದ್ದು ಕ್ಷಮಿಸಬೇಕೆಂದು ಬೇಡಿಕೊಂಡನು. ಆ ಕುಮಾರನ ಮನಸ್ಸಿನಲ್ಲಿಯ ದುರ್ವಿಚಾರವು ಹೊರಟುಹೋಗಿರದಿದ್ದರೆ ಅವನು ಆಯತ್ತವಾಗಿ ಹಸ್ತಗತನಾಗಿರುವ ತನ್ನ ತಂದೆಯನ್ನು ಸೆರೆಯಲ್ಲಿಯಾದರೂ ಇಡುತ್ತಿದ್ದನು; ಇಲ್ಲವಾದರೆ ಅವನ ಶಿರಸ್ಸನ್ನಾದರೂ

ಛೇದಿಸಿಬಿಡುತ್ತಿದ್ದನು. ಅವನ ಅನುತಾಪವು ನಿಜವಾದದ್ದಾಗಿತ್ತು. ಆದನ್ನರಿತು ಆ ದೀರ್ಘಸೂತ್ರಿಯಾದ ತಂದೆಯು ಮಗನನ್ನು ಎತ್ತಿ ಅಪ್ಪಿಕೊಂಡು, "ಮಹಮ್ಮದ! ನಿನ್ನನ್ನು ನಾನು ಕ್ಷಮಿಸಿದ್ದೇನೆ. ನನ್ನಿ ಉದಾರ ಗುಣವನ್ನು ಕಂಡು ನಿನಗೆ ಮೆಚ್ಚಿದ್ದೇನೆ. ನಡೆ! ನನ್ನ ಆಜ್ಞೆಯಾದಂತೆ ಕಾರ್ಯನಿರ್ವಾಹವನ್ನು ಮಾಡು. ನಾಳಿಗೆ ನಾನು ದಿಲ್ಲಿಯ ಚಕ್ರವರ್ತಿಯು. ನೀನು ಯುವರಾಜನು." ಎಂದು ನುಡಿದು ಹೊರಟಿದ್ದು ಹೋದನು.

ಮಗನ ಮನಸ್ಸು ಕಲ್ಮಷವನ್ನು ಕಳಕೊಂಡು ಗಂಗಾಜಲದಂತೆ ನಿರ್ಮಲವಾಗಿತ್ತು. ತಂದೆಯ ಮನಸ್ಸೋ? ದೇವರೇ ಬಲ್ಲ!

೩೫

ಮರುದಿವಸವೇ ಶಹಾಜಹಾನನೆದ್ದು ಮುಖಮಾರ್ಜನ ಅಲ್ಪಾಹಾರ ತಾಂಬೂಲ ಸೇವನಾದಿಗಳನ್ನೆಲ್ಲ ತೀರಿಸಿಕೊಂಡು, ನಿತ್ಯದಂತೆ ನಗರ ರಕ್ಷಕನೂ ದುರ್ಗಪಾಲಕನೂ ಏನೇನು ಸಮಾಚಾರಗಳನ್ನು ತರುವರೋ ಕೇಳಬೇಕೆಂದು ಉತ್ಸುಕನಾಗಿ ಕುಳಿತುಕೊಂಡಿದ್ದನು. ನಗರ ರಕ್ಷಕನೂ ಬರಲಿಲ್ಲ, ದುರ್ಗಪಾಲಕನೂ ಬರಲಿಲ್ಲ. "ಏನು ಚಮತ್ಕಾರವಿದು?" ಎಂದು ಯೋಚಿಸುತ್ತ ಅಡ್ಡಾಡಿ, "ಜಮದಾರ್" ಎಂದು ದ್ವಾರಪಾಲಕನನ್ನು ಕೂಗಿದನು. ಜಮಾದಾರನು ಬಂದು, ಪ್ರಣಾಮ ಮಾಡಿ 'ಏನಾಜ್ಞೆ?' ಎಂದು ವಿನಯದಿಂದ ಬೆಸಗೊಂಡನು. ಆದರೆ ಆ ಜಮಾದಾರನು ಹೊಸಬನು. ಶಹಾಜಹಾನನು ಚಕಿತನಾಗಿ, "ಯಾರು ನೀನು?" ಎಂದು ಕೇಳಿದನು. ತಾನು ಸುಲ್ತಾನ ಮಹಮ್ಮದರವರಿಂದ ನಿಯುಕ್ತನಾಗಿರುವೆನೆಂದು ಅವನು ಹೇಳಿದನು.

"ಕೊತ್‌ವಾಲ್ (ನಗರ ರಕ್ಷಕ) ನಾಗಲಿ, ಕಿಲ್ಲೆದಾರ (ದುರ್ಗಪಾಲಕ) ನಾಗಲಿ ಸಮಾಚಾರಗಳನ್ನು ಅರುಹಲು ಬಂದಿದ್ದರೆ?" ಎಂದು ಶಹಾಜಹಾನನು ಚಿಂತಾಕುಲನಾಗಿ ಕೇಳಿದನು.

"ಹುಜುರ್, ಯಾರೂ ಬಂದಿಲ್ಲ; ಬಂದಿದ್ದರೂ ಒಳಗೆ ಯಾರನ್ನೂ ಬಿಡಕೂಡದೆಂದು ಸುಲ್ತಾನ ಮಹಮ್ಮದರವರ ಅಪ್ಪಣೆಯಾಗಿದೆ." ಎಂದು

ಹೇಳಿ ಜಮಾದಾರನು ತನ್ನ ಸ್ಥಳಕ್ಕೆ ಹೋದನು.

'ಏನೋ ವಿಪರೀತವಾಗಿ ತೋರುತ್ತದೆ' ಎಂದು ಶಹಾಜಹಾನನು ಚಿಂತಿಸುತ್ತ ಬೇಗಮ್ ಸಾಹೇಬಳನ್ನು ಕರೆದನು.

"ಬೇಗಮ್, ಇಂದು ಅರಮನೆಯಲ್ಲಿ ಏನೇನೋ ವಿಪರೀತವಾಗಿ ತೋರುತ್ತದೆ?"

"ಹಾಗೆ ತೋರುತ್ತದೆ. ಅರಮನೆಯ ಸುತ್ತಲೂ ಕಾವಲುಗಾರರು ಭದ್ರವಾಗಿ ಕಾದುಕೊಂಡಿದ್ದು, ಒಳಗಿನವರನ್ನು ಹೊರಗೆಯೂ ಹೊರಗಿನವರನ್ನು ಒಳಗೆಯೂ ಬಿಡುವದಿಲ್ಲವೆಂದು ದಾಸೀ ಜನರೂ ಜವಾನರೂ ಹೇಳುತ್ತಾರೆ.

"ಅಂದರೆ ಇದರ ಅರ್ಥವೇನು?" ಎಂದು ಶಹಾಜಹಾನನು ಭೀತಿ ಕ್ರೋಧಗಳಿಗೀಡಾಗಿ ಕೇಳಿದನು.

"ನಾವೆಲ್ಲರೂ ಬಂದಿಗಳಾಗಿರುವೆವು. ಇದು ಪಿತೃಭಕ್ತನಾದ ನಿಮ್ಮ ಔರಂಗಜೇಬನ ಕೃತಿಯು!"

ಶಹಾಜಹಾನನು ಸಂತಪ್ತನಾಗಿ ತನ್ನ ತಲೆಯಮೇಲಿರುವ ಮುಕುಟವನ್ನು ಕಿತ್ತಿ ಈಡಾಡಿ, "ಛೀ! ದುರಾತ್ಮಾ! ಫಕೀರನ ಕಪಟವೇಷವನ್ನು ತಳೆದು ಹೀಗೆ ಘಾತವನ್ನು ಮಾಡಿದಿಯಾ? ಬೇಗಮ್! ಬೇಗಮ್ ಸಾಹೇಬ! ನಾನು ನಿನ್ನ ಸದುಪದೇಶವನ್ನು ಲೆಕ್ಕಿಸದೆ ಈ ಅನರ್ಥಕ್ಕೆ ಈಡಾದೆನು. ನನ್ನ ಪ್ರಿಯಕುಮಾರನಾದ ದಾರಾಶಹನನ್ನು ವಿಪತ್ತಿನಲ್ಲಿ ನೂಕಿದೆನು. ಎರಡೂ ದಂಡೆಗಳ ಮೇಲೆ ಕೈಯಿಡಹೋಗಿ, ನಾನು ಹೀಗೆ ನಡುನೀರಲ್ಲಿ ಮುಳುಗಿದೆನೆ?" ಎಂದು ಪ್ರಳಾಪಿಸುತ್ತ ಹಾಸಿಗೆಯ ಮೇಲೆ ನಿಶ್ಚೇಷ್ಟಿತನಾಗಿ ಬಿದ್ದುಕೊಂಡನು.

ಬೇಗಮ್ ಸಾಹೇಬಳು ಶೀತೋಪಚಾರಗಳಿಂದ ತಂದೆಯನ್ನು ಮೆಲ್ಲನೆ ಎಚ್ಚರಗೊಳಿಸಿ, ಬಹುಪರಿಯಾಗಿ ಸಮಾಧಾನಗೊಳಿಸಿದಳು.

"ಬೇಗಮ್, ಇಂಥ ವೃದ್ಧಾಪ್ಯದಲ್ಲಿ ನನಗಿಂಥ ಅಪಮಾನಕರವಾದ ಆಪತ್ತು ಪ್ರಾಪ್ತವಾಗಬಹುದೆ?" ಎಂದು ಬಾದಶಹನು ಕಣ್ಣಿಗೆ ನೀರು ತಂದನು.

"ಪ್ರಭುಗಳೆ, ಮುಕುಟಧಾರಣವನ್ನು ಮಾಡಿ, ಸುಖಿಗಳಾದವರನ್ನು

ಜಗತ್ತಿನ ಇತಿಹಾಸದಲ್ಲಿ ಕ್ವಚಿತ್ತಾಗಿ ಕಾಣಬಹುದು. ಲಿಡಿಯಾದ ಸಾರ್ವಭೌಮನಾದ ಕ್ರಿಸಿಯಾ (ಕ್ರೊಸಸ್) ಬಾದಶಹನು ಸಮಸ್ತವಾದ ಭೂಮಂಡಲವನ್ನು ಗೆದ್ದು ತನ್ನೆದುರಿನಲ್ಲಿ ಪರ್ವತೋಪಮವಾದ ಸುವರ್ಣರಾಶಿಯನ್ನೊಟ್ಟಿಕೊಂಡು, ಸುಲೇಮಾನ್ ಮಹಾ ಸಾಧುಗಳನ್ನು ಕುರಿತು, "ಮಹಾತ್ಮರೆ, ನನಗಿಂತಲೂ ಧನ್ಯನಾದ ಪುರುಷನು ಈ ಜಗತೀತಲದಲ್ಲಿ ಇರುವನೆ?" ಎಂದು ಕೇಳಲಾಗಿ ಆ ತ್ರಿಕಾಲಜ್ಞಾನಿಗಳು ಅಂದದ್ದು: "ರಾಜನ್, ಈ ಸುಖವು ಭ್ರಾಮಕವಾದದ್ದು, ಅಂತ್ಯಕಾಲದ ವರೆಗೆ ಕಂಡುಬರುವ ಸುಖವೇ ಸುಖವು." ಮುಂದೆ ಪಾರಸೀಕರು ಆದೇ ಕ್ರಿಸಿಯಾ ರಾಜನನ್ನು ಗೆದ್ದು, ಅವನನ್ನು ಚಿತೆಯ ಮೇಲೇರಿಸಿ ಸುಡ ಹೋಗಿದ್ದರು. ಅಷ್ಟು ದೂರವೇಕೆ? ನಮ್ಮ ಪೂರ್ವಜರಾದ ಬಾಬರ, ಹುಮಾಯುನ್, ಅಕಬರ ಬಾದಶಹರೆಲ್ಲರೂ ಮುಕುಟಧಾರಣದ ದೋಷಕ್ಕಾಗಿ ವಿಪರೀತವಾದ ಮನಸ್ತಾಪಕ್ಕೆ ಒಳಗಾಗಲಿಲ್ಲವೆ? ನಿಮ್ಮದಿನ್ನೂ ಒಳ್ಳೆಯದು, ರಾಜರಾಜೇಶ್ವರರೆಂಬವರಲ್ಲಿ ತಲೆಹೊಡೆಸಿಕೊಂಡವರೆಷ್ಟು ಮಂದಿ? ಕಣ್ಣು ಕೀಳಿಸಿಕೊಂಡವರೆಷ್ಟು ಜನ? ವಿಷ ನುಂಗಿ ಸತ್ತವರಾದರೂ ಕಡಿಮೆಯಾಗಿಲ್ಲ. ದೇವರು ತಂದೊದಗಿಸಿದ ವಿಪತ್ತಿದು. ಇನ್ನು ಸುಖದುಃಖಗಳ ಅಭಿಮಾನವನ್ನು ಬಿಟ್ಟುಬಿಟ್ಟು ಈಶ್ವರಾರಾಧನದಲ್ಲಿ ಇದ್ದು ಕೊಳ್ಳಿರಿ. ಮುಂದಾಗುವ ಸಾರ್ವಭೌಮನು ವಿಪರೀತವಾದ ಚಿಂತೆಯಲ್ಲಿ ಮುಳಿಗಿದವನಾಗಿದ್ದರೆ ನೀವು ಈ ಬಂದಿವಾಸದಲ್ಲಿಯೇ ಚಿತ್ತಶಾಂತಿಯನ್ನು ಹೊಂದಿರುವಿರಿ?" ಎಂದು ನುಡಿದು ಬೇಗಮ್ ಸಾಹೇಬಳು ಬಳಬಳನೆ ಕಣ್ಣೀರು ಸುರಿಸಿದಳು.

ಆದರೆ ಬುದ್ಧಿವಾದವನ್ನು ಹೇಳಿದವಳ ಹೊಟ್ಟೆಯಲ್ಲಿಯೂ ಕಿಚ್ಚು ಉರಿಯುತ್ತಿತ್ತು. ಕೇಳಿದವನಿಗಾದರೂ ತಿಲಮಾತ್ರದ ಸಮಾಧಾನವುಂಟಾಗಲಿಲ್ಲ. ನಿಃಸಂಗತೆಯು ಹಾಗೆ ಒಮ್ಮೆಲೆ ಪ್ರಾಪ್ತವಾಗುತ್ತಿದ್ದರೆ ಲೋಕದಲ್ಲಿ ದುಃಖದ ವಾರ್ತೆಯೇ ಇರುತ್ತಿದ್ದಿಲ್ಲ. ಶಹಾಜಹಾನನು ಹಣೆಹಣೆ ಗಟ್ಟಿಸಿಕೊಂಡು,

"ಬೇಗಮ್, ನಾನು ನಿರ್ವಂಚನದಿಂದ ನನ್ನ ದರಾಯುಸ ಕುಮಾರನಿಗೆ ಅನುಕೂಲನಾಗಿ ನಡೆದಿದ್ದರೆ ನನಗೀ ವಿಪತ್ತು ಪ್ರಾಪ್ತವಾಗುತ್ತಿ

ದ್ದಿಲ್ಲ !'' ಎಂದು ಉದ್ಗಾರ ತೆಗೆದು ಕಣ್ಣಿಗೆ ನೀರು ತಂದನು.

"ತಾತರೆ, ನಡೆದುಹೋದ ಮಾತಿಗೆ ನುಡಿದು ಫಲವಿಲ್ಲ ! ಇನ್ನಾದರೂ ನಮ್ಮ ಸ್ವಾಧೀನದ ಮಾತಿಲ್ಲ. ದೇವರು ಏನು ಮಾಡುವನೋ ನೋಡಬೇಕು! ಇಂಥ ದುಸ್ಸಾಧ್ಯವಾದ ಪ್ರಸಂಗದಲ್ಲಿಯೂ ನಾನು ಸಾಹಸ ಮಾಡಿ ದಾರಾಶಹನಿಗೆ ಆದಷ್ಟು ಸಹಾಯ ಮಾಡಿದ್ದೇನೆ.''

"ಏನು! ಏನು ಮಾಡಿರುವಿ ಮಗಳೆ?'' ಎಂದು ಆ ಮುದುಕನು ಕುತೂಹಲದಿಂದ ಕೇಳಿದನು.

"ದಿಲ್ಲಿಯಲ್ಲಿರುವ ನಮ್ಮ ಕುದುರೆಯ ದಳವೆಲ್ಲ ನನ್ನ ಸೂಚನೆಯ ಮೇರೆಗೆ ದಾರಾಸುಲ್ತಾನನ ಕಡೆಗೆ ಹೋಗಿದೆ. ರಾಜಧಾನಿಯಲ್ಲಿರುವ ಹತ್ತೆಂಟು ಜನ ಸರದಾರರು ನಿನ್ನೆಯೇ ತಮ್ಮ ತಮ್ಮ ಅನುಯಾಯಿಗಳನ್ನು ಕಟ್ಟಿಕೊಂಡು ಯುವರಾಜನನ್ನು ಅನುಸರಿಸುವದಕ್ಕಾಗಿ ಹೋಗಿದ್ದಾರೆ. ಎರಡು ಆನೆಗಳ ಭಾರವಾದ ಭಂಗಾರವು ಈ ಕಾಲಕ್ಕೆ ದಾರಾಶಹನ ಕೈಸೇರಿರಬಹುದು. ದೈವವು ಅನುಕೂಲವಾಗಿದ್ದರೆ ಇಷ್ಟರಿಂದಲೇ ಬೇಕಾದ್ದು ಆದೀತು!''

"ಶಾಬ್ಬಾಸು ಮಗಳೆ! ಚತುರೆಯೆಂದರೆ ನೀನೆ! ಇನ್ನೂ ಆಶೆಯಿದೆ ಎನ್ನಲಿಕ್ಕೆ ಅಡ್ಡಿ ಇಲ್ಲ'' ಎಂದು ನುಡಿದ ಬಾದಶಹನ ಕಣ್ಣುಗಳಿಂದ ನೀರು ಸುರಿಯುತ್ತಿದ್ದರೂ ಮುಖದಲ್ಲಿ ಕಿಂಚಿತ್ ಸಮಾಧಾನದ ನಗೆ ತೋರಿತು.

ಇವರು ಹೀಗೆ ಮಾತಾಡುತ್ತ ಕುಳಿತಿರುವಾಗ ಸುಲ್ತಾನ ಮಹಮ್ಮದನು ಕೈಯ್ಯಲ್ಲಿ ಬಿಚ್ಚುಗತ್ತಿಯನ್ನು ಹಿಡುಕೊಂಡು ಗಮ್ಮನೆ ಅಲ್ಲಿಗೆ ಬಂದು ನಿಂತನು. ಅವನನ್ನು ಕಂಡು ಬೇಗಮ್ ಸಾಹೇಬಳು "ಏನು ಸಮಾಚಾರ ಸುಲ್ತಾನ?'' ಎಂದು ಒತ್ತಾಯದ ನಗೆ ತಾಳಿ ಕೇಳಿದಳು.

"ಕೋಟೆಯ ತಲೆಬಾಗಿಲದ ಬೀಗದ ಕೈಯನ್ನು ಕೊಡಬೇಕೆಂದು ನಾನು ಮುತ್ತಾತರಿಗೆ ಅನೇಕಾವರ್ತಿ ಬೇಡಿಕೊಂಡರೂ ಅದು ಇನೂ ನನ್ನ ಕೈಗೆ ಬರಲಿಲ್ಲ. ಈಗ ಅದನ್ನು ತೆಗೆದುಕೊಳ್ಳಲು ಬಂದಿದ್ದೇನೆ.'' ಎಂದು ಮುಹಮ್ಮದನು ಮುತ್ತಾತನಿಗೆ ಪ್ರಣಾಮ ಮಾಡಿ

ನುಡಿದನು.

"ಅದಕ್ಕಾಗಿ ನಮ್ಮನ್ನು ಸೆರೆಯಲ್ಲಿಟ್ಟು ಒತ್ತಾಯದಿಂದ ಬೀಗದ ಕೈಯನ್ನು ತೆಗೆದುಕೊಳ್ಳಲು ಬಂದಿರುವಿರೇನು?" ಎಂದು ಬಾದಶಹನು ಕ್ರುದ್ಧನಾಗಿ ಕೇಳಿದನು.

"ತೋಬಾ! ತೋಬಾ! ಅಲಂಪನಾಃ ಈ ಸಾಮ್ರಾಜ್ಯದ ಅಧಿಪತಿಗಳಾದ ತಮಗೆ ಬಂದಿವಾಸವೆ? ಸಾರ್ವಭೌಮರು ಬೀಗದ ಕೈಯನ್ನು ನನ್ನ ಸ್ವಾಧೀನ ಮಾಡುವೆವೆಂದು ಹೇಳಿದ ಮೇರೆಗೆ ಕೇಳಿಕೊಳ್ಳಲು ಬಂದಿದ್ದೇನೆ."

"ಮಹಮ್ಮದ, ಬಾದಶಹರು ನಿನಗೆ ಮುಕುಟವನ್ನು ಕೊಡುವ ವಿಚಾರವು ನಿನಗೆ ರುಚಿಸಲಿಲ್ಲಾಗಿ ತೋರುತ್ತದೆ!" ಎಂದು ಬೇಗಮ್‌ಳು ಒಳ್ಳೇ ಪ್ರೇಮದ ಹಾವಭಾವವನ್ನು ತಳೆದು ಕೇಳಿದಳು.

ಸುಲ್ತಾನ ಮಹಮ್ಮದನು ಬೇಗಮ್‌ಳಿಗೆ ಪ್ರಣಾಮ ಮಾಡಿ, "ಅತ್ತೆಯವರೆ, ಔರಂಗಜೇಬರಿಗೆ ಈ ಸಂಧಾನದ ವರ್ತಮಾನವು ತಿಳಿದು ಹೋಗಿದೆ. ಕೋಟೆಯ ಬೀಗದ ಕೈಯನ್ನಾಗಲಿ ನನ್ನ ಪ್ರಾಣವನ್ನಾಗಲಿ ಇಂದು ಅವರು ನನ್ನಿಂದ ತೆಗೆದುಕೊಳ್ಳುವರು. ಅದಕ್ಕಾಗಿ ನಾನು ಆ ಬೀಗದ ಕೈಯ್ಯನ್ನು ಬೇಡಿಕೊಳ್ಳಲು ಬಂದಿದ್ದೇನೆ." ಎಂದು ಬೆಸಗೊಂಡನು.

"ಒಳ್ಳೆಯದು! ನಾನು ಕೊಡದಿದ್ದರೂ ಅದನ್ನು ನೀವೆಲ್ಲರೂ ಕೂಡಿ ನನ್ನಿಂದ ಬಲಾತ್ಕಾರವಾಗಿ ತೆಗೆದುಕೊಳ್ಳುವಿರಿ. ಇಕೋ! ಬೀಗದ ಕೈ! ಇದನ್ನು ತೆಗೆದುಕೊಂಡು ಔರಂಗಜೇಬನಿಗೆ ಕೊಡು. ಅವನ ಸಂದರ್ಶನಾಪೇಕ್ಷೆಯು ನನಗೆ ಅಧಿಕವಾಗಿದೆ. ಬೇಗನೆ ಬಂದು ಪುತ್ರಮುಖಸಂದರ್ಶನದ ಲಾಭವನ್ನು ಕೊಡಬೇಕೆಂದು ನಾನು ಹೇಳಿಕೊಂಡಿದ್ದೇನೆಂದು ಆ ನಿಮ್ಮ ತಂದೆಗೆ ತಿಳಿಸುವಿಯಾ?" ಎಂದು ಬಾದಶಹನು ದೀನನಂತೆ ನುಡಿದನು.

ಬೀಗವನ್ನು ತೆಗೆದುಕೊಂಡು ಮಹಮ್ಮದನು ಸಂತುಷ್ಟನಾಗಿ ಮುತ್ತಾತನಿಗೆ ಅನೇಕಾವರ್ತಿ ಮಣಿಮಣಿದು ಪ್ರಣಾಮ ಮಾಡಿ, "ತಾತರೆ, ಔರಂಗಜೇಬ ಸುಲ್ತಾನರಿಗೆ ಬಾದಶಹರ ಚರಣಾರವಿಂದಗಳನ್ನು

ಯಾವಾಗ ಕಾಣುವೆನೋ ಎಂಬ ಉತ್ಕಟವಾದ ಇಚ್ಛೆಯಾಗಿದೆ. ಅವರು ಬೇಗನೆ ತಮ್ಮ ಸನ್ನಿಧಾನಕ್ಕೆ ಬರುವರು.'' ಎಂದು ಹೇಳಿ ಹೊರಟು ಹೋದನು.

ಬಾದಶಹನ ದರ್ಶನವೇ ಔರಂಗಜೇಬನಿಗೆ ಬೇಡಾಗಿತ್ತು. "ನನ್ನನ್ನು ಹಡೆದವನೂ ಬಾಲ್ಯದಲ್ಲಿ ಅತ್ಯಂತವಾಗಿ ಪ್ರೇಮದಿಂದ ಎತ್ತಿ ಮುದ್ದಾಡಿದವನೂ, ಯೌವನದಲ್ಲಿ ನನ್ನ ಸಕಲ ಮನೋರಥಗಳನ್ನು ಪೂರೈಸಿದವನೂ, ಯಾವಾಗಲಾದರೂ ನನಗೆ ವಿರೋಧಿಯಾಗದಿದ್ದವನೂ ಆದ ತಂದೆಯ ಆಜ್ಞೆಯು ಶಾಸ್ತ್ರತಃ ನಿಸರ್ಗತಃ ಅನುಲ್ಲಂಘನೀಯವಾಗಿರ ತಕ್ಕದ್ದಲ್ಲೆ?

ಇಂಥ ಸಮಯದಲ್ಲಿ ಬಾದಶಹನು ನನ್ನನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ಕಣ್ಣಿಗೆ ನೀರು ತಂದು, ಔರಂಗಜೇಬ, ನನ್ನ ಮೋರೆಯನ್ನು ನೋಡಿ ನೀನು ದಾರಾಶಹನ ಬೆನ್ನಟ್ಟಿ ಅವನನ್ನು ಪೀಡಿಸಬೇಡವೆಂದು ಹೇಳಿ ನನ್ನಿಂದ ಪ್ರಮಾಣ ಮಾಡಿಸಿಕೊಂಡರೆ ನಾನು ಮಾಡಿದ ಸಾಹಸವೆಲ್ಲ ಹೊಳೆಯಲ್ಲಿ ಹುಳಿ ತೊಳೆದಂತಾಗುವದಿಲ್ಲವೆ? ಈ ಸುಸಮಯದಲ್ಲಿ ನಾನು ನಾಲ್ಕೇ ದಿವಸ ಮನೆಯಲ್ಲಿ ಕುಳಿತರೆ ದರಾಯುಸನು ಅವಶ್ಯವಾಗಿ ಮತ್ತೆ ಪ್ರಬಲನಾಗುವನು. ಮುಂದೇನು? ಈಗೇನೋ ಕಾಕತಾಲೀಯದಂತೆ ಒಂದು ಜಯವು ಪ್ರಾಪ್ತವಾಯಿತು. ಮುಂದೆ ದಾರಾ ಸುಲೇಮಾನರೀರ್ವರೂ ಕೂಡಿದರೆ ನನ್ನ ಹಣೇಬರವು ಕಾಸಿಗೆ ಪಂಜೇರಾದೀತು! ಅದಕ್ಕಾಗಿ ಬಾದಶಹನ ಸಂದರ್ಶನವೂ ಬೇಡ! ಅವನ ದೀನವಾದ ಮುಖವನ್ನು ನೋಡಿ, ನನ್ನ ಮನಸ್ಸಿನಲ್ಲಿ ಕನಿಕರ ಹುಟ್ಟುವದೂ ಬೇಡ!'' ಎಂದು ಚಿಂತಿಸಿ ಅವನು ತಂದೆಯೊಡನೆ ನಿಷ್ಠುರನಾಗಿಯೇ ನಡಕೊಳ್ಳತಕ್ಕದ್ದೆಂದು ನಿಶ್ಚಯಿಸಿದನು. ಅದಕ್ಕಾಗಿ ಅವನು ತಂದೆಗೆ ಪತ್ರವನ್ನು ಬರೆದದ್ದೇನಂದರೆ:

"ಅನೇಕಾನೇಕ ರಾಜಶಿಖಾಮಣಿಗಳಿಂದ ಪ್ರತಿಬಿಂಬಿತವಾದ ಪಾದಪೀಠವುಳ್ಳವರಾದವರೂ ಭೂಲೋಕವನ್ನಾಳಲು ಪರಮಾತ್ಮನಿಂದ ನಿಯುಕ್ತರಾಗಿ ಬಂದ ಸಾರ್ವಭೌಮರೂ ಆದ ನನ್ನ ಪರಮಪೂಜ್ಯ ತೀರ್ಥರೂಪರ ಪಾದ ಸನ್ನಿಧಾನಕ್ಕೆ—

ಸಾರ್ವಭೌಮರ ಪ್ರೇಮದ ಕುಮಾರನೂ, ದಕ್ಷಿಣದ ಸುಭೇದಾರನೂ, ಆಜ್ಞಾಧಾರಕನಾದ ದಾಸನೂ ಆದ ಔರಂಗಜೇಬನು ಮಾಡುವ ಸಹಸ್ರಾವಧಿ ಪ್ರಣಾಮಗಳು. ತರುವಾಯ ತಮ್ಮ ಪ್ರೇಮವೂ ಅನುಗ್ರಹವೂ ಯಾವಾಗಲೂ ನನ್ನ ಮೇಲೆ ಅಧಿಕವಾಗಿರುವದೆಂದು ಇದುವರೆಗೆ ತಾವು ಹೇಳುತ್ತ ಬಂದಿರಿ. ನನ್ನ ನಂಬಿಗೆಯಾದರೂ ಹಾಗೆಯೇ ಆಗಿತ್ತು. ಆದರೆ ನಿರೀಕ್ಷಿಸಿ ನೋಡಲಾಗಿ ನನಗೆ ವೈರಿಯಾಗಿರುವ ದಾರಾನಲ್ಲಿ ತಮಗೆ ಅಧಿಕವಾದ ಪಕ್ಷಪಾತವಿರುವದಾಗಿ ಕಂಡುಬರುತ್ತದೆ. ನನ್ನನ್ನು ಸಮೂಲವಾಗಿ ನಾಶಗೊಳಿಸಬೇಕೆಂದು ಪಣ ತೊಟ್ಟವನಾದ ಆ ಕಾಫರನಿಗೆ ತಾವು ಜನಸಹಾಯುವನ್ನು ಮಾಡಿಕೊಟ್ಟದ್ದಲ್ಲದೆ ಹೇರಳವಾದ ಹಣವನ್ನಾದರೂ ಪೂರೈಸಿಕೊಟ್ಟಿರೆಂಬ ವರ್ತಮಾನವು ನಿರಾಧಾರವಾಗಿಲ್ಲ. ಹೀಗೆ ಅನುಕೂಲ ಮಾಡಿಕೊಟ್ಟು ಈ ಭಯಂಕರವಾದ ಯುದ್ಧವನ್ನು ನಡಿಸಲು ಬಾದಶಹರೇ ಹೇಳಿದಂತಾಗಲಿಲ್ಲವೆ? ತಾವು ರಾಜಧಾನಿಯಲ್ಲಿ ಕುಳಿತು ಇಂಥ ಘಾತಕವಾದ ಉಪದ್ವ್ಯಾಪಗಳನ್ನು ಮಾಡಿದ ಬಳಿಕ ಈ ಸಮಯದಲ್ಲಿ ನಾನು ಕೆಲಕೆಲವು ನಿಷ್ಠುರವಾದ ಪ್ರತೀಕಾರಗಳನ್ನು ಕಲ್ಪಿಸಿದರೆ ತಮಗೆ ವಿಪರೀತವಾಗಿ ಕಾಣಬಹುದು. ಅದಕ್ಕೆ ನನ್ನ ಯತ್ನವಿಲ್ಲ. ಇದು ವರೆಗೆ ಸಂಭವಿಸಿದ ಅನರ್ಥಗಳಿಗೆ ದಾರಾನೇ ಕಾರಣನಲ್ಲ? ಬಾದಶಹರು ಅವನಿಗೆ ಅನುಕೂಲವಾಗುವದನ್ನು ಕಂಡು ನಾನು ಅವರನ್ನು ನಿರ್ಬಂಧದಲ್ಲಿಟ್ಟರೆ ಆ ನಿರ್ಬಂಧಕ್ಕಾದರೂ ಆ ನಿಮ್ಮ ಪ್ರೀತಿಯ ಮಗನೇ ಕಾರಣನಲ್ಲೇ? ದಾರಾನ ದುರ್ಮಂತ್ರಕ್ಕಾಗಿಯೇ ಇಷ್ಟು ದಿವಸ ನಾನು ನನ್ನ ಹಡೆದ ತಂದೆಯವರ ಪಾದವಂದನದ ಲಾಭಕ್ಕೆ ಎರವಾದೆನಲ್ಲವೆ? ಆಗಲಿ ದಾರಾಶಹನಿಂದ ಇನ್ನು ಮುಂದೆ ಇಂಥ ಅನರ್ಥಗಳಾಗದಂತೆ ಅವನ ಹಲ್ಲು ಚೆನ್ನಾಗಿ ಮುರಿದು ಬಂದ ಬಳಿಕ ನಾನು ತಮ್ಮ ಚರಣಾರವಿಂದಗಳಿದ್ದಲ್ಲಿ ಭ್ರಮರವು ಕಮಲವಿದ್ದೆಡೆಗೆ ಧಾವಿಸಿ ಬರುವಂತೆ ಬಂದು, ತಮ್ಮ ಪಾದಸೇವೆಯಲ್ಲಿದ್ದುಕೊಂಡು ಕೃತಾರ್ಥನಾಗಬೇಕೆನ್ನುವೆನು. ಅಲ್ಲಿಯ ವರೆಗೆ ತಾವು ತಮಗೊದಗಿದ ಬಂದಿವಾಸ ದುಃಖವನ್ನು ವಿಕಾರವಿರಹಿತರಾಗಿ ತಡಕೊಳ್ಳುವಿರೆಂದು ಪಿತೃಭಕ್ತನಾದ ಔರಂಗಜೇಬ ಕುಮಾರನು ಕೋರುತ್ತಾನೆ."

ಆ ಪತ್ರವನ್ನು ಔರಂಗಜೇಬನು ತನ್ನ ಅನುಯಾಯಿಗಳಲ್ಲಿ ಅನೇಕರಿಗೆ ಓದಿ ತೋರಿಸಿ, ಆಮೇಲೆ ಅದನ್ನು ಚೀಲದಲ್ಲಿ ಹಾಕಿ ಅಂಟಿಸಿದನು. ಅದನ್ನು ಓದಿದವರೆಲ್ಲರೂ ಮೋಸಗೊಂಡು ಔರಂಗಜೇಬನು ಮಾಡಿದ್ದೆಲ್ಲ ನ್ಯಾಯವೇ ಎಂದು ನಂಬಿದರು.

ಔರಂಗಜೇಬನು ಇಷ್ಟು ಕಠೋರನಾಗುವನೆಂದು ಶಹಾಜಹಾನನಿಗೆ ಇದು ವರೆಗೆ ತಿಳದಿದ್ದಿಲ್ಲ. ತನ್ನ ಅಧಿಕಾರದ ಇತಿಶ್ರೀಯಾಯಿತೆಂದು ಅವನು ಆಗಲೇ ತಿಳುಕೊಂಡುಬಿಟ್ಟಿದ್ದನು. ಆದರೂ ಹಲಕೆಲವು ಮರ್ಯಾದೆಗಳನ್ನು ತನಗೆ ತೋರಿಕೆಗಾಗಿ ತೋರಿಸಿ, ನಿಜವಾದ ಅಧಿಕಾರವನ್ನು ಔರಂಗಜೇಬನು ಸೆಳಕೊಂಡರೂ ಹೋಗಲೊಲ್ಲದೇಕೆಂದು ಅವನು ತನ್ನ ಮನಸ್ಸು ಗಟ್ಟಿಮಾಡಿಕೊಂಡಿದ್ದನು. ಈ ಪತ್ರವು ಬರುವದರೊಳಗಾಗಿಯೇ ಬೇಗಮ್ ಸಾಹೇಬ ಶಹಾಜಹಾನರು ಒಬ್ಬರನ್ನೊಬ್ಬರು ಕಾಣದಂತೆ ನಿರ್ಬಂಧವಾಗಿತ್ತು. ಮುಮ್‌ತಾಜಮಹಾಲ ಬಾದಶಾಹಿಣಿಯು ತೀರಿಕೊಂಡಾಗಿನಿಂಧ ಆ ವೃದ್ಧನಾದ ಬಾದಶಹನ ಆರೈಕೆ ಮಾಡುವ ಅಂತಃಕರಣದವಳೆಂದರೆ ಬೇಗಮ್ ಸಾಹೇಬಳೊಬ್ಬಳೇ! ಕಳೆದ ಹತ್ತುಹದಿನಾರು ವರ್ಷದಿಂದ ಶಹಾಜಹಾನನು ಆ ತನ್ನ ಪ್ರೀತಿಯ ಮಗಳನ್ನು ಕಾಣದೆ ಅರಗಳಿಗೆಯಾದರೂ ಇರುತ್ತಿದ್ದಿಲ್ಲ. ಈಗ ವೃದ್ಧನೂ, ವ್ಯಾಧಿಗ್ರಸ್ತನೂ, ಚಿಂತಾಕುಲನೂ ಆಗಿರುವ ಆ ಪ್ರಾಣಿಗೆ ಬೇಗಮ್‌ಳನ್ನು ಕಾಣದೆ ಕುರುಡನಂತಾಗಿ ಬಹಳೇ ವ್ಯಥಿತನಾದನು. ಅಂಥ ಸಮಯದಲ್ಲಿ ಔರಂಗಜೇಬನ ಪತ್ರ ಬಂದಿತು. ಅದನ್ನು ಓದಿದಾಕ್ಷಣವೇ ಅವನ ಹೊಟ್ಟೆಯಲ್ಲಿ ಕ್ರೋಧಾಗ್ನಿ ದುಃಖ-ಸಂತಾಪಗಳು ಏಕಕಾಲಕ್ಕೆ ಒತ್ತಿಬಂದವು. ಅವನ ಸರ್ವಾಂಗವೆಲ್ಲ ಕಂಪಿಸಿತು; ಮೋರೆಯು ಕೆಂಪಗೆ ಕೆಂಜಗವಾಯಿತು. ಸಡಿಲಾದ ಹಲ್ಲುಗಳನ್ನು ಅವನು ಕಚಕಚನೆ ಕಚ್ಚಿದನು. "ಸರ್ಪನೆ! ಕಠೋರನೆ! ಕೃತಘ್ನನೆ!" ಎಂದು ಗದ್ದರಿಸಿ ಉದ್ಗಾರ ತೆಗೆದು ಶಹಾಜಹಾನನು ಔರಂಗಜೇಬನ ಪತ್ರವನ್ನು ಕೆಳಗೆ ಚೆಲ್ಲಿ, ಅದೇನು ದುಷ್ಟ ಜಂತುವೋ ಎಂಬಂತೆ ಅದನ್ನು ಕಾಲಿನಿಂದ ಕಚಪಚನೆ ತುಳಿದನು.

ಆವೇಶವೆಲ್ಲ ಇಳಿದು ಹೋದ ಬಳಿಕ ಶಹಾಜಹಾನನು ನಿಃಸತ್ವನಾಗಿ

ಶಾಲು ಮುಸುಕಿಟ್ಟು ಬಿದ್ದುಕೊಂಡನು. ಮುಂದೆ ಕೆಲಹೊತ್ತಿನ ಮೇಲೆ ಎದ್ದರೂ ಅವನು ಏಕಾಕಿಯೇ; ನೀರಡಿಸಿ ಅತ್ತಿತ್ತ ನೀರು ನೋಡಿದನು. ಎಲ್ಲಿಯೂ ಇಲ್ಲ. ಆಗಂತೂ ಅವನಿಗೆ ಪರಮಾವಧಿಯ ವ್ಯಸನವಾಯಿತು. ಭೂಮಂಡಲಕ್ಕೆ ಭೂಮಂಡಲವನ್ನೇ ಅಲ್ಲಾಡಿಸಬಲ್ಲ ವೀರನಾದ ಆ ಬಾದಶಹನು ನೀರಿಗೆ ಪರಾಧೀನನಾದನು!

"ಔರಂಗ! ಔರಂಗ!! ಹಿಂದೂ ಜನರು ಸತ್ತಮೇಲೆಯಾದರೂ ಅವರ ಮಕ್ಕಳು ಅವರಿಗೆ ನೀರು ಕೊಡುತ್ತಾರೆ. ಅವರಿಗೆ ಕಾಫರರೆಂಬ ದುರಾತ್ಮನಾದ ನೀನು ನಿನ್ನ ತಂದೆಯು ಬದುಕಿರುವಾಗ ಕೂಡ ಅವನನ್ನು ನೀರಿಲ್ಲದೆ ಕೊಲ್ಲುವಿಯಾ? ಶಹಾಜಹಾನ್, ನೀನು ಪೂರ್ವಜನ್ಮದಲ್ಲಿಯೂ ಈ ಜನ್ಮದಲ್ಲಿಯೂ ಎಷ್ಟೊಂದು ಪಾಪವನ್ನು ಮಾಡಿದ್ದಿ?" ಎಂದು ನುಡಿದು ಆಕಾಶದ ಕಡೆಗೆ ನೋಡಿ ದೇವರಿಗೆ ಮೊರೆಹೊಕ್ಕನು.

## ೩೬

ಸುಲೇಮಾನ ಶುಕೋನು ಅತಿ ತರಾತುರತೆಯಿಂದ ಸಾಗಿಹೋಗಿ ತನ್ನ ತಂದೆಯನ್ನು ಕೂಡಿ ಔರಂಗಜೇಬನೊಡನೆ ಯುದ್ಧಮಾಡಬೇಕೆಂದು ಅಲ್ಲಾಬಾದದಿಂದ ಹೊರಟನೆಂದು ನಾವು ಹಿಂದೆಯೇ ಹೇಳಿದ್ದೇವೆ. ಆದರೆ ಆಗ್ರಾದ ಅರ್ಧ ಮಾರ್ಗದಲ್ಲಿ ಬರುವಷ್ಟರಲ್ಲಿಯೇ ದಾರಾಶಹರ ಪರಾಭವದ ದುರ್ವಾರ್ತೆ ಬಂದಿತು! ಸುಲೇಮಾನನ ಹೊಟ್ಟೆಯಲ್ಲಿ ವಿಲಕ್ಷಣವಾದ ಕ್ರೋಧಾಗ್ನಿಯು ಹೊತ್ತಿತು. ಸಂಗಡಲೇ ಅವನು ರಾಜಾ ಜಯಸಿಂಗ ಹಾಗೂ ದಿಲೇರಖಾನರನ್ನು ಕರೆಸಿಕೊಂಡು,

"ಕೇಳಿದಿರಾ ಈ ದುರ್ವಾರ್ತೆಯನ್ನು? ಬಳಿಯಲ್ಲಿಯೇ ಕಾಲಿಲುಲ್ಲಾನಂಥ ಕೃಷ್ಣಸರ್ಪವನ್ನಿಟ್ಟುಕೊಂಡು ಮಲಗಿದರೆ ಅದು ಕಚ್ಚಿ ಘಾತವನ್ನು ಮಾಡದಿದ್ದೀತೆ? ರಾಜಾಸಾಹೇಬ, ದಿಲೇರಖಾನಜೀ, ಜಾಗ್ರತೆಯಾಗಿ ನಡೆಯಿರಿ. ನಾವು ತ್ರಿವರ್ಗರು ಕೂಡಿದರೆ ಹತ್ತು ಜನ ಔರಂಗ

ಜೇಬರೂ ನೂರಾರುಜನ ಮುರಾದರೂ ನಮಗೆ ಈಡಲ್ಲ. ಔರಂಗಜೇಬರ ಜಯೋತ್ಸವವು ಮೂರು ರಾತ್ರಿಗಳನ್ನು ಕಾಣುವದರೊಳಗಾಗಿಯೇ ಅವರನ್ನು ಅಲ್ಲಿ ಸಂಪೂರ್ಣವಾಗಿ ಸೋಲಿಸಿ ಗ್ವಾಲೇರಿಯ ಕೋಟೆಯಲ್ಲಿಯ ಒಂದು ಕೋಣೆಯನ್ನು ತೆರವು ಮಾಡಿ ಅವರನ್ನು ಅಲ್ಲಿ ಸುರಕ್ಷಿತವಾಗಿ ಕುಳ್ಳಿರಿಸಿ ನಿರಾತಂಕವಾಗಿ ಅಲ್ಲಾ! ಅಲ್ಲಾ! ಎಂದು ಭಜನೆ ಮಾಡ ಹೇಳೋಣ." ಎಂದು ಬಹು ಉದ್ರೇಕದಿಂದಲೂ ಆಸ್ಥೆಯಿಂದಲೂ ನುಡಿದನು. ಸುಲೇಮಾನನು ಉತ್ತರಕುಮಾರನಾಗಿದ್ದಿಲ್ಲ; ಅವಿಮರ್ಶಕಾರಿಯೂ ಆಗಿದ್ದಿಲ್ಲ. ಅವನು ವೀರಾಗ್ರಣಿಯೂ ಅವನ ಕೈಕೆಳಗಿನ ಸೇನೆಯು ಯುದ್ಧದಲ್ಲಿ ನುರಿತದ್ದೂ ಆಗಿತ್ತು. ರಾಜಾ ಜಯಸಿಂಗ ದಿಲೇರಖಾನರು ಸುಲೇಮಾನನ ಅನುಮತಿಯಿಂದ ನಡೆದಿದ್ದರೆ ಔರಂಗಜೇಬನು ನಿಶ್ಚಯವಾಗಿ ಪರಾಭವವನ್ನು ಹೊಂದುತ್ತಿದ್ದನು. ಬಾಲಕರ ಚವಂಗದ ಆಟದಂತೆ ಕಡಿತದ ಮೇಲೆ ಕಡಿತವಾಗಿ ಔರಂಗಜೇಬನ ಕಡಿತವು ಹಾರಿ ಹೋಗುತ್ತಿತ್ತೆಂಬದರಲ್ಲಿ ಸಂದೇಹವಿದ್ದಿಲ್ಲ. ಆದರೆ ದಿಲೇರಖಾನನು ತನ್ನ ಗಡ್ಡವನ್ನು ತೀಡುವ ನೆವದಿಂದ ನೆಲವನ್ನೇ ನೋಡುತ್ತ ಕುಳಿತನು. ಜಯಸಿಂಗನು ಮೋರೆ ತಿರಿವಿಕೊಂಡು ಕುಳಿತನು. ಈರ್ವರೂ ಪ್ರತ್ಯುತ್ತರವನ್ನು ಕೊಡಲಿಲ್ಲ.

"ಯಾಕೆ ವೀರಕೇಸರಿಗಳೆ, ಎತ್ತಣ ವಿಪರೀತವಾದ ಮೌನವಿದು? ಜಯಪ್ರಾಪ್ತಿಯ ಸಂಶಯವೇ? ನಡೆಯಿರಿ! ನಿಮ್ಮ ಶಿಷ್ಯನಾದ ನಾನೇ ಸಮರಧುರವನ್ನು ಹೊತ್ತು ಸಂಪೂರ್ಣವಾದ ಜಯಪ್ರಾಪ್ತಿಯನ್ನು ಪಡೆದು ನಿಮಗೆ ಗುರುದಕ್ಷಿಣೆ ಕೊಡುವೆನು." ಎಂದು ಆ ತರುಣವೀರನು ತನ್ನ ಖಡ್ಗವನ್ನು ಹಿರಿದು ಬಳ್ಳೇ ಸ್ಫೂರ್ತಿಯಿಂದ ನುಡಿದನು.

ಆದರೂ ಆ ವೃದ್ಧರಾದ ವೀರರು ಮಾತಾಡಲೇ ಇಲ್ಲ. ಸುಲೇಮಾನನು ಬಳ್ಳೇ ಚಕಿತನಾಗಿ,

"ಏನಿದು ಸೇನಾಪತಿಗಳೇ? ಯಾರಾದರೂ ನಿಮಗೆ ಬಾಯ್ತುಡೆ ಮಾಡಿರುವರೇನು?" ಎಂದು ಕಿಂಚಿತ್ ಅಪಹಾಸ ಮಾಡಿ ಕೇಳಿದನು.

"ಹುಜೂರ್, ಸತ್ಯವನ್ನು ಆಡಿದರೆ ತಮಗೆ ನಂಬಿಗೆಯಾಗುವದೋ ಇಲ್ಲವೋ ಎಂಬ ವಿಚಾರದಲ್ಲಿರುವೆನು." ಎಂದು ದಿಲೇರ್‌ಖಾನನು ಕೆಳಗೆ

ಮೋರೆಯನ್ನು ಮಾಡಿಯೇ ನುಡಿದನು.

"ದಿಲೇರ್‌ಖಾನ್, ಸತ್ಯವನ್ನಾಡಲಿಕ್ಕೆ ಹೆದರಿಕೆಯೇ? ನನಗೆ ನಂಬಿಗೆ ಯಾಗದಿದ್ದರೆ, ನಂಬಿಗೆಯಾಗುವಂತೆ ತಿಳಿಸಿ ಹೇಳಿರಿ!"

"ತಿಳಿಸಿ ಹೇಳುವದೇನು? ನಮ್ಮ ಸೇನೆಯು ಮೊನ್ನಿನ ಯುದ್ಧಕ್ಕಾಗಿ ದಣಿದು ಹೋಗಿದೆ. ಈಗಲೆ ನಾವು ಹೊಸ ಯುದ್ಧವನ್ನು ಕೈಕೊಳ್ಳುವದೆಂದರೆ ಸೋತು ಅಪ್ರತಿಷ್ಠೆಯನ್ನೇ ಹೊಂದಿದಂತಾಗುವದು." ಎಂದು ನುಡಿದು ದಿಲೇರ್‌ಖಾನನು ತನ್ನ ವೃದ್ಧಾಪ್ಯದ ಜಂಭವನ್ನು ತೋರಿಸುವದಕ್ಕಾಗಿ ಹುಬ್ಬುಗೈಯಿಕ್ಕಿ ಸುಲೇಮಾನನ ಮುಖವನ್ನು ನೋಡಿದನು.

"ಈ ಮಾತು ಯಾರಿಗೆ ಕಲಿಸುವಿರಿ ದಿಲೇರ್‌ಖಾನ್? ರಣರಂಗಧೀರನ ಮಗನಾದ ನಾನು ಅನೇಕ ಯುದ್ಧಗಳಲ್ಲಿ ವಿಜಯವನ್ನು ಸಂಪಾದಿಸಿರುವೆನು. ನೀರಿನಲ್ಲಿ ಮುದಿ ಮೀನವು ಈಸುವದು ಅಷ್ಟೆಯೇ ಹೊಸ ಮೀನವು ಈಸುವದು ಅಷ್ಟೆಯೆ!!"

"ತಮ್ಮ ಸಮರಕುಶಲತೆಯನ್ನು ನಾನು ಹೀಯಾಳಿಸಲಿಲ್ಲ. ಆದರೂ ನಾವು ಬಾದಶಹರ ದಾಸರು. ಅವರ ಆಜ್ಞೆಯ ಮೇರೆಗೆ ನಡಕೊಳ್ಳತಕ್ಕವರು." ಎಂದು ದಿಲೇರ್‌ಖಾನನು ಕೊಂಚ ಮುನಿದವನಾಗಿ ನುಡಿದನು.

"ಸರದಾರ್, ಬಾದಶಹರ ಆಜ್ಞೆಯ ಪ್ರಮಾಣತ್ವದ ಪ್ರಶ್ನವಿಲ್ಲಿ ಇಲ್ಲ. ಈಗ ನಾನೇ ಈ ಸೇನೆಯ ಸರಲಷ್ಕರನು (ಮುಖ್ಯ ಸೇನಾಪತಿಯು) ನಿಮಗೆ ನನ್ನ ಆಜ್ಞೆಯನ್ನೇ ಮನ್ನಿಸಬೇಕಾಗಿದೆಂಬದನ್ನು ನೀವು ಮರೆಯಲಾಗದು!"

ದಿಲೇರ್‌ಖಾನನು ತನ್ನ ಅಂಗಿಯೊಳಗಿಂದ ಒಂದು ಕಾಗದವನ್ನು ತೆಗೆದು ಅದನ್ನು ಸುಲೇಮಾನನ ಮುಂದಿರಿಸಿ, "ಇದು ನೋಡಿರಿ, ಬಾದಶಹರವರು ತಮ್ಮ ಅಧಿಕಾರವನ್ನು ನಿರಾಕರಿಸಿ, ನನ್ನನ್ನೇ ಸರಲಷ್ಕರನನ್ನಾಗಿ ಆಗ್ರಾಕ್ಕೆ ಬರಲು ಆಜ್ಞಾಪಿಸಿರುವರು. ಉಪಾಯವಿಲ್ಲದ ಮಾತಿಗೆ ನಾನೇನು ಮಾಡಲಿ?" ಎಂದು ಹೇಳಿದನು.

ಆ ಪತ್ರವನ್ನೋದಿದ ಕೂಡಲೆ ಸುಲೇಮಾನನ ಎದೆ ಬಿಚ್ಚಿ ಹೋಳಾ

ಯಿತು. ವಿಸ್ಮಯ ಅಪ್ರತಿಷ್ಠೆ ಒದಗಿಬರುವ ವಿಪತ್ತುಗಳ ಘೋರತರವಾದ ಸ್ವರೂಪಗಳಿಂದ ಅವನ ದೃಷ್ಟಿಯು ಕತ್ತಲೆಗೆಡಿಸಿದಂತಾಗಿ ಅವನಿಗೆ ಕ್ಷಣ ಮಾತ್ರ ಮೂರ್ಛೆ ಬಂತಾಯಿತು. ಸಂಗಡಲೇ ಎಚ್ಚರವನ್ನು ಹೊಂದಿ ಅವನು ಕಣ್ದೆರೆದು ಜಯಸಿಂಗನನ್ನು ಕುರಿತು, "ರಾಜಾಸಾಹೇಬ, ಇದೆಲ್ಲ ನಿಜವೋ?" ಎಂದು ಕೇಳಿದನು.

"ಪ್ರಭುಗಳು ಪ್ರತ್ಯಕ್ಷವಾಗಿ ಕಂಡು, ನನ್ನನ್ನೇನು ಕೇಳುವದು?"

ಬಸ್! ಬಸ್!! (ಸಾಕು! ಸಾಕು!!) ಸುಲೇಮಾನ್ ನೀನೀ ಕುತ್ಸಿತವಾದ ಜಗತ್ತಿನಲ್ಲಿ ಇನ್ನಿರಲಾಗದು!!" ಎಂದು ನುಡಿದವನೇ ಆ ವಿಷಾದಗ್ರಸ್ತನಾದ ರಾಜಕುಮಾರನು ತನ್ನ ಖಡ್ಗವನ್ನೆತ್ತಿ ಕುತ್ತಿಗೆಯ ಮೇಲೆ ಹೊಡಕೊಂಡನು. ಸುಲೇಮಾನನ ಕೃತಿಯನ್ನು ಕಂಡವನೇ ಜಯಸಿಂಗನು ಅದೇ ಕ್ಷಣದಲ್ಲಿ ತನ್ನ ಖಡ್ಗವನ್ನೆತ್ತಿ ರಾಜಕುಮಾರನ ಶಸ್ತ್ರವನ್ನು ನಿವಾರಿಸದಿದ್ದರೆ ಆ ತರುಣನ ಚಂದ್ರಸದೃಶವಾದ ಮುಖವು ಖಂಡಪರಶುವಿನ ರುಂಡಮಾಲೆಯಲ್ಲಿ ಪದಕವಾಗಿ ಹೋಗುತ್ತಿತ್ತು.

"ಇದೇನು ಮಾಡಿದಿರಿ ರಾಜಾಜೀ!" ಎಂದು ಉದ್ಗಾರ ತೆಗೆದು ಸುಲೇಮಾನನು ಕರಕರನೆ ಹಲ್ಲುಕರೆದು ತನ್ನ ಖಡ್ಗವನ್ನು ಒಳಿತಾಗಿ ನೆಲಕ್ಕೆ ಜಡೆದು ಮುರಿದನು. ಆ ಮಹಾ ಶಸ್ತ್ರವು ಆ ಸಮರ್ಥನ ಹೊಡೆತಕ್ಕೆ ಮುರಿದು ತುಂಡುತುಂಡಾಗಿ ಹೋಯಿತು.

"ಸಲಾಮ್ ರಾಜಾಜೀ! ದಿಲೇರಖಾನ್ ಸಾಹೇಬ ಸಲಾಮ್! ನೀವು ಕೂಡಾ ಔರಂಗಜೇಬರ ಸಂಚಿನಲ್ಲಿ ಸೇರಿದ್ದು ಕಂಡು ನನಗೆ ಪರಮಾವಧಿಯ ವಿಷಾದವಾಯಿತು. ರಾಜಾಜೀ ಪ್ರತ್ಯಕ್ಷ ಯಮರಾಜನು ನನಗೆ ಎದುರಾಳಿಯಾಗಿ ಸಮರದಲ್ಲಿ ನಿಂತಿದ್ದರೂ ಈ ಸುಲೇಮಾನನು ಹೆದರಿದವನಲ್ಲ! ಆದರೆ ನಿಮ್ಮಂಥ ರಜಪೂತರು ಕೂಡಾ ಹೀಗೆ ಕೃತಘ್ನರಾಗಿ ವರ್ತಿಸಿದ್ದನ್ನು ಕಂಡು ವಿಷಾದದ ಭರದಲ್ಲಿ ನಾನು ಆತ್ಮಘಾತವನ್ನು ಮಾಡಿಕೊಳ್ಳ ಹೋದೆನು."

"ಮಾಲಿಕ್ (ಒಡೆಯರೆ), ನಾನು ಕೃತಘ್ನನೆ? ನಾನು ಸಂಚಿನಲ್ಲಿ ಸೇರಿದವನೆ?" ಎಂದು ಜಯಸಿಂಗನು ಒಳ್ಳೇ ಜಂಭದಿಂದ ಕೇಳಿದನು.

ಕರಿಶುಂಡದಂತೆ ಪೀನವಾಗಿರುವ ತನ್ನ ಮಹಾಬಾಹುವನ್ನು ಭರ್ರನೆ

ಚಾಚಿ ಹಿಡಿದು ಸುಲೇಮಾನನು ಆವೇಶದಿಂದ ನುಡಿದದ್ದು: "ಈ ಲೇಃ
ವನ್ನು ನೋಡಿರಿ! ಇದು ಬಾದಶಹರ ಹಸ್ತಾಕ್ಷರದ್ದೆ? ಇದು ಬಾ
ಶಹರ ಹಸ್ತಮುದ್ರೆಯೆ? ದುರಾತ್ಮಾ ದಿಲೇರಖಾನ್, ಈ ಕೃತ್ರಿಪ
ನಿನ್ನದಾಗದಿದ್ದರೆ ಮತ್ತಾರದು ಹೇಳು!" ಎಂದು ನುಡಿದವನೇ ಕಠ್ರ
ನಾದ ಆ ತರುಣವ್ಯಾಘ್ರನು ಆ ಮುರಿದ ಖಡ್ಗವನ್ನೇ ಎತ್ತಿ ದಿಲೇರಖಾ
ನನ್ನು ಹೊಡೆಯಹೋದನು. ಆ ನೆವವೇ ಸಾಕಾಗಿ ದಿಲೇರಖಾನನ
ಓಡಿಹೋದವನು ಮರಳಿ ಬರಲಿಲ್ಲ.

"ಪಾಪಿಯು ಹೋದನೆ? ಹೋಗಲಿ! ರಾಜಾಸಾಹೇಬ ಇದ
ಬಾದಶಹರ ಆಜ್ಞಾಪತ್ರವೇ ಅಹುದೇನು?" ಎಂದು ಸುಲೇಮಾನನ
ಕೇಳಿದನು.

"ಯುವರಾಜ, ನೀವು ಶೋಧಿಸಿ ನೋಡಿ ಹೇಳಿದ ಬಳಿಕ ನನಗಾ
ದರೂ ಈ ಪತ್ರದ ನಿಜಸ್ವರೂಪದ ಬಗ್ಗೆ ಸಂಶಯ ಬರುತ್ತದೆ."

"ಚಲೆ ಜಾವ್! (ಎದ್ದು ನಡೆಯಿರಿ!) ಇನ್ನು ಮೇಲೆ ನಿಮ್ಮ
ಮುಖಾವಲೋಕನವು ಕೂಡ ಬೇಡ!" ಎಂದವನೇ ಸುಲೇಮಾನನ
ಬಾಗಿಲದ ಕಡೆಗೆ ಕೈಮಾಡಿ ಜಯಸಿಂಗನಿಗೆ ಹೊರಟು ಹೋಗಲಿಕ್ಕೆ
ಹೇಳಿದನು.

ಸಾಯಂಕಾಲದೊಳಗಾಗಿ ಸುಲೇಮಾನನೂ ಮಹಬೂಬಖಾನನೂ
ಕೂಡಿ ಸಮಾಲೋಚಿಸಿ ಆ ಠಾಣ್ಯದಲ್ಲಿದ್ದ ಸೇನೆಯಲ್ಲಿ ತಮ್ಮನ್ನು ಹಿಂಬಾ
ಲಿಸಿ ಬರುವಷ್ಟು ಸೇನೆಯನ್ನು ಕಟ್ಟಿಕೊಂಡು ಘಾರವಾಲ ಪ್ರಾಂತದ
ಮಾರ್ಗವನ್ನು ಹಿಡಿದು ನಡೆದರು. ಆ ಪ್ರಾಂತದಲ್ಲಿ ಶ್ರೀನಗರವೆಂಬ
(ಕಾಶ್ಮೀರದ ಶ್ರೀನಗರವಲ್ಲ) ಸಂಸ್ಥಾನವಿದ್ದು ಅಲ್ಲಿಯ ರಾಜನು
ದಾರಾಸುಲ್ತಾನನ ಪರಮಪ್ರಿಯನಾದ ಶಿಷ್ಯನೂ ಸುಲೇಮಾನನಲ್ಲಿ
ಅಧಿಕವಾದ ಆದರವುಳ್ಳವನೂ ಆಗಿದ್ದನು. ಅಲ್ಲಿ ಕೆಲಕಾಲ ಕಳೆದು
ಮುಂದೆ ದೈವವು ಅನುಕೂಲವಾದಂತೆ ಮಾಡಬಹುದೆಂದು ಸುಲೇಮಾನನು
ಆಲೋಚಿಸಿಕೊಂಡಿದ್ದನು.

ತನ್ನ ರಾಜ್ಯದಲ್ಲಿ ವೈಭವದಿಂದ ಮೆರೆಯುತ್ತ ಸೈನ್ಯವನ್ನು ಕಟ್ಟಿ
ಕೊಂಡು, ಯುದ್ಧಕ್ಕೆ ಹೊರಟ ಬಾದಶಹನ ಪ್ರೀತ್ಯಾಸ್ಪದನಾದ ಮೊಮ್ಮಗ

ನಿಗೆ ಮಾರ್ಗಕ್ರಮಣದ ಶ್ರಮವೆಲ್ಲಿ? ಅನ್ಯದೇಶದ ರಾಜರಾದರೂ ದಿಲ್ಲಿಯ ಸಾರ್ವಭೌಮನ ಪ್ರತಿನಿಧಿಯ ಪ್ರವಾಸಕ್ಕೆ ಬೇಕಾದ ಅನುಕೂಲತೆಯನು ಮಾಡಿಕೊಟ್ಟೇಕೊಡುತ್ತಿದ್ದರು. ಹಾಗೆ ವೈಭವದಿಂದಲೂ ಉಬ್ಬಿನಿಂದಲೂ ಸಂಚಾರ ಮಾಡಿದ ಸುಲೇಮಾನ ಸುಲ್ತಾನನಿಗೆ ಈ ತನ್ನ ರಾಜ್ಯವೇ ವೈರಿಗಳ ರಾಜ್ಯವಾಗಿತ್ತು. ಮಿತ್ರರೇ ಅಮಿತ್ರರು; ಅವನಿಂದ ಉಪಕೃತರಾದವರೇ ದ್ರೋಹಿಗಳು. ಸಂಪುಷ್ಟದಲ್ಲಿ ಬಂದಿದ್ದ ಪರಿವಾರದೊಂದಿಗೆ ನಡೆದಿರುವ ಆ ರಾಜಕುಮಾರನನ್ನು ಯಾರು ಎತ್ತಿಂದ ಬೆನ್ನಟ್ಟಿ ಬರುವರೋ ಹೇಳದಾಗಿತ್ತು. ಆದರೂ ಸಾವಿರ ಜೀವಿಗಳನ್ನು ನುಂಗಿ ತನ್ನ ಜೀವವನ್ನು ಕೊಡತಕ್ಕವನಾದ ಆ ಬಂಟನು ಧೈರ್ಯದಿಂದ ನಡೆದಿರಲು ಪರಿವಾರದವರಿಗಾದರೂ ಭಯ ಕಡಿಮೆಯಾಗಿ ತೋರಿತು. ಆದರೆ ಅನುಕೂಲತೆ ಸೌಕರ್ಯಗಳೆಲ್ಲಿ? ಸುಲೇಮಾನನು ಸೇನಾಸಮೇತನಾಗಿ ಬರುವನೆಂದು ಮೊದಲಿಗೆಯೇ ತಂಬುಗಳನ್ನು ಹೊಡೆದಿಡುವವರಾರು? ಅವನಿಗಾಗಿ ಸಾಹಿತ್ಯಸಾಮುಗ್ರಿಗಳನ್ನು ಹಿಡುಕೊಂಡು ನಿಂತಿರುವವರಾರು? ಹೊಳೆಹಳ್ಳಗಳನ್ನು ದಾಟಿಸಲು ಬಂದವರಾರು? ಸಮರದಲ್ಲಿ ಘೋರತರವಾದ ಶಸ್ತ್ರಸಂಪಾತಗಳನ್ನು ಸಹಿಸಲು ಸುಲೇಮಾನನು ಹಿಂಜರಿದವನಲ್ಲ; ಹಗಲಿರುಳೆನ್ನದೆ ದೊಡ್ಡ ದೊಡ್ಡ ಪ್ರವಾಸಗಳನ್ನು ಹೇಗೆ ಮಾಡಲಿಯೆಂದು ಅಂದವನಲ್ಲ. ಆದರೆ ಅವನು ಸೌಕರ್ಯ ಅನುಕೂಲತೆಗಳ ಕೊರತೆಯನ್ನು ಕಂಡವನಲ್ಲ. ಮೊನ್ನೆಯ ದಿನ ಹಿಂದುಸ್ಥಾನದ ಭವಿಷ್ಯತ್ ಚಕ್ರವರ್ತಿಯೆಂಬ ವೈಭವದಿಂದ ಮೆರೆದವನಾದ ಆ ರಾಜಪುತ್ರನು ಇಂದು ತುಡುಗಿನಿಂದ ತಿರುಗುವವರಾದ ಅಡವೀಸಂಚರರಂತೆ ಕಡಕಡನೆ ಕಲ್ಲು-ಮುಳ್ಳು ತುಳಿಯುತ್ತೆ ಇಂದು ಸುಖರೂಪವಾಗಿ ಬೆಳಗು ಕಳೆದರೆ ಜೂಗವನ್ನು ಗೆದ್ದೆನೆಂದು ಭಾವಿಸಿಕೊಳ್ಳಬೇಕಾಯಿತಲ್ಲವೆ?

ಶ್ರೀನಗರಕ್ಕೆ ಬರುವದರೊಳಗಾಗಿಯೇ ಕೈಗೆ ಸಿಕ್ಕ ಕೂಳನ್ನು ತಿಂದು ಕಂಡಕಂಡ ನೀರನ್ನು ಕುಡಿದು ನಿದ್ದೆ ವಿಶ್ರಾಂತಿಗಳಿಲ್ಲದೆ ಆ ರಾಜಪುತ್ರನು ಪ್ರಬಲವಾದ ಜ್ವರದ ತಾಪದಿಂದ ಮಲಗಿಕೊಂಡನು. ಒಂದೆರಡು ದಿವಸಗಳ ಪ್ರವಾಸದ ಅರಿವು ಕೂಡಾ ಅವನಿಗಿದ್ದಿಲ್ಲ-

ಶ್ರೀನಗರದ ರಾಜನು ತೋರಿಸಿದ ಅರಮನೆಯಲ್ಲಿ ಸುಲೇಮಾನನ ಬಿಡಾರ ವಾಗಿತ್ತು. ಉಳಿದ ಪರಿವಾರಕ್ಕೆ ಬೇರೆ ಬೇರೆ ಸ್ಥಳಗಳಿದ್ದವು. ಸುಲೇ ಮಾನನು ಜ್ವರಪೀಡಿತನಾಗಿ ಮಲಗಿಕೊಂಡಿದ್ದರಿಂದ ಅವನ ಕಾರಸ್ಥಾನ ಗಳೆಲ್ಲ ಸದ್ಯಕ್ಕೆ ಇದ್ದಕ್ಕಿದ್ದಲ್ಲಿಯೇ ನಿಂತುಹೋದವು. ಪಾಪ ಆವನಿಗೆ ತನ್ನ ಅಸ್ತಿತ್ವದ ಅರಿವೇ ಇಲ್ಲದಾಗ ಮುಂದೇನು ಮಾಡುವನು.

ಜ್ವರ ಕಡಿಮೆಯಾಗಿ ಅವನು ಒಂದು ದಿನ ದಿಂಬಕ್ಕೆ ಆತುಕೊಂಡು ತನ್ನೊಳಗೆ ತಾನು ಆಲೋಚಿಸುತ್ತ ಕುಳಿತಿರುವಾಗ ಆವಳೋ ಓರ್ವ ಯುವನ ಸುಂದರಿಯು ಬಂದು ಅವನ ಮುಂದೆ ಕಷಾಯದ ಬಟ್ಟಲವ ನ್ನಿಟ್ಟು ಹೊರಟುಹೋದಳು. ಸುಲೇಮಾನನು ಚಕಿತನಾಗಿ, "ಯಾರು ಔಷಧ ತಂದವರು?" ಎಂದು ಕೇಳಿದನು. ಉತ್ತರ ಕೊಡಲು ಆ ಮಾನಿನಿಯುಂತೂ ಬರಲೇ ಇಲ್ಲ; ಅವಳಾರೆಂಬದನ್ನು ಹೇಳಲಿಕ್ಕಾದರೂ ಮತ್ತಾರೂ ಬರಲಿಲ್ಲ.

"ಔಷಧವನ್ನು ತಂದು ಕೊಟ್ಟವರು ಯಾರು?" ಎಂದು ಮತ್ತೆ ಆ ಜಡ್ಡಿನವನು ಒಳಿತಾಗಿ ಕೂಗಿ ಕೇಳಿದನು.

ಇವನೀಪರಿ ಒದರಿಕೊಂಡರೆ ದೇಹಕ್ಕೆ ಅಪಾಯುವಾದೀತೆಂಬ ಭೀತಿ ಯಿಂದ "ಯಾರಿಲ್ಲ; ನಾನು." ಎಂದು ಬಹು ಮಂಜುಲವಾದ ಧ್ವನಿ ಯಿಂದ ಅವಳು ಹೇಳಿದಳು.

ರೂಪವತಿಯೂ, ನವತರುಣಿಯೂ, ಮಂಜುಲವಾಣಿಯೂ, ವಿನಯ ಶೀಲೆಯೂ ಆದ ಲಲನೆಯು ನನ್ನ ಆರೈಕೆಗಾಗಿ ಎಲ್ಲಿಂದ ಬಂದಳೆಂದು ವಿಸ್ಮಯುವನ್ನು ತಾಳಿ ಸುಲೇಮಾನನು "ಹಾಗೆಯೇ ನಾನೆಂದರೆ ಹೇಗೆ ತಿಳಿಯಬೇಕು?" ಎಂದು ನಸುನಕ್ಕನು.

"ನಾನು ಶಹಜಾದೆ" ಎಂದು ಆ ತರುಣಿಯು ತನ್ನ ಹೆಸರನ್ನು ಕೂಡಾ ಹೇಳಲು ಲಜ್ಜಿತಳಾಗಿ ಬಹು ಮೆಲ್ಲನೆ ಹೇಳಿದಳು.

"ಶಹಜಾದಾ ಬೇಗಮ್!" ಎಂದು ಒಳ್ಳೆ ಆಶ್ಚರ್ಯಯುತವಾದ ಕಾಕುಸ್ವರದಿಂದ ಕೇಳಿ ಸುಲೇಮಾನನು ತಾನಿದ್ದ ಸ್ಥಳದಿಂದ ಅವಳಿದ್ದಲ್ಲಿಗೆ ಒಂದೇ ಹಾರಿಕೆ ಹಾರಿ ಬಂದು ನಿಂತನು.

"ಅರೆ ಅಲ್ಲಾ! (ಓ ದೇವರೇ!) ದೇಹಕ್ಕೆ ಅಪಾಯು-ಗಿಪಾಯು

ವಾದೀತಲ್ಲ! ಅಶಕ್ತರಾದವರು ಹಾಗೆ ಹಾರಬಹುದೆ?" ಎಂದು ಶಹಜಾದೆಯು ಒಳ್ಳೇ ಮಮತೆಯಿಂದ ಕೇಳಿದಳು.

ಸುಲೇಮಾನನು ಆ ಸುಂದರಿಯಳ ಲಲಿತವಾದ ಹಸ್ತವನ್ನು ಭರದಿಂದ ತನ್ನ ಕೈಯಲ್ಲಿ ತೆಗೆದುಕೊಂಡು, "ಶಹಜಾದಾ, ಪ್ರಿಯ ಶಹಜಾದಾ! ನೀನಿಲ್ಲಿಗೆ ಹೇಗೆ ಬಂದಿ ಹೇಳು?" ಎಂದು ಅಕ್ಕರದಿಂದ ಕೇಳಿದನು.

"ಹೇಗೆ ಬಂದೆನೆಂದರೆ! ಸಂಚಾರ ಮಾಡುತ್ತ ಮಾಡುತ್ತ ಬಂದೆನು."

"ಒಬ್ಬಳೇ?"

"ನಮ್ಮ ರುಸ್ತುಮಖಾನನೊಡನೆ ಬಂದೆನಲ್ಲವೆ?" ಎಂದು ಆ ಮಡದಿಯು ತನ್ನ ಮುದ್ದು ಮೊಗದಲ್ಲಿ ಬಲು ಸವಿಯಾದ ನಗೆಯನ್ನು ತಾಳಿ ತನ್ನ ಇನಿಯನ ಚಲುವಾದ ಮೊಗವನ್ನು ಓರೆಗಣ್ಣಿನಿಂದ ನೋಡುತ್ತ ನುಡಿದಳು.

"ಓಹೋ! ರುಸ್ತುಮಖಾನನೆಂದರೆ ಪುರುಷವೇಷಧಾರಿಣಿಯಾದ ನನ್ನ ಪ್ರಿಯತಮೆಯೋ? ನನಗೆಂದೋ ಸಂಶಯ ಬಂದು ಹೋಗಿತ್ತು. ರುಸ್ತುಮಖಾನನಂಥ ಸುಮುಖವನ್ನು ಮುಂದೆ ಗಡ್ಡಮೀಸೆಗಳನ್ನು ಹೊಚ್ಚಿ ಕೆಡಿಸುವದಕ್ಕಾಗಿ ದೇವರು ನಿರ್ಮಿಸಿರಲಿಕ್ಕಿಲ್ಲವೆಂಬ ತರ್ಕವನ್ನು ಅವನನ್ನು ಕಂಡ ದಿವಸವೇ ನಾನು ಮಾಡಿದೆನು."

"ಸಾಕು ಸಾಕು! ಗಡ್ಡ-ಮೀಸೆಗಳನ್ನು ತರಿಸಿದಂಥ ಮುಖದ ಸೌಂದರ್ಯವನ್ನಾದರೂ ಬಲ್ಲವರೇ ಬಲ್ಲರು." ಎಂದು ಆ ನಿಪುಣೆಯು ನುಡಿದು ಮೆಲ್ಲನೆ ನಕ್ಕಳು.

ಸುಲೇಮಾನನು ಶಹಜಾದಾ ಸುಂದರಿಯ ಮುಖಕಮಲವನ್ನು ಮೆಲ್ಲನೆ ಚುಂಬಿಸಿ, ಅವಳನ್ನು ಕುಳ್ಳಿರಿಸಿ, "ಪ್ರಿಯೆ, ನೀನು ನನ್ನೊಡನೆ ಇಲ್ಲಿಗೇನು ಕಾರಣ ಬಂದೆ? ರುಸ್ತುಮಖಾನನೆಂದರೆ ನೀನೇ ಎಂದು ನನಗೆ ತಿಳಿದಿದ್ದರೆ ನಿನ್ನನ್ನು ಅಲ್ಲಾಬಾದದಿಂದ ಆಗ್ರಾಕ್ಕೆ ಅಟ್ಟಿ ನಾನೀ ವನವಾಸಕ್ಕೆ ಬರುತ್ತಿದ್ದೆನು." ಎಂದು ಉಸುರ್ಗರೆದು ಮಾತಾಡಿದನು.

"ಇತ್ತಕಡೆಯ ಸಮಾಚಾರಗಳನ್ನು ಅರಿಯಗೊಡದಂತೆ ನನ್ನನ್ನು ಆಗ್ರಾಕ್ಕೆ ಅಟ್ಟಿ ಚಿಂತಾಗ್ನಿಯಲ್ಲಿ ನನ್ನ ಎದೆಯನ್ನು ಬೇಯಿಸಬೇಕೆಂಬ

ವಿಚಾರವಿತ್ತೇನು?"

"ಪ್ರಿಯೆ, ಇಲ್ಲಿಯಾದರೂ ಏನಿದೆ? ದಾರಿದ್ರ್ಯ, ಖೇದ, ಚಿಂತೆ ಅಪ್ರತಿಷ್ಠೆಗಳ ಪ್ರತ್ಯಕ್ಷವಾದ ತಾಪಗಳಿಂದಲೂ ದೂರದಲ್ಲಿ ಕಣ್ಣು ಮುಚ್ಚಿ ಕೊಂಡು ಕುಳ್ಳಿರುವದು ಒಳಿತಲ್ಲವೆ?"

"ಪ್ರೇಮುದರಸೆ, ನಾರಿಯರ ಮನಸ್ಸಿನಲ್ಲಿಯ ಸುಖದ ಕಲ್ಪನೆ, ವಿಶುದ್ಧವಾಗಿರುವ ಅವರ ಪ್ರೇಮದ ನಿರ್ಝರ, ಅವರಲ್ಲಿ ಕಂಡು ಬರುವ ರಮಣಾರಾಧನ ತತ್ಪರತೆ, ಸ್ವಾರ್ಥರಹಿತವಾದ ಪತಿಭಕ್ತಿ ಮುಂತಾದ ಗುಣಗಳ ಈಯತ್ತೆಯು ಕುಲವಧುಗಳ ಹೊಟ್ಟೆಯನ್ನು ಹೊಕ್ಕಹೊರತು ಪುರುಷನಿಗೆ ಕಂಡುಬರುವ ಬಗೆ ಹೇಗೆ? ಮಂಗಲ ಚರಿತೆಯರ ಆಚರಣಗಳಿಂದಲೂ ಹಿತದಿಂದ ಅವರು ಬೇರೆ ನಾರೀ ಜನರಿಗೆ ಮಾಡಿದ ಉಪದೇಶಗಳಿಂದಲೂ ಪತಿವ್ರತೆಯಾದ ಹೆಂಡತಿಯ ಸಹವಾಸದಿಂದಲೂ ಮಾರ್ಮಿಕರಾದ ಪುರುಷರಿಗೆ ಉದಾರಚರಿತೆ ಯರಾದ ಮಾನಿನಿಯರ ಅಂತರಂಗವೆಂತಿರುವದೆಂಬದರ ಕಲ್ಪನೆ ಯಾಗಬಹುದು. ಉಳಿದವರು ಬಹಿರಂಗಕ್ಕೆ ಮೋಸಹೊಂದಿ ಸುವರ್ಣಕ್ಕೆ ಹಿತ್ತಾಳಿಯೆಂದೂ, ಹಿತ್ತಾಳಿಗೆ ಸುವರ್ಣವೆಂದೂ ಹೇಳಿ ನಿಜವಾದ ಸುಖಕ್ಕೆ ಎರವಾಗುತ್ತಾರೆ. ಯುವರಾಜ, ನೀವು ನನ್ನ ಅಂತರಂಗ ವನ್ನರಿಯದೆ ಬುದ್ಧಿಯ ಮಾತು ಹೇಳಬಂದಿರಿ. ವೈಭವದ ಕಾಲದಲ್ಲಿ ಪ್ರಿಯನೊಡನೆ ಚಕ್ಕಂದಾಡಿ ಲೀಲಾವಿಲಾಸಗಳಲ್ಲಿ ಅವನನ್ನು ತೊಳಲಿ ಸುವದು ವನಿತೆಯರಿಗೆ ವಿನೋದಾಸ್ಪದವಾದ ವಿಷಯವಾಗಿರುವಂತೆ ಆಪತ್ಕಾಲದಲ್ಲಿ ಅವರು ತಮ್ಮ ಸುಕುಮಾರತೆಯನ್ನು ಕಟ್ಟಿಟ್ಟು ಶ್ರಮ ಸಂಕಟ ಹಾನಿಗಳನ್ನು ಲೆಕ್ಕಿಸದೆ ಪ್ರಿಯನಿಗುಂಟಾದ ಮನಸ್ತಾಪ, ಅನನು ಕೂಲತೆಗಳನ್ನು ನಿವಾರಿಸಿ ಅವನ ಜೀವಕ್ಕೆ ಸಮಾಧಾನವಾಗುವಂತೆ ಸೇವೆ ಮಾಡಿಕೊಂಡಿರುವದು ನಿಸರ್ಗಜನ್ಯವಾದ ನಮ್ಮ ಗುಣವು, ಅದೇ ನಮ್ಮ ಕರ್ತವ್ಯವು, ಅದರಲ್ಲಿಯೇ ನಮ್ಮ ಪ್ರತಿಷ್ಠೆಯು" ಎಂದು ಗಾಂಭೀರ್ಯ ದಿಂದ ನುಡಿದ ಶಹಜಾದೆಯ ದಿವ್ಯ ಮೂರ್ತಿಯು ಪುರುಷರ ಸುಕೃತ ಸರ್ವಸ್ವದ ನಿಧಿಯಂತೆ ಶೋಭಿಸಿತು.

"ಪುಣ್ಯಾತ್ಮಿಯಾದ ನನ್ನ ಶಹಜಾದೆಯೆ, ನಿನ್ನಂಥ ಅಪರೂಪ

ವಾದ ರತ್ನವು ಭಾಗ್ಯಶಾಲಿಯಾದ ಒಬ್ಬ ಪುರುಷನ ಮನೆಯನ್ನು ಅಲಂಕರಿಸಬೇಕಲ್ಲದೆ ಹಗೆಯಲ್ಲಿ (ಧಾನ್ಯಕೂಪದಲ್ಲಿ) ಇಳಿಬಿಟ್ಟ ದೀಪದಂತೆ ನಾರೀಕುಲದೀಪಕಳಾದ ನೀನು ಅಪಾತ್ರನಾದ ನನ್ನನ್ನು ಆಶ್ರಯಿಸಿ ವಿನಾಶವನ್ನು ಹೊಂದುವಿ."

"ಸುಲ್ತಾನ ಸುಲೇಮಾನ್ ಶಹಾ, ಇಂಥ ಅನುದಾರವಾದ ವಾಕ್ಯವನ್ನುಚ್ಚರಿಸಿ ನೀವು ನಮ್ಮ ಮಾನಿನೀ ಮಾರ್ಗದ ನಿಂದೆಯನ್ನಾಡಿದಿರಿ! ಸಂಪತ್ತು ಬಂದಾಗ ಕತ್ತೆಯಾದರೂ ಒಳ್ಳೇ ಸಡಗರದಿಂದ ಮೆರೆಯಬಲ್ಲದು. ಆದರೆ ಆಪತ್ಕಾಲ ಬಂದಾಗ, ಹೆದರದೆ ಸ್ಥೈರ್ಯದಿಂದಿದ್ದುಕೊಂಡು ಸ್ವಕರ್ತವ್ಯಗಳನ್ನು ಮಾಡುತ್ತಲೂ, ಕೃತಸಂಕಲ್ಪಗಳನ್ನು ಕೊನೆಗಾಣಿಸುತ್ತಲೂ ಪ್ರಾಣೇಶ್ವರನಲ್ಲಿಟ್ಟ ನಿಶ್ಚಲವಾದ ಪ್ರೇಮವನ್ನು ಎಳ್ಳಷ್ಟಾದರೂ ಅದರಗೊಡದೆಯೂ ಇರುವ ಮಾನಿನಿಯ ಭಾಗ್ಯವು ಎಲ್ಲರಿಗೂ ಬಾರದು; ಅಂಥ ಉದಾರಚರಿತೆಯರ ವರ್ಣನೆಯಿಲ್ಲದ ಇತಿಹಾಸವನ್ನು ಓದಿ ಫಲವೇನು? ಅಂಥವರ ಸ್ತುತಿಗೀತಗಳಿಲ್ಲದ ಕಾವ್ಯಕ್ಕೆ ಮಹಾತ್ಮವೆಲ್ಲಿ? ಅಂಥವರ ಮಾಲಿಕೆಯಲ್ಲಿ ಸೇರುವ ಸುಸಂಧಿಯು ಆಯತ್ತವಾಗಿ ಪ್ರಾಪ್ತವಾಗುವ ಕಾಲದಲ್ಲಿ ನಾನದನ್ನು ಕಳಕೊಳ್ಳಲಿಯಾ?"

"ಸಾಧು! ಸಾಧು! ಪ್ರಿಯೇ ನಿನ್ನಂಥ ಗುಣಮಣಿಯಾದ ಸುಂದರಿಯ ಮುಖಚಂದ್ರವನ್ನು ಸಾರ್ವಭೌಮಿನಿಯ ಮುಕುಟದಿಂದ ಅಲಂಕರಿಸಲು ನಾನು ಸರ್ವಥಾ ಸಮರ್ಥನೆಂದು ನಂಬಿ ನಿನ್ನ ಪ್ರೇಮವನ್ನು ಸೆಳಕೊಂಡವನು." ಎಂದು ನುಡಿದು, "ಅಯ್ಯೋ ದುರ್ದೈವವೆ!" ಎಂದು ನಿಟ್ಟುಸುರಿಟ್ಟನು.

"ಪ್ರಿಯರೆ, ಹಾಗೆ ವಿಷಾದಕ್ಕೆ ಈಡಾಗಬೇಡಿರಿ. ಮುಕುಟವೇ ಬೇಕೆಂದು ನಾನು ಈ ಪಾದಸೇವೆಯನ್ನು ಬಯಸಲಿಲ್ಲ. ಮಧ್ಯಮ ಸ್ಥಿತಿಯಲ್ಲಾದರೂ ನಾನು ಧನ್ಯಳೇ ಆಗಿರುವೆನು."

"ಶಹಜಾದಾ, ಅತ್ಯುಚ್ಚವಾದ ಸ್ಥಾನದಿಂದ ಚ್ಯುತನಾದವನಿಗೆ ಮಧ್ಯಮ ಸ್ಥಿತಿಯು ಬೇಡಿಕೊಂಡರೂ ಬಾರದು. ಅಧಃಪಾತವೇ ಅವನಿಗೆ ಮುನ್ನೊಂದು ಗತಿಯು!"

"ಆಗಲಿ! ತಮ್ಮಂಥ ಪ್ರತಾಪನಿಧಿಗಳ ಪಾದಸ್ಪರ್ಶದಿಂದ ಆ

ಅಧಃಪಾತವೇ ಮಹಾ ಕವಿಗಳ ಕವನಕ್ಕೆ ಯಥೇಷ್ಟವಾದ ಭೂಮಿ-ಯಾಗುವದು."

ಹೀಗೆ ಅವರೀರ್ವರೂ ಉದಾತ್ತವಾದ ಸಂಭಾಷಣವನ್ನು ಮಾಡುತ್ತ ಕುಳಿತಿರುವಾಗ್ಗೆ ಮಹಬೂಬಖಾನನು ಸುಲೇಮಾನನೊಡನೆ ಕೇವೊಂದು ಮಹತ್ವದ ವಿಷಯವನ್ನು ಕುರಿತು ಆಲೋಚಿಸಲು ಬಂದನು. ಶಹಜಾರ್ದೆಯು ನಾಚಿಕೊಂಡು ಅಂತರ್ಗೃಹಕ್ಕೆ ಓಡಿದಳು.

## ೩೭

### प्रायो गच्छति यत्र भाग्यरहितः तत्रैव यान्त्यापदः ॥

ದಾರಾ ಸುಲ್ತಾನನು ಆಗ್ರಾಪಟ್ಟಣವನ್ನು ಬಿಟ್ಟು ದಿಲ್ಲಿಯ ಮಾರ್ಗವನ್ನು ಹಿಡಿದು ಎದ್ದು ಹೋದನೆಂದು ಹಿಂದೆ ಹೇಳಿದ್ದೇವೆ. ಸತ್ತು ಕೆಟ್ಟು ಅವನು ದಿಲ್ಲಿಯ ಸಮೀಪದಲ್ಲಿ ಬರುವದರೊಳಗಾಗಿಯೇ ದಿಲ್ಲಿಯ ಪರಿಸ್ಥಿತಿಯು ವಿಪರೀತವಾಗಿಹೋಗಿತ್ತು. ದಿಲ್ಲಿಯ ಸುಭೇದಾರನು ದಾರಾನ ಕೃಪೆಯಿಂದಲೇ ಮುಂದಕ್ಕೆ ಬಂದವನಾಗಿದ್ದರೂ ತಾನು ಔರಂಗಜೇಬನ ಮತಾನುಯಾಯಿಯಾಗಿ ವರ್ತಿಸುವದೇ ಹಿತವೆಂದರಿತು ತನ್ನ ಹಿತಕರ್ತೃವಿಗೆ ವಿರೋಧಿಯಾದನು. ಆ ರಾಜಪುತ್ರನು ದಿಲ್ಲಿಗೆ ಬಂದ ಕೂಡಲೆ ಮೇಲುಪಚಾರಗಳನ್ನು ತೋರಿಸಿ, ಅವನನ್ನು ಸೆರೆ ಹಿಡಿಯಬೇಕೆಂಬ ವಿಚಾರದಲ್ಲಿ ಆ ಸುಭೇದಾರನಿದ್ದನು. ಆದರೆ ಸಜ್ಜನನಾದ ಸರದಾರನೋರ್ವನು ಗುಪ್ತಚಾರನ ಮುಖಾಂತರವಾಗಿ ಸುಭೇದಾರನ ದುಷ್ಟ ವಿಚಾರಗಳನ್ನು ದಾರಾನಿಗೆ ತಿಳಿಸಿದನಾದ್ದರಿಂದ ಆ ರಾಜಪುತ್ರನು ನಿರುಪಾಯನಾಗಿ ಲಾಹೋರದ ಮಾರ್ಗವನ್ನು ಹಿಡಿದನು. ಬೇಗಮ್ ಸಾಹೇಬಳು ದಾರಾನಿಗಾಗಿ ಹೊನ್ನು ಹೇರಿ ಕಳಿಸಿದ ಆನೆಗಳಲ್ಲಿ ಒಂದು ಔರಂಗಜೇಬನ ಸೈನಿಕರ ಕೈಗೆ ಸಿಕ್ಕಿತು. ದಾರಾನ ಸಹಾಯ್ಯಾರ್ಥವಾಗಿ ಹೊರಟ ಜನರು ಅವನಿರುವ ಸ್ಥಾನವನ್ನರಿಯದೆ ಎತ್ತಲೋ ದಿಕ್ಕೆಟ್ಟು ನಡೆದಿದ್ದರು. ವಿಶ್ರಾಂತಿಯಂತೂ ಆ ಯುವರಾಜನಿಗೆ ಇಲ್ಲದಾಗಿ ದಣಿದು

ಬಳಿದು ಅವನು ಲಾಹೋರಿಗೆ ಬಂದು ಬೀಳುವದರೊಳಗಾಗಿಯೇ ಔರಂಗ ಜೇಬನು ಪ್ರಬಲವಾದ ಸೇನೆಯನ್ನು ಕಟ್ಟಿಕೊಂಡು ದಿಗ್ಗನೆ ಅವನ ಎದೆಯ ಮೇಲೆ ಬಂದಂತೆ ಆ ಪಟ್ಟಣದ ಸಮೀಪದಲ್ಲಿಯೇ ಬಂದನು.

ಮತ್ತೆ ಆ ಸ್ಥಳವನ್ನು ಬಿಟ್ಟು ದಾರಾಶಹನು ಮುಲ್ತಾನದ ಮಾರ್ಗ ಹಿಡಿದು ಓಡಲಾರಂಭಿಸಿದನು. ಅಲ್ಲಿಯೂ ಔರಂಗಜೇಬನು ಅವನ ಬೆನ್ನು ಬಿಡಲಿಲ್ಲ. ದಾರಾನು ಮುಲ್ತಾನಕ್ಕೆ ಹೋಗಿದ್ದರೆ ನಿಶ್ಚಯವಾಗಿ ಅಂದೆಯೇ ಅವನಿಗೆ ನೂರು ವರ್ಷಗಳು ತುಂಬಿಹೋಗುತ್ತಿದ್ದವು. ಆದರೆ ಜಾಣನಾದ ಆ ಸೇನಾನಿಯು ಮುಲ್ತಾನದ ಉಸಾಬರಿಯನ್ನು ಬಿಟ್ಟು ರಾತ್ರಿಯ ಕಾಳಿನಲ್ಲಿ ಎದ್ದು ಟಟ್ಟಾಬಕರ ಕೋಟೆಯ ಮಾರ್ಗ ಹಿಡಿದು ಪಾರಾಗಿ ಹೋದನು. ಅಲ್ಲಿ ಮಾತ್ರ ಅವನಿಗೆ ವಿಶ್ರಾಂತಿ ಸಮಾಧಾನ ಗಳು ದೊರೆತವು.

ಪರಾಜಿತನಾದ ದರಾಯುಸನಿಗೆ ಜನರು ಬಹಿರಂಗವಾಗಿ ಸಹಾಯ ಮಾಡದಿದ್ದರೂ ಉದಾರಭಾವದವರಾದ ಕೆಲಜನ ಸರದಾರರು ಗುಪ್ತ ರೀತಿಯಿಂದ ಆ ಯುವರಾಜನಿಗೆ ಕೃತಜ್ಞತಾಪೂರ್ವಕವಾಗಿ ಜನಸಹಾಯ ವನ್ನೂ ಧನಸಹಾಯವನ್ನೂ ಮಾಡಿದ್ದರಿಂದ ಟಟ್ಟಾ ಕೋಟೆಯಲ್ಲಿ ಸುಲ್ತಾನ ದರಾಯುಸನ ಧ್ವಜದ ಸುತ್ತಲೂ ಶೂರರಾದ ಏಳೆಂಟು ಸಹಸ್ರ ಜನ ಸೈನಿಕರು ನೆರೆದರು. ಟಟ್ಟಾ ಕೋಟೆಯು ಅಧಿಕವಾಗಿ ಭದ್ರ ಮಾಡಲ್ಪಟ್ಟಿತು. ಮುಲ್ತಾನವನ್ನು ಬಿಟ್ಟು ಇನ್ನು ಮುಂದೆ ದಾರಾನ ಬೆನ್ನಟ್ಟಿ ಹೋಗುವದು ತನಗೇ ಕ್ಷೇಮವಾಗಲಿಕ್ಕಿಲ್ಲೆಂದು ನಂಬಿ ಔರಂಗ ಜೇಬನು ಅಲ್ಲಿಯೇ ನಿಂತುಕೊಂಡನು. ದಾರಾನಿಗೆ ತಲೆಯ ಮೇಲಿನ ಭಾರವು ಹೆಗಲ ಮೇಲೆ ಬಂದಂತಾಗಿ ಅವನು ದುಗುದುಗಿ ಇಲ್ಲದೆ ಮುರಿದು ಹೋಗಿರುವ ತನ್ನ ಆಟವನ್ನು ಮತ್ತೆ ವ್ಯವಸ್ಥಿತವಾಗಿ ಹೂಡ ಲಾರಂಭಿಸಿದನು.

ಇಷ್ಟಾಯಿತು! ಇನ್ನು ಮುಂದೇನು ಮಾಡಬೇಕೆಂದು ಆ ಸುಲ್ತಾ ನನು ತನ್ನ ಪರಿವಾರದವರನ್ನು ಕೂಡಿಕೊಂಡು ಆಲೋಚಿಸಿದನು. ಈಗಲೇ ಮುಲ್ತಾನದ ಮೇಲೆ ಸಾಗಿಹೋಗಿ ಔರಂಗಜೇಬನನ್ನು ಸೋಲಿಸಿ ಅವ ನನ್ನು ಸೆರೆ ಹಿಡಿಯಬೇಕು; ಆಯತ್ತವಾಗಿ ಸಿಕ್ಕಿದ್ದಾನೆಂದು ಕೆಲ ಜನ

ಹುಂಬರು ಸೂಚಿಸಿದರು. ನವಾಬ ರಹಿಮುಖಾನನೆಂಬ ವೃದ್ಧನಾದ ಸರದಾರನು ಕಾಬೂಲ ಪ್ರಾಂತಕ್ಕೆ ಹೋಗತಕ್ಕದ್ದೆಂದು ಅಭಿಪ್ರಾಯಪಟ್ಟನು. ಮೊಹಬತ್ತಖಾನನೆಂಬ ದಾರಾನ ಪ್ರಿಯಸಖನಾದ ಸರದಾರನು ಕಾಬೂಲ ಪ್ರಾಂತದಲ್ಲಿ ಕರ್ತುಂ ಅಕರ್ತುಂ ಶಕ್ತಿಯುಳ್ಳವರು ಪಠಾಣ, ಉಸಬೆಗ್, ತಾರ್ತರ ಮುಂತಾದ ಜನಾಂಗದವರು ಮೊಹಬತ್‌ಖಾನನ ಗುಣಾನುರಕ್ತರಾದ್ದರಿಂದ ಅಲ್ಲಿ ದೊಡ್ಡದೊಂದು ಸೇನೆಯು ನಿರ್ಮಾಣವಾಗುವಂತೆ ಇತ್ತು.

ಕಾಬೂಲಕ್ಕೆ ನಾವು ಹೋದರೆ ಹಿಂದುಸ್ಥಾನದ ಹೊರಗೆಯೇ ಹೋದಂತಾಗುವದು. ಹಾಗೆ ಮಾಡಿದರೆ ಶತ್ರುಗಳು ಬಯಸಿದ್ದನ್ನೇ ನಾವು ಮಾಡಿದಂತಾಗಲಿಕ್ಕಿಲ್ಲವೇ? ಖೈಬರ ಬುಲಾನ ಘಟ್ಟಗಳ ಮಾರ್ಗಗಳನ್ನು ನಮ್ಮ ಶತ್ರುಗಳು ಕಟ್ಟಿಕೊಂಡು ನಿಂತರೆ ನಮ್ಮ ಕಥೆಯೇ ಮುಗಿದಂತಾಗುವದು. ನಾವೇ ಕಣ್ಮರೆಯಾಗಿ ಹೋದ ಬಳಿಕ ನಮ್ಮ ಪಕ್ಷದವರಲ್ಲಿಯು ಅಭಿಮಾನವು ಹಳಿಸಿಹೋಗುವದು. ಏಕಾಕಿಯಾದ ಸುಲೇಮಾನನ ಗತಿಯೇನಾಗುವದೋ ಯಾರು ಹೇಳಬಲ್ಲರು? ಹಿಂದುಸ್ಥಾನದಲ್ಲಿಯೇ ನಾವಿದ್ದುಕೊಂಡರೆ ರಾಜಾ ಜಸವಂತಸಿಂಗರೂ ಸುಲೇಮಾನಶಹನೂ ನಮ್ಮನ್ನು ಕೂಡಿಕೊಳ್ಳುವರು. ನಾವು ತ್ರಿವರ್ಗರು ಕಲೆತರೆ ಶತ್ರುನಾಶವಾಗುವದು ಸಹಜವಾದ ಮಾತು. ಸುಜಾ ಸುಲ್ತಾನನು ಬಂಗಾಲದಲ್ಲಿ ಹೂಲಿಯನ್ನೆಬ್ಬಿಸಿದ್ದಾನೆ. ಅದಕ್ಕಾಗಿ ಔರಂಗಜೇಬನ ಪಕ್ಷದಲ್ಲಿ ಪ್ರಮುಖರೆಂಬವರು ಬಂಗಾಲದಲ್ಲಿ ತೊಡಕಿರಲೇಬೇಕಾಗಿದೆ. ಈ ಪ್ರಸಂಗದಲ್ಲಿ ನಾವು ಗುಜರಾಥದ ಮೇಲೆ ಸಾಗಿ ಹೋಗಿ ಅಹಮ್ಮದಾಬಾದ ಕೋಟೆಯನ್ನು ಹಿಡುಕೊಂಡರೆ ಅರ್ಧ ಕೆಲಸವಾದಂತಾಗುವದು." ಎಂದು ದಾರಾಸುಲ್ತಾನನ ಅಭಿಪ್ರಾಯವಾಯಿತು.

ಬಂಗಾಲದಲ್ಲಿ ಸುಜಾ ಸುಲ್ತಾನನು ಪ್ರಬಲನಾಗಿ ಆಗ್ರಾದ ಮೇಲೆ ಸಾಗಿಬರುವನೆಂದೂ ರಾಜಾ ಜಯಸಿಂಗನಾದರೂ ಅಲ್ಲಿಗೇ ಸಾಗಿಬಂದು ಬಂದಿಯಾಗಿದ್ದ ಬಾದಶಹನನ್ನು ಬಿಡಿಸುವ ವಿಚಾರದಲ್ಲಿರುವನೆಂದೂ ಸುದ್ದಿಯನ್ನು ಕೇಳಿ ಔರಂಗಜೇಬನು ದಾರಾನ ಉಸಾಬರಿಯನ್ನು ಬಿಟ್ಟುಕೊಟ್ಟು ರಾಜಧಾನಿಯ ಹಾದೀ ಹಿಡಿದು ನಡೆದನು. ಇತ್ತ ದಾರಾ

ಶಹನು ತನ್ನ ಧನಕನಕ ಸತಿಸುತರನ್ನು ಟಟ್ಟಾ ಕೋಟೆಯಲ್ಲಿ ನವಾಬ ರಹಿಮಾನಖಾನನ ರಕ್ಷಣದಲ್ಲಿಟ್ಟು ಸೇನೆಯನ್ನು ತೆಗೆದುಕೊಂಡು ಅಹ ಮ್ಮದಾಬಾದದ ಮೇಲೆ ಸಾಗಿಹೋದನು. ಅಲ್ಲಿಯ ಕಿಲ್ಲೇದಾರನಾದ ಶಹಾ ನವಾಜಖಾನನೆಂಬ ಸರದಾರನು ಔರಂಗಜೇಬನಿಗೆ ಹೆಣ್ಣು ಕೊಟ್ಟಿ ದ್ದನಾದ್ದರಿಂದ ಅವನಿಗೆ ಆ ಅಧಿಕಾರವು ಪ್ರಾಪ್ತವಾಗಿತ್ತೇ ಹೊರತಾಗಿ ಯುದ್ಧಕಲೆಯ ಜ್ಞಾನವು ಅವನಿಗೆ ಇದ್ದಿಲ್ಲ. ದಾರಾನ ಅಭಿಯೋಗಕ್ಕೆ ಹೆದರಿ ಶಹಾನವಾಜನು ಕೋಟೆಯನ್ನು ಆ ರಾಜಪುತ್ರನ ಸ್ವಾಧೀನ ಮಾಡಿ ತನ್ನ ಮೇಲೆ ಬಂದ ಸಂಕಟವನ್ನು ಕಳಕೊಂಡನು.

ಗುಜರಾಥದಲ್ಲಿ ದಾರಾನು ತನ್ನ ಸೈನ್ಯವನ್ನು ಬೆಳೆಸಿದನು. ತಕ್ಕ ಮಟ್ಟಿಗೆ ಧನವೂ ಕೂಡಿತು. ನೆರೆಯವನಾದ ಕಚ್ಛದ ರಾವನು ತನ್ನ ಕೈಯಿಂದಾದಷ್ಟು ಅವನಿಗೆ ಸಹಾಯ ಮಾಡಲು ವಚನಕೊಟ್ಟನು. ಪೋರ್ತುಗೀಜ ಫ್ರೆಂಚ ಜನರು ದಾರಾನ ಸೈನ್ಯದಲ್ಲಿ ಸೇವೆಗೆ ನಿಂತು ತೋಫು ಮದ್ದುಗಳ ಕೆಲಸವನ್ನು ಒಳ್ಳೇ ವ್ಯವಸ್ಥೆಯಿಂದ ಮಾಡಲು ಸಿದ್ಧ ರಾದರು. ಜೋಧಪುರದ ರಾಜಾ ಜಸವಂತಸಿಂಗನಾದರೂ ತನ್ನ ಸ್ವಾಮಿ ಯಾದ ಶಹಾಜಹಾನ ಬಾದಶಹನ ಜ್ಯೇಷ್ಠಪುತ್ರನಿಗೆ ಸಹಾಯ ಮಾಡ ದಿದ್ದರೆ ಇನ್ನಾರಿಗೆ ಮಾಡಬೇಕೆಂದು ಹೇಳಿ ತಾನಾಗಿ ದಾರಾನ ಬಳಿಗೆ ಬಂದು ಸಹಾಯ ಮಾಡುವೆನೆಂದು ಹೇಳಿ ಹೋದನು. ರಾಜಾ ಜಸವಂತ ಸಿಂಗನೂ ದಾರಾಶಹನೂ ಕೂಡಿ ಆಲೋಚನೆಯನ್ನು ಮಾಡಿ ತಾವೀ ರ್ವರೂ ತಮ್ಮ ಸೇನೆಗಳನ್ನು ಕೂಡಿಸಿಕೊಂಡು ಅಜಮೀರಕ್ಕೆ ಹೋಗಿ ಅಲ್ಲಿಂದಲೇ ಮುಂದಿನ ಯುದ್ಧದ ಸಿದ್ಧತೆಯನ್ನು ಮಾಡತಕ್ಕದ್ದೆಂದು ನಿರ್ಣಯ ಮಾಡಿದರು. ದಾರಾನ ಸೇನೆಯು ಅಜಮೀರಕ್ಕೆ ಬಂದು ನಿಂತುಕೊಂಡಿತು.

ಇಲ್ಲಿಯ ವರೆಗೆ ಇದಿಯು ದಾರಾನನ್ನು ಮರೆತಿದ್ದಂತೆ ತೋರಿದರೂ ಆ ಹಿರಿಯಮ್ಮನ ಕೃಪಾದೃಷ್ಟಿಯು ಅವನ ಮೇಲೆ ಸಂಪೂರ್ಣವಾಗಿಯೇ ಇತ್ತು. ನೀಚನಾದ ಜಯಸಿಂಗನು ವೈರಿಗಿಂತಲೂ ವೈರಿಯಾಗಿ ದಾರಾ ಶಹನನ್ನು ಕಾಡಲಾರಂಭಿಸಿದನು. ಔರಂಗಜೇಬನು ಒಣ್ಣಾದ ಮಾತು ಗಳನ್ನಾಡಿ ಜಯಸಿಂಗನ ಕೈಕಾಲು ಬಿದ್ದು ಹೇಳಿಕೊಂಡದ್ದರಿಂದ ಆ

ಅಧಮನೂ ಮಿತ್ರಘಾತಕನೂ ಸ್ವಾಮಿದ್ರೋಹಿಯೂ ಆಗಿ ದಾರಾಶಹನ ವಿರುದ್ಧವಾಗಿ ಜಸವಂತಸಿಂಗನ ಮನಸ್ಸು ಕೆಡಿಸುವದಕ್ಕಾಗಿ ಒಂದು ಪತ್ರವನ್ನು ಬರೆದನು. ಆದರ ಅಭಿಪ್ರಾಯವೇನೆಂದರೆ—

" ಜಸವಂತಸಿಂಗಜೀ, ವಿಜಯಿಯಾದ ಔರಂಗಜೇಬನ ಮನಸು ಮುರಿದು ಹತಭಾಗ್ಯನಾದ ದಾರಾಶಹನ ಬೆನ್ನು ಕಟ್ಟಿ ನೀವೇನು ಸೌಭಾಗ್ಯವನ್ನು ಸುರಿಯಬೇಕಾಗಿದೆ? ಸಾಮ್ರಾಜ್ಯದಲ್ಲಿ ಪ್ರಮುಖರಾದ ನಾವೆಲ್ಲರೂ ಔರಂಗಜೇಬ ಸುಲ್ತಾನರ ಪಕ್ಷವನ್ನೆತ್ತಿ ಕಾಯಾ ವಾಚಾ ಮನಸಾ ಅವರ ಹಿತಕ್ಕಾಗಿ ಯತ್ನಮಾಡುತ್ತಿರಲು ಅಪೇಸಿಯಾದ ದಾರಾನನ್ನು ನೀವು ಬೆನ್ನಿಗೆ ಕಟ್ಟಿಕೊಂಡರೆ ನೀವು ಕೆಟ್ಟುಹೋಗುವಿರಿ. ರಜಪೂತ ರಾಜರು ನಿಮ್ಮನ್ನು ಹಿಂಬಾಲಿಸುವರೆಂದು ನೀವು ತಿಳುಕೊಂಡಿರುವಿರಾದೀತು. ನಾನು ಬೇಡೆಂದು ಹೇಳಿದರೆ ಅವರು ನಿಮ್ಮ ಮಾತು ಕೇಳಲಾರರು. ನಿಷ್ಕಾರಣವಾಗಿ ನೀವು ನಿಮ್ಮ ಸೈನ್ಯವನ್ನು ಹಾಳುಮಾಡಿಕೊಳ್ಳಬೇಡಿರಿ. ನೀವು ಸೋತದ್ದೇ ಆದರೆ ಔರಂಗಜೇಬನಂಥ ನಿರ್ಘೃಣನಾದ ವೈರಿಯು ನಿಮ್ಮ ಅವಸ್ಥೆಯನ್ನು ಏನು ಮಾಡುವನೆಂಬದನ್ನು ಚನ್ನಾಗಿ ಲಕ್ಷ್ಯಕ್ಕೆ ತಂದುಕೊಳ್ಳಿರಿ. ನೀವೀಗಲೆ ದಾರಾನ ಪಕ್ಷವನ್ನು ಬಿಟ್ಟುಕೊಟ್ಟರೆ ನಿಮ್ಮ ರಾಜ್ಯವೂ ಅಧಿಕಾರವೂ ಇಮ್ಮಡಿಯಾಗಿ ಬೆಳೆಯುವವೆಂಬದಕ್ಕೆ ನಾನು ಹೊಣೆಗಾರನು. "

ಅಂಬರದ ಪ್ರಬಲನಾದ ರಾಜನೂ ದಿಲ್ಲಿಯ ಬಾದಶಹರ ಪ್ರತಿನಿಧಿಯೂ ಆದ ಜಯಸಿಂಗನು ಇಂಥ ಪತ್ರವನ್ನು ಬರೆದದ್ದು ಕಂಡು ಜಸವಂತಸಿಂಗನು ಅಂಜಿ ಗದಗದನೆ ನಡುಗಿದನು. ಜಸವಂತಸಿಂಗನಿಗೆ ಸಹಾಯ ಮಾಡಲೊಪ್ಪಿದ ರಜಪೂತ ರಾಜರಿಗೆಲ್ಲ ಜಯಸಿಂಗನು ಮೇಲ್ಕಂಡ ಮಾದರಿಯ ಪತ್ರಗಳನ್ನು ಬರೆದೇ ಇದ್ದನು. ಆ ಸಂಗತಿಯನ್ನರಿತ ಬಳಿಕಂತೂ ಜಸವಂತಸಿಂಗನು ಹೇಳದೆ ಕೇಳದೆ ತನ್ನ ಸೈನ್ಯವನ್ನು ಕಟ್ಟಿಕೊಂಡು ಅಜಮೀರ ಕೋಟೆಯನ್ನು ಬಿಟ್ಟೆದ್ದು ತನ್ನ ರಾಜಧಾನಿಗೆ ಹೊರಟೆದ್ದು ಹೋದನು.

ಜಸವಂತಸಿಂಗನು ವಚನಭ್ರಷ್ಟನಾಗಿ ಹೇಡಿಯಂತೆ ಕಾಲ್ದೆಗೆದು ಹೋಗುವಷ್ಟರಲ್ಲಿಯೇ ಜಯಸಿಂಗನು ಔರಂಗಜೇಬನನ್ನು ಕರಕೊಂಡು

ದಾರಾನ ಎದೆಯ ಮೇಲೆ ಬಂದು ನಿಂತನು. ಎಂಥ ದುಃಸ್ಥಿತಿಯಿದು! ಘಾತಕರಾದ ರಜಪೂತರು ದಾರಾಶಹನನ್ನು ಅವನ ಸಂಸ್ಥಾನವಾದ ಅಹಮ್ಮದಾಬಾದವನ್ನು ಬಿಡಿಸಿ, ಅಜಮೀರಕ್ಕೆ ತಾವಾಗಿ ಕರತಂದು, ಕೈಬಿಟ್ಟು ನಡೆದರು. ಇತ್ತ ಔರಂಗಜೇಬ ಜಯಸಿಂಗರ ಸೇನೆಗಳು ಪ್ರಬಲವಾದವುಗಳು. ದಾರಾನ ಸೇನೆಯು ಅರೆವಾಸಿಯಾಗಿ ಕರಗಿ ಹೋಗಿತ್ತು. ಆದರೂ ಆ ಧೈರ್ಯಶಾಲಿಯು ಎದೆಗುಂದದೆ ದೈವದಲ್ಲಿದ್ದಂತೆ ಆಗಿಹೋಗಲೆಂದು ಯುದ್ಧಕ್ಕೆ ಸನ್ನದ್ಧನಾದನು. ಶೌರ್ಯ, ಧೈರ್ಯ, ಸಾಹಸ ಯುದ್ಧಕೌಶಲ್ಯಗಳೆಲ್ಲಾ ಇದ್ದವು! ಆದರೆ ಇದಿ ಮಾಯಿ, ಶನಿದೇವ, ಕೆಡಗಾಲಗಳೊಂದಾಗಿ ಕೈದೊಳೆದು ಆ ರಣರಂಗ ಧೀರನ ಬೆನ್ನಟ್ಟಿಕೊಂಡು ಬರಲು ಇನ್ನೇನು ಗತಿ! ಪಾಪ ದಾರಾಶಹನ ಪಕ್ಷದಲ್ಲೆಲ್ಲ ಒಳಗತ್ತರಿಯು! ಅವನ ಕೈಕೆಳಗಿನ ಫಿರಂಗಿಗಳು ತೋಫು ತುಬಾಕಿಗಳ ಘನವಾದ ಗಡಗಡಾಟವನ್ನೆಬ್ಬಿಸಿದರು. ಆದರೆ ಆ ನೀಚರು ಹಾರಿಸಿದ್ದೆಲ್ಲ ಹುಸಿಗುಂಡೇ! ಮದ್ದು ಮಾತ್ರ ಇದ್ದಷ್ಟು ಸುಟ್ಟು ಹೋಯಿತು. ದ್ರೋಹಿಯಾದ ಶಹಾ ನವಾಜಖಾನನು ದಾರಾನ ಅಂತ ರ್ವಿಚಾರಗಳನ್ನೂ ಅವನ ನಿಜವಾದ ಸ್ಥಿತಿಯನ್ನೂ ಔರಂಗಜೇಬನಿಗೆ ಅರುಹಿದ್ದನಾದ್ದರಿಂದ ಅವನು ಭೀತಿಯಿಲ್ಲದೆ ದಾರಾನ ಸೈನ್ಯದ ಮೇಲೆ ಏರಿ ಬಂದನು. ಪೂರ್ವಸಂಕೇತದ ಮೇರೆಗೆ ಆ ಸೈನ್ಯದಲ್ಲಿಯ ಅರ್ಧ ಕರೆ ಜನರು ಸ್ವಾಮಿದ್ರೋಹಿಗಳಾಗಿ ಶತ್ರುಗಳಿಗೆ ಕೂಡಿಕೊಂಡರು. ಈ ಸಂಗತಿಯನ್ನರಿತು ದಾರಾಶಹನು ಆವೇಶದಿಂದ ಗೃಹಭೇದಿಯಾದ ಶಹಾ ನವಾಜನನ್ನು ಅಲ್ಲಿಯೇ ಅಡ್ಡಹಿಡಿದು ಕಡಿದುಹಾಕಿದನು. ಕೆರೆಯೊಡೆ ದವರ ಕಂಬಳಿಯನ್ನು ಕಸುಕೊಂಡರಂತೆ! ಆಯಿತು! ದಿಲ್ಲಿಯ ಯುವ ರಾಜನು ಮುಲ್ಲಿಯಾಗಿ ಹೋದನು. ಪಲಾಯನವೇ ಗತಿಯಲ್ಲದೆ ಅವ ನಿಗೆ ಮತ್ತೊಂದು ಮಾರ್ಗವಿದ್ದಿಲ್ಲ. ಅಹಮದಾಬಾದಕ್ಕೆ ಅವನು ಧಾವಿಸಿ ಬಂದನು. ಅಲ್ಲಿ ದಾರಾನಿಂದ ನಿಯುಕ್ತನಾದ ಕಿಲ್ಲೇದಾರನೇ ಅವನನ್ನು ಒಳಗೆ ಬರಗೊಡದೆ ಕೋಟೆಯ ಬಾಗಿಲವನ್ನು ಮುಚ್ಚಿ ಬಿಟ್ಟನು. ಉಪಾಯವಿಲ್ಲದ್ದಕ್ಕಾಗಿ ಆ ರಾಜಪುತ್ರನು ತನ್ನ ದೈವವನ್ನು ನಿಂದಿಸುತ್ತ ಕಚ್ಛದ ರಾವನ ಊರಿಗೆ ಬಂದನು. ಆದರೆ ಆ ಮಿತ್ರದ್ರೋಹಿ

ಯಾದ ರಾವನು ದಾರಾನ ಬಳಿಯಲ್ಲಿ ಇದ್ದು ಬಿದ್ದದ್ದನ್ನೆಲ್ಲ ಸುಲುಕೊಂಡು ನೂಕಿಹಾಕಿದನು.

ಕಾಡ್ಗಿಚ್ಚಿನಲ್ಲಿ ಸಿಕ್ಕು ಮೈಸುಟ್ಟುಕೊಳ್ಳುತ್ತ ದಾರಿಗಾಣದೆ ಓಡಾಡುತ್ತಿರುವ ಜಿಂಕೆಯು ಕರುಣಾಸ್ಪದವಾದ ದುರ್ದಶೆಯನ್ನಾಂತು ದಾರಾ ಯುವರಾಜನು ತನ್ನ ಹೆಂಡರುಮಕ್ಕಳಿರುವ ಟಟ್ಟಾ ಕೋಟೆಗೆ ಓಡಿ ಬಂದನು. ಆದರೆ ಅದಕ್ಕೆ ಔರಂಗಜೇಬನ ಸರದಾರನಾದ ಮೀರಬಾಬಾನು ಮುತ್ತಿಗೆಯನ್ನಿಕ್ಕಿಕೊಂಡು ಮೊದಲೇ ಕುಳಿತಿದ್ದನು. ಆದರೂ ಆ ಧೀರನು ಏನೋ ಒಂದು ಯುಕ್ತಿಯಿಂದ ಮೀರಬಾಬಾನನ್ನು ಮೋಸಗೊಳಿಸಿ ತನ್ನ ಹೆಂಡರು ಮಕ್ಕಳನ್ನೂ ಧನಕನಕಗಳನ್ನೂ ಕೋಟೆಯಿಂದ ಕಡೆಗೆ ಮಾಡಿಕೊಂಡು, ಇನ್ನು ಕಾಬೂಲಕ್ಕೆ ಹೋಗಬೇಕೆಂದು ಹೊರಟನು. ಉರಿಯುವಂಥ ಬೇಸಿಗೆಯು ಬಿಸಿಲು! ಅನ್ನೋದಕಕ್ಕೆ ಕ್ಷಾಮ! ಅಂಥದರಲ್ಲಿ ಕುಸುಮಕೋಮಲೆಯರಾದ ನಾರೀಜನರನ್ನು ಕಟ್ಟಿಕೊಂಡು ಹೋಗುವಾಗ ವೈಭವೋಚಿತನಾದ ಆ ಚಕ್ರವರ್ತಿಯ ಜ್ಯೇಷ್ಠಪುತ್ರನಿಗೆ ಅತ್ಯಂತವಾದ ಕಷ್ಟವಾಯಿತು. ಭಿಲ್ಲ ಮುಂತಾದ ಕ್ರೂರ ಜಾತಿಯ ಜನರು ಅಡವಿಯಲ್ಲಿ ಗಂಟುಬಿದ್ದು ಅವನ ಪರಿವಾರದವರನ್ನು ಹೊಡೆದು ಬಡಿದು ಸುಲುಕೊಂಡು ಹೋದರು. ಜ್ವರ, ಮಾರಿಕಾ ಮುಂತಾದ ಬೇನೆಗಳಿಂದ ಅನೇಕರು ಸತ್ತರು. ದಾರಾನ ಪ್ರಿಯತಮೆಯೋರ್ವಳು ಬಿಸಿಲಿಗೆ ಬೆಂದು ಸತ್ತುಹೋದಳು. ಜನ್ಮದಲ್ಲಿ ವಿಪತ್ತಿಗೆ ಹೆದರದ ಆ ಧೈರ್ಯಶಾಲಿಯು ಎದೆಯೊಡಕೊಂಡು ವಿಪನ್ನನಾಗಿ, "ಇನ್ನೇತಕ್ಕೆಂದು ನಾನು ಆಳಬೇಕು!" ಎಂದು ಉದ್ಗಾರವನ್ನು ತೆಗೆದು ಕಣ್ಣಿಗೆ ನೀರು ತಂದನು.

ಇಷ್ಟಾದರೂ ನಿಷ್ಕರುಣೆಯಾದ ವಿಧಿದೇವಿಯು ಹೊಟ್ಟೆ ತಣ್ಣಗಾಗಲಿಲ್ಲ. ದಾರಾಶಹನು ಪ್ರತಿ ಸಾರ್ವಭೌಮನಾಗಿ ಆಗ್ರಾಪಟ್ಟಣದಲ್ಲಿ ಆಳುತ್ತಿರುವಾಗ ಶಹಾಜಹಾನ ಬಾದಶಹನು ಮಲಿಕ ಜೀವನಖಾನನೆಂಬ ಸರದಾರನನ್ನು ಕೆಲವೊಂದು ಅಪರಾಧಕ್ಕಾಗಿ ಆನೆಯ ಕಾಲಿನಲ್ಲಿ ತುಳಿಸತಕ್ಕದ್ದೆಂದು ಶಿಕ್ಷೆಯನ್ನು ವಿಧಿಸಿದ್ದನು. ಆಗ ದಾರಾಶಹನು ಮಧ್ಯಸ್ಥನಾಗಿ ಬಾದಶಹನಿಗೆ ಬಹುಪರಿಯಾಗಿ ಹೇಳಿಕೊಂಡು, ಜೀವನಖಾನನ

ಪ್ರಾಣವನ್ನು ಉಳಿಸಿದ್ದನು. ಆ ನೆನಪಿಗಾಗಿ ಖಾನನು ಇಂಥ ಆಪತ್ಕಾಲ ದಲ್ಲಿ ತನಗೆ ಸಹಾಯಮಾಡುವನೆಂದು ನೆನೆದು ದಾರಾಶಹನು ಅವನಿದ್ದ ದಾದರ ಎಂಬ ಊರಿಗೆ ಹೋದನು. (ದಾದರವು ಬುಲಾನ್ ಘಟ್ಟದ ಬಳಿಯಲ್ಲಿದೆ.)

ಯುವರಾಜನು ವೈಭವದಿಂದ ಬರುವನೆಂದು ನಂಬಿ ಆ ಖಾನನು ಒಳ್ಳೇ ಸಡಗರದಿಂದ ಊದಿಸುತ್ತ ಬಾರಿಸುತ್ತ ಇದಿರ್ಗೊಂಡು ಬಂದು ಅವನನ್ನು ತನ್ನ ಊರಿಗೆ ಕರಕೊಂಡು ಹೋದನು. ದಾರಾನ ಉತ್ತರ ಪೂಜೆಯಾಗಿರುವ ಸಂಗತಿಯನ್ನು ಹಿಂದಿನಿಂದ ಮನಗಂಡವನಾಗಿ ಆ ನೀಚನು ತನ್ನ ಪ್ರಾಣದಾತನ ಗೋಣು ಮುರಿಯುವ ಹಂಚಿಕೆಯನ್ನೇ ಮಾಡಿದನು. ಹಣದಾಸೆಗಾಗಿ ಆ ನರಾಧಮನು ದಾರಾನ ಅನುಯಾಯಿ ವರ್ಗದವರನ್ನೆಲ್ಲ ರಾತ್ರಿಯಲ್ಲಿ ಮಲಗಿದಾಗ ತನ್ನ ಆಳುಗಳಿಂದ ಕೊಲ್ಲಿಸಿ ಆ ರಾಜಪುತ್ರನನ್ನೂ ಅವನ ಹೆಂಡರು ಮಕ್ಕಳನ್ನೂ ಕಟ್ಟಿಹಾಕಿ ಔರಂಗ ಜೇಬನ ಸೇನಾಪತಿಯಾದ ಮೀರಬಾಬಾನ ಸ್ವಾಧೀನ ಮಾಡಿದನು. ದೊಡ್ಡ ಮೀನವನ್ನು ಹಿಡಿದ ಬೆಸ್ತನಂತೆ ಮೀರಬಾಬಾನು ದಾರಾಶಹನನ್ನು ಕಟ್ಟಿಕೊಂಡು ಮಿತಿಮೀರಿದ ಸಂತೋಷದಿಂದ ಕುಣಿಯುತ್ತೆ ದಿಲ್ಲಿಯಲ್ಲಿ ಔರಂಗಜೇಬನಿದ್ದೆಡೆಗೆ ಬಂದನು.

ಅಣ್ಣನ ಸ್ವಾಗತಕ್ಕಾಗಿ ಆ ಪ್ರೀತಿಯ ತಮ್ಮನು ದೊಡ್ಡದೊಂದು ಮೆರವಣಿಗೆಯನ್ನು ತೆಗೆಸಿದನು. ರಾಡಿಯಲ್ಲಿ ಬಿದ್ದು ಬಂದಿರುವ ಒಂದು ಮುದಿ ಆನೆಯ ಮೈತೊಳೆಯದೆ ಅದರ ಮೇಲೆ ಸಬರವನ್ನು ಬಿಗಿದು ರಾಜ ರಾಜೇಶ್ವರನಾಗಿ ಹುಟ್ಟಿದ ದಾರಾಶಹನನ್ನು ಪಾಪಿಗಳು ಕೈಕಾಲು ಬಿಗಿದು ಕುಳ್ಳಿರಿಸಿದ್ದರು. ಸೊಂಗಿ ಡೊಕ್ಕೆ ತೆಗೆದಿರುವ ಆ ಕುಂಟಾನೆಯ ಕೊರಳಲ್ಲಿ ಅಭದ್ರವಾದ ವಸ್ತುಗಳಿಂದ ಮಾಡಿದ ಸರಗಳನ್ನು ಹಾಕಿದ್ದರು. ಹರಿದು ಕೋಸಂಬರೆಯಾಗಿದ್ದ ಶಾಲು ಆ ಯುವರಾಜನ ಶಿರೋಭೂಷಣ ವಾಗಿತ್ತು. ಶತದರಿದ್ರನು ಕೂಡ ಮುಟ್ಟಲೊಲ್ಲದಾದ ಅಂಗಿಯು ಆ ವೀರಶಿರೋಮಣಿಯ ದಿವ್ಯಾಂಗವನ್ನು ಮುಚ್ಚಿತ್ತು. ಆನೆಯ ಒಂದು ಮಗ್ಗಲು ಮಾನವ ರಾಕ್ಷಸನಾದ ಮಲಿಕ್‌ಜೀವನ್‌ಖಾನನೂ ಮತ್ತೊಂದು ಮಗ್ಗಲು ಗ್ರಾಮದ ಕೊಲೆಗಡಕನೂ ಕುದುರೆಗಳನ್ನೇರಿ

ಕೊಂಡು ನಡೆದಿದ್ದರು. "ದೇವರೆ, ನಿನ್ನ ಪ್ರಸಾದದಿಂದ ನನಗೆ ಪ್ರಾಪ್ತವಾಗಿರುವ ಈ ವಿಚಿತ್ರವಾದ ವೈಭವವನ್ನು ನೋಡಬಾರದೆ?" ಎಂದು ದಶೋಪನಿಷತ್ತುಗಳನ್ನು ಓದಿಕೊಂಡಿರುವ ಆ ದರಾಯುಸ ಪಂಡಿತನು ಕಣ್ಣು ಮುಚ್ಚಿಕೊಂಡು ಭಗವಚ್ಚಿಂತನವನ್ನು ಮಾಡುತ್ತಿದ್ದನೇ ಹೊರತಾಗಿ ವ್ಯಸನದ ಲವಲೇಶದಷ್ಟು ಚಿನ್ಹವಾದರೂ ಅವನ ಸುಂದರವಾರವಾದ ಮುಖದಲ್ಲಿ ಕಂಡುಬರಲಿಲ್ಲ.

ಆ ದುಷ್ಪ್ರೇಕ್ಷಣೀಯವಾದ ಪ್ರಕಾರವನ್ನು ಕಂಡು, ದಿಲ್ಲೀ ಪಟ್ಟಣದ ನರನಾರಿಯರೆಲ್ಲರೂ ಗೋಳಿಟ್ಟು ಅತ್ತರು. ಮುದುಕೆಯರು ಚಟಕುಮುರಿದು ಔರಂಗಜೇಬನನ್ನು ಶಾಪಿಸಿದರು. ಕೆಲವರು ಮಣ್ಣು ತೂರಿದರು. ಬಾವಾ ಫಕೀರ ಮುಂತಾದವರು ಮಲಿಕ್‌ಜೀವನ್‌ಖಾನನಿಗೆ ಹರಕು ಮಚ್ಚಿಗಳಿಂದ ಒಗೆದರು. ಹೀಗೆ ಶಾಪಪ್ರಳಾಪದಿಂದ ದಿಲ್ಲಿಯಲ್ಲೆಲ್ಲ ಪ್ರಚಂಡವಾದ ಗೊಂದಲವೆದ್ದಿತು. ಅಣ್ಣನನ್ನು ಆನೆಯಿಂದಿಳಿಸಿಕೊಂಡು ದರಬಾರದಲ್ಲಿ ಅವನ ಶಿರಚ್ಛೇದನವನ್ನು ಮಾಡಿಸಬೇಕೆಂಬ ಕುತೂಹಲವು ಔರಂಗಜೇಬನಲ್ಲಿ ಹುಟ್ಟಿತ್ತು. ಆದರೆ ಊರಲ್ಲಿ ನಡೆದಿರುವ ಶಾಪಪ್ರಳಾಪಗಳ ಅನಿವಾರವಾದ ಕೋಲಾಹಲವನ್ನು ಕೇಳಿ ಆ ಪಾಷಾಣಹೃದಯನು ಒಳಿತಾಗಿ ಹೆದರಿ ಆಗಲೇ ಕುಕರ್ಮವನ್ನು ಮಾಡಿಸಲು ಹಿಂಜರಿದನು.

ಇನ್ನು ದಾರಾನಿಗೆ ಯಾವ ಬಗೆಯ ಶಿಕ್ಷೆಯಾಗಬೇಕೆಂಬ ಬಗ್ಗೆ ಆ ಮಹಾಸಭೆಯಲ್ಲಿ ವಿಚಾರ ನಡೆಯಿತು. ಕೆಲವರು ಅವನಿಗೆ ವಿಷವನ್ನು ಕುಡಿಸಿ ಕೊಂದುಹಾಕಬೇಕೆಂದರು. ಕೆಲವರು ಅವನನ್ನು ಗ್ವಾಲೇರಿಯ ಕೋಟೆಯಲ್ಲಿ ಬಂದಿವಾಸದಲ್ಲಿ ಇಡಬೇಕೆಂದು ಹೇಳಿದರು. ಔರಂಗಜೇಬನು ನಗೆಮುಖವನ್ನು ತಾಳಿ ಆ ಜನರ ಮಾತುಗಳನ್ನು ದಾನಿಯಲ್ ನ್ಯಾಯಾಧೀಶನ ಆಪ್ಯತೆಯಿಂದ ಕೇಳುತ್ತಿದ್ದನು. ದಾರಾನಿಗೆ ಔರಂಗಜೇಬನು ಜೀವದಾನವನ್ನೆಲ್ಲಿ ಕೊಡುವನೋ ಎಂದು ರೋಶನಾರೆಯು ಶಂಕಿಸಿ, ಗಡರು ಮೋರೆಯನ್ನು ಮಾಡಿಕೊಂಡು ಗ್ರಾಮದೇವತೆಯಂತೆ ತೆರೆಯಲ್ಲಿ ಕುಳಿತಿದ್ದಳು. ಹಕೀಮ್‌ದಾವುದನೆಂಬ ನರಶ್ವಾನನೊಬ್ಬನು ಎದ್ದು ನಿಂತು ದಾರಾಶಹನು ಕಾಫರ (ಪಾಖಂಡ) ನೆಂದೂ ಅವನು ಪಿತ

ದ್ರೋಹಿಯೆಂದೂ ಪ್ರಜಾಂತಕನೆಂದೂ ವಾದಿಸಿ ಈಗಿಂದೀಗಲೇ ಅವನನ್ನು ತರಿಸಿ, ಈ ರಾಜಸಭೆಯಲ್ಲಿ ಶಿರಚ್ಛೇದ ಮಾಡಿಸಬೇಕೆಂದು ಒಳ್ಳೇ ಆಗ್ರಹಪೂರ್ವಕವಾಗಿ ಹೇಳಿದನು. ದಾನಿಶ್‌ಮಂದಖಾನನು ಪ್ರತಿಯಾಗಿ ಹೇಳಿದ್ದೇನಂದರೆ: 'ದಾರಾಶಹರೆಷ್ಟಾದರೂ ಔರಂಗಜೇಬ ಸುಲ್ತಾನನ ಸಹೋದರರು; ಅವರು ಶೂರರಾದ ಸೇನಾಪತಿಗಳು, ಉದಾರರಾದ ಯುವರಾಜರು, ಕವಿಗಳಾದ ಪಂಡಿತರು, ಅವರ ಧರ್ಮವಿಚಾರಗಳು ಮಾತ್ರ ಕಾಫರರಾದ ಹಿಂದೂ ಜನರಂತೆ ಇದ್ದವು ಸರಿ. ಆದರೆ ಕಾಫರರಿಗೆಲ್ಲ ದೇಹಾಂತ ಶಿಕ್ಷೆಯಾಗಬೇಕಾಗಿದ್ದರೆ ಹಿಂದುಸ್ಥಾನದ ಪ್ರಜಾಜನರಲ್ಲಿ ಹತ್ತರಲ್ಲಿ ಒಂಬತ್ತು ಜನರನ್ನು ಕೊಂದುಹಾಕಬೇಕಾದೀತು.'

ಆಗ ಹಾಲಾಹಾಲಪೂರಿತವಾದ ಹೃದಯವುಳ್ಳವಳೂ ನಾರೀಕುಲ ಕಲಂಕಳೂ ಪ್ರತ್ಯಕ್ಷ ರಾಕ್ಷಸಿಯೂ ಆದ ರೋಶನಾರೆಯು, "ಕ್ಯಾ ಕ್ಯಾ! ಕ್ಯಾ!" ಎಂದು ಕಟಕಟನೆ ಹಲ್ಲು ಕಡಿದು ಗರ್ಜಿಸಿ ಮರೆಯಾಗಿದ್ದ ತೆರೆಯನ್ನು ಹರಿದೊಗೆದು, "ಔರಂಗಜೇಬ, ಆ ದುರಾತ್ಮನಾದ ದಾರಾನ ಸ್ತುತಿಯನ್ನು ದಾನಿಶ್‌ಮಂದಖಾನನು ಮಾಡಿದ್ದು ಕೇಳಿ ನನ್ನ ಕಿವಿಯಲ್ಲಿ ಸೀಸ ಕಾಯಿಸಿ ಸುರಿದಂತಾಯಿತು. ಏನು ಆ ಕುಲಾಂಗಾರನಾದ ದಾರಾನು ಜೀವದಿಂದುಳಿಯಬೇಕೆ? ಆ ನೀಚನು ಹಡೆದ ತಂದೆಯನ್ನು ಕೇಳಿದವನಲ್ಲ, ಬೆನ್ನಿಲೆ ಬಿದ್ದ ತಂಗಿಯಾದ ನನ್ನ ಮಾನಹಾನಿಯನ್ನು ಆ ನರಪಶುವು ಮಾಡಿದ್ದು ಔರಂಗಜೇಬ, ನೀನು ಮರೆತೆಯಾ? ನಿನ್ನ ಅಧಿಕಾರವನ್ನು ಕಸುಕೊಂಡು ನೆರೆದ ದರಬಾರದಲ್ಲಿ ನಿನ್ನ ಅಪ್ರತಿಷ್ಠೆಯನ್ನು ದಾರಾನು ಮಾಡಿದ್ದರ ಬೆಂಕಿಯು ನಿನ್ನ ಹೊಟ್ಟೆಯಲ್ಲಿ ಉರಿಯುವದಿಲ್ಲವೆ? ಷಂಢನಾದ ನಿನ್ನಿಂದ ಆ ಕೆಲಸವು ಆಗದಿದ್ದರೆ ಕರೆಸು ಅವನನ್ನಿಲ್ಲಿ! ನಾನೇ ಈ ಖಡ್ಗದಿಂದ ಅವನ ತಲೆಯನ್ನು ಕರಕರನೆ ಕೊಯ್ದುಹಾಕಿ ಭೋರಿಟ್ಟು ಹರಿಯುವ ರಕ್ತದಿಂದ ಎರಕೊಳ್ಳದಿದ್ದರೆ ನಾನು ರೋಶನಾರೆಯಲ್ಲ!" ಎಂದು ಕಾಲುಗಳನ್ನು ಅಪ್ಪಳಿಸುತ್ತಲೂ ಖಡ್ಗವನ್ನು ನೆವರುತ್ತಲೂ ಆ ಗಂಡುರಾಮೆಯು ಆವೇಶದಿಂದ ಮೇಘಗರ್ಜನೆಯಂತೆ ಗಡಗಡಾಟವನ್ನು ಮಾಡಿ ನುಡಿದಳು. ನರರತ್ನನಾದ ದಾರಾ ಮಹಾರಾಯನನ್ನು ಹಡೆದ ತಂದೆತಾಯಿಗಳೇ ಈ ಮಾರಿ

ಯಾದ ರೋಶನಾರೆಯು ಜನ್ಮದಾತರು ಕಂಡಿರಾ!

ಔರಂಗಜೇಬನಿಗೆ ಇದು ಬೇಕಾದ ಮಾತೇ ಆಗಿತ್ತು. "ಸಬ್ ಕಾ ಸುನ್ ನಾ ಔರ ದಿಲ್ ಕಾ ಕರನಾ" ಎಂಬಂತೆ ಅವನು ದಾನಿಶ್ ಮುಂದ ಖಾನರೇ ಮುಂತಾದವರ ಮಾತುಗಳನ್ನು ಶಾಸ್ತ್ರಕ್ಕಾಗಿ ಕೇಳುತ್ತಿದ್ದನು. ರೋಶನಾರೆಯು ಮಾತು ಮುಗಿದ ಕೂಡಲೆ ಸದ್ಧರ್ಮಪ್ರವರ್ತಕನಾದ ಔರಂಗಜೇಬ ಸಾಧುವರ್ಯನು ಮೆಲ್ಲನೆ ಎದ್ದುನಿಂತು, ಕುಗ್ಗಿದ ಧ್ವನಿಯಿಂದ ಅಂದದ್ದು: 'ಮಹನೀಯರೆ, ಮಹಮದ್ ಪಯಗಂಬರರ ಸುಮತಾನುಯಾಯಿಗಳೆ, ನಮ್ಮ ಪ್ರಿಯ ಬಂಧುವಾದ ದಾರಾಶಹನಿಗೆ ದೇಹಾಂತ ಶಿಕ್ಷೆಯಾಗಬೇಕೆಂದು ಬಹು ಜನರ ಅಭಿಪ್ರಾಯವಾದ್ದರಿಂದ (ಬಹು ಜನರಾರು? ಹಕೀಮುದಾವುದ್ ಹಾಗೂ ರೋಶನಾರೆಯರೀರ್ವರೇ!) ನಿರುಪಾಯವಾಗಿ ನಾನಾದರೂ ಹಾಗೆಯೇ ಹೇಳಬೇಕಾಗಿದೆ. ರಾಜಕಾರಣವು ಅಂಥವಾದದ್ದು! ಅದು ಅಣ್ಣ ತಮ್ಮಂದಿರನ್ನು ನೋಡುವದಿಲ್ಲ! ತಂದೆತಾಯಿಗಳನ್ನು ನೋಡುವದಿಲ್ಲ. ದುಃಖದಿಂದ ನನ್ನ ಕುತ್ತಿಗೆ ಉಬ್ಬಿರುವದರಿಂದ ಈ ಸಮಯದಲ್ಲಿ ನಾನು ಹೆಚ್ಚಿಗೆ ಮಾತಾಡಲಾರೆನು. ಪರಲೋಕದಲ್ಲಿಯಾದರೂ ದೇವರು ಆ ನನ್ನ ಪ್ರಿಯತಮನಾದ ಬಂಧುವಿಗೆ ಉತ್ತಮವಾದ ಗತಿಯನ್ನು ಕೊಡಲಿ!"

ಈ ತೀರ್ಪು ಕೇಳಿ ರೋಶನಾರೆಯು ಸಂತೋಷದ ಭರದಲ್ಲಿ ಥಿಗ್ಗ ಥಿಗ್ಗನೆ ಕುಣಿದಳು. "ನಾಸರಖಾನ್! ಜೀವನ್ ಖಾನ್! ಈಗಿಂದೀಗಲೆ ದಾರಾನ ರುಂಡವನ್ನು ಹರಿದು ತಂದು ಕೊಟ್ಟವನಿಗೆ ನನ್ನ ಕೊರಳೊಳಗಿನ ಕಂಠಿಯನ್ನು ಕೊಡುತ್ತೇನೆ. ಮೂರು ಲಕ್ಷ ರೂಪಾಯದ ಕಂಠಿಯಿದು!" ಎಂದು ಕಂಠಿಯನ್ನು ಉಚ್ಚಿ ಎತ್ತಿ ಹಿಡಿದು ತೋರಿಸಿದಳು.

ಪಾಪ! ದಾರಾ ಸುಲ್ತಾನನು ಬಂದಿವಾಸದಲ್ಲಿ ಕುಳಿತು ತನ್ನ ಚಿಕ್ಕ ಮಗನಾದ ಸಿಪೀರನೆಂಬ ಹನ್ನೆರಡು ವರ್ಷದ ಬಾಲಕನೊಡನೆ ಅನಿವಾರ್ಯಕ್ಕಾಗಿ ವಿನೋದದ ಮಾತುಗಳನ್ನಾಡುತ್ತ ಕುಳಿತಿದ್ದನು. ಅಷ್ಟರಲ್ಲಿ ಮೇಲ್ಕಂಡ ದುರಾತ್ಮರೀರ್ವರು ನಾಲ್ಕಾರು ಜನರನ್ನು ಕರಕೊಂಡು, ಅಲ್ಲಿಗೆ ಯಮದೂತರಂತೆ ಬಂದರು. ದುಷ್ಟರು ತನ್ನ ವಧ ಮಾಡಲಿಕ್ಕೆ

ಬಂದರೆಂದರಿತು; ಆ ಮಹಾತ್ಮನು ತನ್ನ ಕೂಸಿಗೆ ಒಳಗಿನ ಮನೆಯಲ್ಲಿ ಹೋಗೆಂದು ಹೇಳಿದನು. ಸಿಪೀರ್ ಕುಮಾರನು ಬೆರಗಾಗಿ ಅಲ್ಲಿಯೇ ತಂದೆಯ ಕೊರಳಿಗೆ ತೆಕ್ಕೆಬಿದ್ದು ನಿಂತನು. ಆ ಕಟುಕರು ಅಳುತ್ತಿರುವ ಕುಮಾರನನ್ನು ಬಲಾತ್ಕಾರದಿಂದ ದರದರನೆ ಎಳೆದೊಯ್ದರು. ಸಂಗಡಲೇ ಈರ್ವರು ದಾರಾಶಹನಿಗೆ ತೆಕ್ಕೆಬಿದ್ದು ಅವನನ್ನು ನೆಲಕ್ಕೆ ಕೆಡಹಿದರು. ನಾಸರಖಾನನು ಹಣ್ಣುಹೆಚ್ಚಲು ಬಂದ ಹೆಂಗಸಿನ ಒನಪಿನಿಂದ ಕುಲುಕುಲು ನಗುತ್ತ ಹಿಂದೆ ಬಂದು ಸಕಲ ಭೂಮಂಡಲೇಶ್ವರನಾದ ಶಹಾಜಹಾನ್ ಬಾದಶಹನ ಹರ್ಷವರ್ಧನನಾದ ಕುಮಾರನ ಶಿರಸ್ಸನ್ನು ಕಟ್ಟನೆ ಕಡಿದು ತಟ್ಟೆಯಲ್ಲಿಟ್ಟುಕೊಂಡು ಅಟ್ಟಹಾಸದಿಂದ ದರಬಾರಕ್ಕೆ ತೆಗೆದುಕೊಂಡು ಬಂದನು

ಔರಂಗಜೇಬನಿಗೆ ಆ ರುಂಡದ ಗುರುತು ತಟ್ಟನೆ ಹತ್ತಲಿಲ್ಲ. ಅವನು ಅದನ್ನು ತೊಳಿಸಿ ನೋಡಿದನು. ಹೋಲಿಕೆಯಿರುವದನ್ನು ಕಂಡು ಸಮಾಧಾನವನ್ನು ತಾಳಿ ಅವನು ಆ ರುಂಡದ ಕಣ್ಣು ಪಿಳುಕಿಸಿ ನೋಡಿದನು. ದಾರಾಶಹನ ಕಣ್ಣಲ್ಲಿ ಅಹುದೋ ಅಲ್ಲವೋ ಎಂಬಷ್ಟು ಹೂ ಬಿದ್ದಿತ್ತು. ಅದರ ಗುರುತು ತಗಲಿದ ಕೂಡಲೆ "ಏ! ಬದ್ ಭಕ್ತ!" (ದುರ್ದೈವಿಯೆ!) ಎಂದು ಉದ್ಗಾರ ತೆಗೆದು ಔರಂಗಜೇಬನು ಆ ರುಂಡವನ್ನೆತ್ತಿ ಚಂಡು ತೂರಿದಂತೆ ತೂರಿ ದರಬಾರವನ್ನು ಮುರುಕೊಂಡು ಹೋದನು.

## ೩೮

ಯುವರಾಜ ದರಾಯಸನ ಘೋರತರವಾದ ಕೊಲೆಯ ವರ್ತಮಾನವನ್ನು ಕೇಳಿ ಭರತಖಂಡದಲ್ಲಿರುವ ಸಕಲ ಮಾನವರು ಮಿಡುಕಿ ಕಣ್ಣೀರು ಸುರಿಸುತ್ತಿರಲು ಪ್ರತ್ಯಕ್ಷ ಆತನನ್ನು ಹಡೆದ ತಂದೆಯಾದ ಶಹಾಜಹಾನನಿಗೆಷ್ಟು ವ್ಯಸನವಾಗಿರಬೇಡ! ಎದ್ದು ಅಡ್ಡಾಡಲು ಅಸಮರ್ಥನಾಗಿರುವ ಆ ಮುದುಕನು ದೇಹದ ಎಚ್ಚರವಿಲ್ಲದೆ ಗೋಡೆಗೋಡೆಗೆ ಹಾಯ್ದನು. ಎದೆಎದೆ ಬಡುಕೊಂಡು ಚೀರಾಡಿ ಹಲುಬಿ ಪ್ರಜ್ಞಾ-

ಯನ್ನು ಕಳಕೊಂಡು ಬಿದ್ದುಕೊಂಡನು. ಅಂದಿನ ದಿವಸ ಬಾಯಲ್ಲಿ ಹನಿ ನೀರು ಹಾಕಿಕೊಳ್ಳಲಿಲ್ಲ. "ಕಂದಮ್ಮಾ, ನಾನೇ ನಿನ್ನ ಘಾತ ಮಾಡಿದೆನು! ಸಜ್ಜನನಾದ ನನ್ನ ಮಗನೇ, ನೀನಿಲ್ಲದೆ ಈ ಭೂಲೋಕವೆಲ್ಲ ನನಗೀಗ ನಿರ್ಜನವಾಗಿ ಭಾಸವಾಗುತ್ತದೆ. ಇಲ್ಲವೆಂದರೆ ರಾಕ್ಷಸ ರಾಕ್ಷಸಿಯರಾದ ಔರಂಗಜೇಬ ರೋಶನಾರೆಯರೀರ್ವರೇ ಅಕ್ರಾಳ ವಿಕ್ರಾಳವಾದ ಸ್ವರೂಪವನ್ನು ತಳೆದು ಭೂಗೋಲದ ತುಂಬೆಲ್ಲ ಅಕಾಂಡ ತಾಂಡವವನ್ನು ಪ್ರತ್ಯಕ್ಷವಾಗಿ ನಡೆಸಿದಂತೆ ನನಗೆ ಭಾಸವಾಗುತ್ತದೆ. ಯಾರಲ್ಲಿ? ಅಯ್ಯೋ! ನನ್ನ ಅರ್ಧಾಂಗಿಯಾದ ಮುಮ್‌ತಾಜಮುಹಾಲ ಬಾದಶಾಹಿಣಿಯು ಕೋಪಾವಿಷ್ಟಳಾಗಿ ನಿಂತುಕೊಂಡು, "ನನ್ನ ಪ್ರೇಮದ ಕುಮಾರನಾದ ದಾರಾಶಹನನ್ನೆಲ್ಲಿಟ್ಟಿರಿ? ಅವನನ್ನು ನಾನು ನಿಮ್ಮ ಸ್ವಾಧೀನ ಮಾಡಿ ಹೋಗಿದ್ದೆನಲ್ಲ?" ಎಂದು ಕಣ್ಣೀರು ಸುರಿಸುತ್ತ ಕೇಳುತ್ತಾಳೆ. ಅವಳಿಗೆ ನಾನಿನ್ನೇನು ಹೇಳಲಿ! ಮುಮ್‌ತಾಜಮುಹಾಲ್! ಮುಮ್‌ತಾಜಮುಹಾಲ್! ನೀನಿಟ್ಟ ನ್ಯಾಸವನ್ನು ಮೂಢನಾದ ನಾನು ಬಯಲಿಗಿಟ್ಟು ಕಳಕೊಂಡೆನು. ಕ್ಷಮಿಸು! ಕ್ಷಮಿಸು!" ಎಂದು ಪುತ್ರವತ್ಸಲನಾದ ಶಹಾಜಹಾನನು ಶೋಕಾತಿರೇಕದಿಂದ ಭ್ರಮಿಷ್ಟನಂತೆ ಬಡಬಡಿಸಿದನು.

ಆ ಬಾದಶಹನ ಮನೆಯು ಬೆಕ್ಕಿನ ಪಿಳ್ಳೆ ಸತ್ತಿದ್ದಾದರೆ ಮಾಂಡಲಿಕ ರಾಜರೂ ಅಷ್ಟಪ್ರಧಾನರೂ ಬಂದು ಇಲ್ಲದ ವಿಷಾದವನ್ನು ವ್ಯಕ್ತಪಡಿಸಿ ಹೋಗುತ್ತಿದ್ದರು. ಈಗ ಪುತ್ರಶೋಕದ ಕಿಚ್ಚಿನಲ್ಲಿ ಬೆಂದು ಬಳಲುತ್ತಿರುವ ಶಹಾಜಹಾನನು ಸೆರೆಮನೆಯಲ್ಲಿ ಏಕಾಕಿಯಾಗಿದ್ದು ಸಮಾಧಾನವನ್ನು ಹೇಳಲು ಕೂಡ ಯಾರೂ ದಿಕ್ಕಿಲ್ಲದಾಗಿ ಕುಳಿತಿದ್ದನು! ಇಂದಿಗೆ ಜಗತ್ತಿನಲ್ಲಿ ಪರಮಾವಧಿಯ ದುಃಖಿಯೆಂದರೆ ಶಹಾಜಹಾನನೊಬ್ಬನೇ! ಪಾಪ! ಇದಕ್ಕೂ ಹೆಚ್ಚಿನ ದುಃಖದ ಎಡೆಯು ಅವನ ಮುಂದೆ ಪರಿಪೂರ್ಣವಾಗಿ ಬಡಿಸಿಟ್ಟಿರುತ್ತದೆ! ಶಹಾಜಹಾನ್, ಏಸು ಜನ್ಮಗಳಲ್ಲಿ ಪಾಪ ಮಾಡಿ ಈ ದುಃಖಗಳನ್ನು ಉಣ್ಣಲು ಬಂದಿರುವಿ?

ಸುಲ್ತಾನ ಸುಜಾನ ಮೇಲೆ, ಔರಂಗಜೇಬ, ಜಸವಂತಸಿಂಗ, ಅಮೀರ ಜುಮ್ಲಾ, ಸುಲ್ತಾನ್ ಮಹಮ್ಮದ ಮುಂತಾದ ಪ್ರಬಲರಾದ

ಸೇನಾಪತಿಗಳು ಸಾಗಿ ಹೋಗಿ, ಅವನನ್ನು ತಲಭ್ರಷ್ಟನನ್ನಾಗಿ ಮಾಡಿ, ಬಂಗಾಲದಿಂದ ಓಡಿಸಿದರು. ಸುಖಾನುಭೋಗಿಯಾದ! ಆ ಗರ್ಭ ಶ್ರೀಮಂತನು ಹೆಂಡರು ಮಕ್ಕಳನ್ನು ಕಟ್ಟಿಕೊಂಡು, ಅನ್ನನ್ನ ನೀರು ನೀರೆಂದು ಬಾವಾ ಬೈರಾಗಿಗಳಿಗೂ ಕಡೆಯಾದ ದುರವಸ್ಥೆಯನ್ನು ಹೊಂದಿದನು. ಮಣಿಹೇಮಗಳನ್ನು ಅವನು ಹೊತ್ತು ಹೊತ್ತುಕೊಂಡು ತಿರಿಗಿ ಕೆಟ್ಟನೇ ಹೊರತಾಗಿ ಅವುಗಳಿಂದ ಅವನಿಗೆ ಸುಖವಾಗಲಿಲ್ಲ. ಆ ಕಲ್ಲಿಗೆ ಬಡಿದು ಈ ಕಲ್ಲಿಗೆ ಬಡಿದು ಅವನು ಆರಾಕಾನದ ರಾಜನ ಆಶ್ರ ಯಕ್ಕೆ ಬಂದು ನಿಂತುಕೊಂಡನು. ಆದರೆ ಆ ರಾಜನು ಸುಜಾ ಸುಲ್ತಾನನ ರೂಪವತಿಯಾದ ಮಗಳಿಗೆ ಮೋಹಿತನಾಗಿ ಅವಳನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಆಗ್ರಹಪೂರ್ವಕವಾಗಿ ಕೇಳಿದನು. ದಿಲ್ಲಿಯ ಸಾರ್ವಭೌಮನ ಮಗನ ಪ್ರೇಮದ ಕುಮಾರಿಯನ್ನು ಸಾಧಾರಣ ಪ್ರತಿ ಯವನಾದ ಸಂಸ್ಥಾನಿಕನೋರ್ವನು ಬಲಾತ್ಕಾರದಿಂದ ಅಪಹರಿಸಲೆಸಗಿ ದ್ದನ್ನು ಕಂಡು ಸುಜಾ ಸುಲ್ತಾನನಿಗೆ ಎಷ್ಟು ವ್ಯಸನವಾಗಬೇಡ! ಆ ಅಧಮನ ಆಶ್ರಯಕ್ಕಿಂತಲೂ ಅಡವಿಯಪಾಲಾಗಿ ಹೋಗುವದೇ ಒಳಿ ತೆಂದೆಣಿಸಿ, ಅಭಿಮಾನಿಯಾದ ಆ ಬಂಗಾಲಾಧಿಪತಿಯು ನರಾಧಮನಾದ ಆ ಆರಾಕಾನದ ರಾಜನ ಊರು ಬಿಟ್ಟು ಹೇಳದೆ ಕೇಳದೆ ಹೊರಟದ್ದು ಹೋದನು. ಕಾಮಪರವಶನಾದ ಆ ಗ್ರಾಮದರಸನು ಅತಿಥಿಯಾಗಿ ಬಂದಿರುವ ಆ ಪೃಥ್ವೀಪತಿಯ ಬೆನ್ನಟ್ಟಿ ಹೋಗಿ, ಸುಜಾ ಸುಲ್ತಾನನನ್ನೂ ಅವನ ಅನುಯಾಯಿಗಳನ್ನೂ ಕೊಂದು ಹಾಕಿ ಆತನ ಹೆಂಡರು ಮಕ್ಕಳನ್ನು ಎತ್ತಿಕೊಂಡು, ತನ್ನ ಊರಿಗೆ ಬಂದನು. ನಿರಾಧಾರೆಯರಾದ ಆ ವರಾ ರೋಹೆಯರು ಪರೋಪರಿಯಿಂದ ಬೇಡಿಕೊಂಡರೂ ಆ ನರಾಧಮನಿಗೆ ದಯೆ ಬರಲಿಲ್ಲ. ಭೂಮಂಡಲೇಶ್ವರನ ಸ್ನುಷೆಯನ್ನು! ಕಾರಾಗ್ರಹದಲ್ಲಿರಿಸಿ ಆ ಪಾಮರನು ರಾಜಕನ್ನೆಯನ್ನು ತನ್ನ ಸೇಜಕ್ಕೆ ಎಳೆದೊಯ್ದನು. ತನ್ನ ವಾಸನೆಯು ತೃಪ್ತವಾದ ಬಳಿಕ ಆ ನೀಚನು ಗರ್ಭಿಣಿಯಾದ ಆ ಹೆಂಡತಿ ಯನ್ನೂ ರಾಜಸ್ನುಷೆಯಾದ ಅವಳ ತಾಯಿಯನ್ನೂ ಒಳಸಂಚಿನ ಸೆವ ಮಾಡಿ, ಕ್ರೂರತನದಿಂದ ಕೊಂದುಹಾಕಿದನು. ಹೀಗೆ ಸುಜಾ ಸುಲ್ತಾ ನನೂ ಅವನ ಪ್ರಜಾಸಂತಾನವೂ ಒಂದು ಪಿಳ್ಳೆ ಕೂಡ ಇಲ್ಲದಂತೆ

ನಿರ್ನಾಮವಾಗಿ ಹೋಯಿತು. ಶ್ರೀಮಂತರ ಹೊಟ್ಟೆಯಲ್ಲಿ ತಾವು ಹುಟ್ಟಲಿಲ್ಲೆಂದು ಅನೇಕರು ತಮ್ಮ ದೈವವನ್ನು ನಿಂದಿಸುತ್ತಿರುವದುಂಟು! ದಾರಾಶಹ ಸುಜಾ ಸುಲ್ತಾನರಿಗೆ ಸಮಾನರಾದ ಶ್ರೀಮಂತರು ಯಾವಾಗ ಎಲ್ಲಿ ಹುಟ್ಟಿದರು? ಅವರಿಗುಂಟಾದ ಯಾತನೆಗಳನ್ನು ಸ್ವಪ್ನದಲ್ಲಿ ನಮ್ಮ ಶತ್ರುಗಳು ಕೂಡ ಅನುಭವಿಸುತ್ತಿರುವದನ್ನು ನೋಡಲಸವಲ್ಲ! ಅತುಲವಾದ ಸಂಪತ್ತಿನ ಬೆನ್ನ ಮೇಲೆಯೇ ಅಗಾಧವಾದ ದುಃಖಗಳ ಮಹತ್ತರವಾದ ಸಂಚಯವು! ಬೇಡ! ಬೇಡ! ಮರ್ಯಾದಾತೀತವಾದ ಸಂಪತ್ತೂ ಬೇಡ! ಅದಕ್ಕೆ ಅಂಟಿಕೊಂಡಿರುವ ಅಸಹ್ಯವಾದ ಮಾನಹಾನಿ ಪ್ರಾಣಹಾನಿಗಳೂ ಬೇಡ!

ಶಹಾಜಹಾನನಿರುವ ಮನೆಯೇ ಅವನಿಗೆ ರಾಜಧಾನಿಯು, ಆ ಮನೆಯ ಹಿಂಭಾಗದಲ್ಲಿರುವ ಚಿಕ್ಕದಾದ ಹೂದೋಟವೇ ಅವನಿಗೆ ಹೊರಗಿನ ಜಗತ್ತು; ಅಪರಿಚಿತರಾದ ಪರಿವಾರದವರ ಚಿಕ್ಕ ಮೇಳೆಯೇ ಆ ಮಹಾರಾಜನ ಪ್ರಜರು. ಹೊಟ್ಟೆಯೊಳಗಿನ ನಾಲ್ಕು ಮಾತಾಡುವೆನೆಂದರೆ ಅವನಿಗೆ ಸತಿಸುತರಿಲ್ಲ, ಆಪ್ತರಿಷ್ಟರಿಲ್ಲ, ವಿಶ್ವಾಸದವರಾದ ಸ್ನೇಹಿತರಿಲ್ಲ! ಒಳಗಿನ ವರ್ತಮಾನವಂತೂ ಹೊರಗೆ ಹೋಗುವಂತಿಲ್ಲ. ಎಂದಾದರೂ ಹೊರಗಿನ ವರ್ತಮಾನ ಬಂದರೆ ಎದೆಯಲ್ಲಿ ಅಲಗಿಕ್ಕಿ ತಿರಿವಿದ ಹಾಗೆ ಮಾಡುವಂಥ ದುಃಖದ ವರ್ತಮಾನಗಳೇ. ಇಂದೇನು? ದಾರಾಶಹನ ಹಿರಿಯ ಹೆಂಡತಿಯು ಪತಿಗೆ ಒದಗಿದ ಸಂಕಟಗಳನ್ನು ನೋಡಲಾರದೆ ಲಾಹೋರದಲ್ಲಿ ವಿಷ ತಿಂದು ಸತ್ತುಹೋದಳು. ಈ ದಿವಸದ ವರ್ತಮಾನವೇನು? ಔರಂಗಜೇಬನ ಹಿರಿಯ ಮಗನಾದ ಸುಲ್ತಾನ ಮಹಮ್ಮದನು ಯುದ್ಧಗಳಲ್ಲಿ ವಿಜಯವನ್ನು ಹೊಂದಿ ಪ್ರಬಲನಾಗಿದ್ದರಿಂದ ಮತ್ಸರಿಯಾದ ಅವನ ತಂದೆಯು ಅವನನ್ನು ಗ್ವಾಲೇರಿಯ ಕೋಟೆಯಲ್ಲಿಯ ತಳಮನೆಯಲ್ಲಿರುವ ಕಾರಾಗೃಹದಲ್ಲಿಟ್ಟನು. ಮತ್ತೇನು? ಸುಲೇಮಾನ ರಾಜಪುತ್ರನನ್ನು ಹಿಡಿತರಿಸಿ, ಇಂದು ನಾಳೆ ಅವನಿಗೆ ಯಮಪುರದ ಹಾದಿಯನ್ನು ತೋರಿಸತಕ್ಕವರಿದ್ದಾರೆ!

"ಸಾಕುಸಾಕಾಯಿತು! ಹೀಗೆ ಲೋಕಸಂಹಾರವನ್ನು ಮಾಡುವದಕ್ಕೆ ಮುಂಚಿತವಾಗಿ ನನ್ನ ಸಂಹಾರವನ್ನೇ ಮಾಡಿ ಈ ದುಃಖಸಾಗರದ

ಆಚೆಗೆ ದಾಟಿಸಿಬಿಟ್ಟರೆ ಮುಂದೆ ನೂರು ಜನ್ಮಗಳಲ್ಲಿ ಕೂಡ ನಾನು ಹಿಂದು ಸ್ಥಾನದಲ್ಲಿ ಜನ್ಮ ಧರಿಸಲಿಕ್ಕಿಲ್ಲವೆಂದು ಆ ನನ್ನ ವಂಶವರ್ಧನನೂ ಕೀರ್ತಿ ವರ್ಧನನೂ ಆದ ಪ್ರೇಮದ ಕುಮಾರನಿಗೆ ತಿಳಿಸಿರಿ." ಎಂದು ಮೃತ ಪ್ರಾಯನಾದ ಆ ಕ್ಷಿತಿನಾಥನು ಅಲಂಬುದ್ಧಿಯಿಲ್ಲದ ಅಲಂಗೀರನಿಗೆ ಹೇಳಿ ಕಳಿಸಿದನು.

ಯುವರಾಜನಾದ ದರಾಯನನ ಶವವಿಸರ್ಜವಾಗುವದಕ್ಕೆ ಪೂರ್ವ ದಲ್ಲಿಯೇ ವಿಕಟಪ್ರತಾಪಿಯಾದ ಔರಂಗಜೇಬನು ಮುಕುಟಧಾರಣ ಮಹೋತ್ಸವವನ್ನು ಮಾಡಿಕೊಂಡನು. ದಯೆ, ಮಾಯೆ, ಕ್ಷಮೆ, ಸ್ನೇಹ, ವಾತ್ಸಲ್ಯ ಮುಂತಾದ ಸುರಸವಾದ ಗುಣಗಳಿಗೆ ಆಸ್ಪದವಿಲ್ಲದ ಆ ಪಾಷಾಣ ಹೃದಯನಾದ ಆ ರಾವಣೇಶ್ವರನು ಉತ್ತರದೇಶದ ಲಂಕೆಯಾದ ದಿಲ್ಲೀ ಪಟ್ಟಣದಲ್ಲಿ ಸಿಂಹಾಸನವನ್ನೇರಿದ ಮುಹೂರ್ತದಲ್ಲಿ ಸಮಗ್ರವಾದ ಭೂತ ಲವು ಸೂತಕದಲ್ಲಿತ್ತು. ಪರಜನ ಸ್ವಜನರನ್ನು ಕೂಡೆಯೇ ದೋಷೈಕ ದೃಷ್ಟಿಯಿಂದ ನೋಡುವ ಆ ಉಗ್ರನಾದ ಖಡ್ಗಧಾರಿಯು ಸಿಂಹಾಸನ ವನ್ನೇರುತ್ತಿರುವಾಗ ಎಲ್ಲರ ಹೃದಯದಲ್ಲಿಯೂ ಕಲ್ಲು ಜಜ್ಜಿದಂತಾ ಯಿತು. ಮೊನ್ನಿನ ದಿನ ಅವನ ಕೃಪೆಗೆ ಪಾತ್ರನಾಗಿದ್ದವನು ಇಂದಿನ ದಿನ ಸತ್ತಿರುವನೋ ಬದುಕಿರುವನೋ ತಿಳಿದಿದ್ದಿಲ್ಲ. ಈ ದಿವಸ ಆದರ ದಿಂದ ಸಿಂಹಾಸನಾರೋಹಣ ಮಹೋತ್ಸವಕ್ಕೆ ನಿಮಂತ್ರಿತನಾದವನು ನಾಳಿಗೆ ಏನಾಗುವನೊ ಎಂಬದರ ನೆಚ್ಚಿಗೆಯಿಲ್ಲ. ಇಂಥ "ಶಾಹೇ ಅಲಂಗೀರ ಗಾಜಿ ಪಾದಶಹಾ ದೀನ್ ಪನಾಃ"ನು ಸರ್ವಸ್ವಾಮಿ ಗುಣೋ ಪೇತನಾದ ಸಾರ್ವಭೌಮನಾಗಿದ್ದನೆಂದೂ, ಲೋಕವು ನಿರರ್ಥಕವಾಗಿ ಅವನನ್ನು ನಿಂದಿಸಿತೆಂದೂ ಧರ್ಮಾಭಿಮಾನಿಗಳಾದ ಕೆಲಜನ ಆಧುನಿಕ ಮೌಲವೀ ಅಕಲ್ಪಿತವಾದ ಒಂದು ಉದಾಹರಣವನ್ನು ಕೊಟ್ಟು ಪ್ರತಿ ಪಾದಿಸುತ್ತಾರೆ. ಯಾವದೋ ಒಂದು ಹಿಂದೂ ದೇವಾಲಯಕ್ಕೆ ಔರಂಗ ಜೇಬನು ಒಂದು ಇನಾಮು ಕೊಟ್ಟಿದ್ದನಂತೆ! ಹಾದಿಯಲ್ಲಿ ಒಂದು ದುಡ್ಡು ಯಾವನಿಗಾದರೂ ಅಚುಂಬಿತವಾಗಿ ಸಿಕ್ಕ ಮಾತ್ರಕ್ಕೆ ಆ ಬೀದಿ ಯಲ್ಲೆಲ್ಲ ರೊಕ್ಕವನ್ನು ಹರವಿರುವರೆಂದು ಹೇಳಬಹುದೆ? ಔರಂಗ ಜೇಬನು ವೀರನೂ, ಧೀರನೂ, ಧೂರ್ತನೂ, ಪಂಡಿತನೂ ಆಗಿದ್ದನೆಂದು

ನಾವು ಒಪ್ಪದಿರಲಾರೆವು. ಆದರೆ ಪರ್ವತಪ್ರಾಯವಾದ ಪ್ರಮಾಣಗಳ ಮೇಲಿಂದ ಇತಿಹಾಸಕಾರರು ಆ ಚಕ್ರವರ್ತಿಯ ಗುಣನಿರ್ಣಯ ಮಾಡಿದ್ದಕ್ಕೆ ಆಕ್ಷೇಪ ತೆಗೆದುಕೊಳ್ಳುವವನು माक्षये मधुबिंदुना रचयितु क्षारांबुधेरीहते ಎಂದು ಹೇಳಬೇಕಾಗುತ್ತದೆ. ತತ್ಕಾಲೀನನಾದ ಚರಿತ್ರಕಾರನೊರ್ವನು ಹೇಳುವ ಸಂಗತಿಯಿಂದಲೇ ಔರಂಗಜೇಬನೆಂಥವನಿದ್ದನೆಂಬದನ್ನು ವಾಚಕರು ಊಹಿಸಬಹುದು.

ಶಹಾಜಹಾನನು ಪರಾಧೀನನಾಗಿ ತನ್ನ ಅರಮನೆಯಲ್ಲಿ ತಾನೊಬ್ಬನೇ ಒಬ್ಬನಾಗಿರುವಾಗ, ವ್ಯಾಧಿಗ್ರಸ್ತನಾದ ಆ ವೃದ್ಧನು ನೀರಡಿಸಿ ಪರಿಚಾರಕರನ್ನು ಕರೆದನು. ಅವನು ನೀರು ಕೊಡುವ ವೇಳೆ ಇದಲ್ಲವೆಂದು ನಿಷ್ಠುರವಾದ ಉತ್ತರವನ್ನೀಯಲಾಗಿ ಆ ಲೋಕೈಕನಾಥನು ಉದ್ಗಾರವನ್ನು ತೆಗೆದದ್ದೇನೆಂದರೆ :—

"ಹಿಂದೂ ಜನರ ಧರ್ಮವನ್ನು ನಾವು ವ್ಯರ್ಥವಾಗಿ ನಿಂದಿಸಿ ಕೆಡುತ್ತೇವೆ. ಅವರು ಜೀವಂತರಾಗಿರುವ ತಮ್ಮ ಪಿತೃಗಳ ಸೇವೆಯನ್ನು ಮಾಡುವದಲ್ಲದೆ ಸತ್ತಬಳಿಕಾದರೂ ಅವರ ಆತ್ಮಕ್ಕೆ ಜಲತರ್ಪಣವನ್ನು ಮಾಡುತ್ತಾರೆ. ಸತ್ಯಧರ್ಮಾನುಗಾಮಿಯೆಂದನ್ನಿಸಿಕೊಳ್ಳುವ ನನ್ನ ಮಗನು ಬದುಕಿರುವ ತಂದೆಯನ್ನು ನೀರು ನೀರೆಂದು ಮಿಡುಕುವ ಹಾಗೆ ಮಾಡುತ್ತಿರುವನು!"

## ೩೯

ಸುಲೇಮಾನಶಹನು ಶ್ರೀನಗರದ ರಾಜನ ಆಶ್ರಯದಲ್ಲಿ ಅಬಾಧಿತನಾಗಿ ನಿಂತುಕೊಂಡಿದ್ದನು. ಎಂಥ ಸಂಕಟಗಳು ಬಂದೊದಗಿದರೂ ತನ್ನ ಅತಿಥಿಯಾಗಿ ಬಂದಿದ್ದ ಸುಲೇಮಾನನನ್ನು ಎಂದಿಗೂ ಹೊರಗೈಯಿಂದ ಹೊಡೆಯಲಿಕ್ಕಿಲ್ಲವೆಂದೂ ತನ್ನ ಕೈಲಾದಮಟ್ಟಿಗೆ ಸಹಾಯವನ್ನು ಮಾಡದೆ ಬಿಡಲಿಕ್ಕಿಲ್ಲವೆಂದೂ ರಾಜನು ಪ್ರಮಾಣಪೂರ್ವಕವಾಗಿ ವಚನವನ್ನಿತ್ತಿದ್ದನು. ದಾರಾಶಹನು ಅಹಮ್ಮದಾಬಾದ ಕೋಟೆಯನ್ನು ಆಶ್ರ

ಮಿಸಿಕೊಂಡಿರುವಾಗ ಔರಂಗಜೇಬನು ಸುಲೇಮಾನಶಹನನ್ನು ಶ್ರೀನಗರ ದಿಂದ ಓಡಿಸಬೇಕೆಂದು ಬಹು ಪ್ರಯತ್ನ ಮಾಡಿದನು. ಗುಡ್ಡಗಾಡಿನಲ್ಲಿ ಬಲು ಬಿಕ್ಕಟ್ಟಿನ ಸ್ಥಳವಾಗಿರುವ ಶ್ರೀನಗರದ ಮೇಲೆ ಸಾಗಿ ಹೋಗುವ ದೆಂವುರೆ ಅಸಾಧ್ಯವಾದ ಮಾತಾಗಿರುವದರಿಂದ ಕಲ್ಲಿಗೆ ಹಾಯ್ದವನು ತನ್ನ ತಲೆಯನ್ನೇ ಒಡಕೊಳ್ಳುವನೆಂಬಂತೆ ಔರಂಗಜೇಬನ ಸಾಹಸವೆಲ್ಲ ನಿರರ್ಥಕವಾಗಿ ಹೋಯಿತು.

ದಾರಾಶಹನು ದುರವಸ್ಥೆಯನ್ನು ಹೊಂದಿದ ಬಳಿಕ ಜಸವಂತ ಸಿಂಗ, ಜಯಸಿಂಗ, ಔರಂಗಜೇಬರು ಶ್ರೀನಗರದ ಸುತ್ತುಮುತ್ತು ನೆರೆದು ಆ ರಾಜ್ಯಕ್ಕೆ ರಾಜ್ಯವನ್ನೇ ಸುಟ್ಟುಬಿಡಬೇಕೆಂಬ ಹವಣಿಕೆಗೆ ಬಿದ್ದರು. ಜಯಸಿಂಗನು ಮತ್ತೆ ಮುಂದೆ ಬಿದ್ದು ಅಲ್ಲಿಯ ರಾಜನಿಗೆ ಒಂದು ಪತ್ರ ವನ್ನು ಬರೆದು ತಮ್ಮ ಬಲವೆಷ್ಟಿರುವದೆಂಬದನ್ನೂ ತಮ್ಮ ನಿಶ್ಚಿತವಾದ ಉದ್ದೇಶವನ್ನೂ ತಿಳಿಸಿ, ಸುಲೇಮಾನನ್ನು ತಮ್ಮ ವಶಕ್ಕೆ ಕೊಡದಿದ್ದರೆ ನಿನ್ನ ರಾಜ್ಯವೂ ವಂಶವೂ ಕೂಡಿಯೇ ಅಗ್ನಿಯಲ್ಲಿ ಸ್ವಾಹಾ ಆಗಿ ಹೋಗು ವಿರಿ ಎಂದು ಅಂಜಿಕೆ ಹಾಕಿದನು. ಆದರೆ ಉದಾರಚರಿತನಾದ ಆ ರಾಜನು ಜಯಸಿಂಗನ ಪತ್ರವನ್ನು ಅಲ್ಲಿಯೇ ಸುಡಿಸಿ, ಉತ್ತರವೆಂದು ಅದರ ಬೂದಿಯನ್ನು ಬಂದ ದೂತನ ಸಂಗಡ ಕಳಿಸಿಕೊಟ್ಟನು. ಈಗಿನ ಕಾಲ ದಲ್ಲಿ ಅಫ್ರಿದೀ ಎಂಬ ಗುಡ್ಡಗಾಡು ಜನರು ಕಾಬೂಲದ ಅಮೀರನಿಗೂ ಹಿಂದುಸ್ಥಾನದ ಸರಕಾರಕ್ಕೂ ಸಣ್ಣಾಗಿ ತೊಂದರೆಯನ್ನು ಕೊಡು ವಂತೆಯೇ ಆ ಕಾಲದಲ್ಲಿ ಶ್ರೀನಗರದ ರಾಜನು ದಿಲ್ಲಿಯ ಸಾರ್ವಭೌಮ ರಿಗೆ ವಶನಾಗದೆ ಮೀರಿ ನಿಂತಿದ್ದನು. ಮುಂದೇನು ವಿಚಾರವು?

ಅಸಮಂಜಸವಾದ ವಿಚಾರಗಳಿಂದಲೇ ಅಸಾಧ್ಯವಾದ ಸಂಗತಿಗಳು ಒಮ್ಮೊಮ್ಮೆ ದೈವವಶಾತ್ ಸಾಧ್ಯವಾಗುವದುಂಟು. ಔರಂಗಜೇಬನು ಶ್ರೀನಗರದ ರಾಜನ ಮಗನಿಗೆ ಹೇರಳವಾದ ಆಸೆಯನ್ನು ತೋರಿಸಿ, ತಾನೊಂದು ಪತ್ರವನ್ನು ಬರೆದಿದ್ದನು. ಆ ಮತಿಮಂದನು ದುರಾಶೆಗೆ ಬಿದ್ದು ಅತಿಥಿ ಘಾತದ ಪಾತಕಕ್ಕೆ ಗುರಿಯಾದದ್ದಲ್ಲದೆ ಅಳಿಸಲಾಗದಂಥ ಕಲಂಕವನ್ನು ತಂದೆಯ ಕೀರ್ತಿಗೆ ತಗಲಿಸಿದನು. ನಿಶಾಚರ ಸಮಾನ ನಾದ ಆ ದುರಾತ್ಮನು ಅಪರಾತ್ರಿಯಲ್ಲಿ ಆಳುಗಳನ್ನು ಕಟ್ಟಿಕೊಂಡು

ಸುಲೇಮಾನನಿರುವ ಮನೆಯ ಮೇಲೆ ಸಾಗಿಹೋದನು. ಆದರೆ ಆ ವಿಕ್ರಮಶಾಲಿಯು ಹತ್ತೇ ಜನರಾಗಿರುವ ತನ್ನ ಅನುಯಾಯಿಗಳನ್ನು ಕಟ್ಟಿಕೊಂಡು ಸಾಹಸದಿಂದ ಕಾದಿ ಆ ದ್ರೋಹಿಯ ಆಟವನ್ನು ಸಾಗಗೊಡದಂತೆ ಮಾಡಿದನು. ಆದರೂ ಅದೆಲ್ಲ ಶ್ರೀನಗರದ ರಾಜನ ವಿಶ್ವಾಸಘಾತದ ಪರಿಣಾಮವೇ ಎಂದು ತಿಳಿದು, ಸುಲೇಮಾನನು ಮರುದಿವಸ ಹೇಳದೆ ಕೇಳದೆ ತನ್ನ ಪರಿವಾರವನ್ನು ಕಟ್ಟಿಕೊಂಡು ಚಿಕ್ಕ ತಿಬೇಟವೆಂಬ ಪ್ರಾಂತಕ್ಕೆ ಹೊರಟುಹೋಗಬೇಕೆಂದು ನಡೆದನು. ರಾಜನಿಗೆ ಆ ವರ್ತಮಾನವು ತತ್ಕಾಲಕ್ಕೆ ತಿಳಿಯಲಿಲ್ಲ. ಪಾಪಿಯಾದ ಅವನ ಮಗನು ಸೈನ್ಯವನ್ನು ಕಟ್ಟಿಕೊಂಡು ಸುಲೇಮಾನನ ಬೆನ್ನಟ್ಟಿ ಬಂದನು. ಕೂಡಲೆ ಸುಲೇಮಾನನಿಗೂ ಅವನಿಗೂ ಭಯಂಕರವಾದ ಕದನವೆಸಗಿತು. ಸುಲೇಮಾನನ ಸಂಗಡ ಜನರೇ ಸ್ವಲ್ಪ ಮಂದಿ. ಅವರ ಬಳಿಯಲ್ಲಿ ಹೇಳಿಕೊಳ್ಳುವಷ್ಟು ಮದ್ದು ಗುಂಡುಗಳಿಲ್ಲ. ಶಸ್ತ್ರಾಸ್ತ್ರಗಳೂ ಇಲ್ಲ. ಮಾಡುವದೇನು? **अरक्ष्यमाणं हिवृको हन्यात् सिहं महाबलं** ಎಂಬಂತೆ ಭುವನೈಕಮಲ್ಲನಾದ ಆ ಸುಲೇಮಾನನು ಹೊಡೆದಾಟದಲ್ಲಿ ಗಾಯವನ್ನು ತಾಳಿ ಆ ಪಾಪಿಯ ಕೈಗೆ ಸಿಕ್ಕಿಹೋದನು.

ಅತಿರಥಿ ಮಹಾರಥಿಗಳಾದ ಔರಂಗಜೇಬ ಜಯಸಿಂಗ ಜಸವಂತಸಿಂಗರೆಲ್ಲರು ಚಕ್ರವ್ಯೂಹದಲ್ಲಿ ಸಿಕ್ಕಿರುವ ಅಭಿಮನ್ಯುವಿನಂತಿರುವ ಸುಲೇಮಾನಶಹನನ್ನು ದೃಢವಾಗಿ ಕಟ್ಟಿಕೊಂಡು ತಾವು ಒಳ್ಳೇ ಪರಾಕ್ರಮವನ್ನು ಮಾಡಿದೆವೆಂಬ ಉಬ್ಬಿನಿಂದ ರಣವಾದ್ಯಗಳನ್ನು ತುಮುಲವಾಗಿ ಹೊಡಿಸುತ್ತ ದಿಲ್ಲಿಯ ಮಾರ್ಗವನ್ನು ಹಿಡಿದು ಬಂದರು.

ದಿಲ್ಲಿಯ "ದಿವಾನ್ ಇ ಆಮ್" ಎಂಬ ಅದ್ಭುತವಾದ ಹೊಸ ಸಭಾಮಂದಿರದಲ್ಲಿ ಒಂದು ದಿನ ದೊಡ್ಡದೊಂದು ದರಬಾರ ಕೂಡಿತು. ಅಂದು ಸುಲೇಮಾನಶಹನ ಶಿರಚ್ಛೇದ ಮಹೋತ್ಸವದಂಥ ಅಪೂರ್ವವಾದ ನೋಟವನ್ನು ಕಣ್ಣು ತುಂಬಾ ನೋಡಬೇಕೆಂಬ ಕುತೂಹಲದಿಂದ ಭೂತ ವೇತಾಲ, ದನುಜ, ರಾಕ್ಷಸರ ಅಂಶಭೂತರಾದ ಔರಂಗಜೇಬನ ಪಕ್ಷೀಯರೆಲ್ಲರೂ ಸಿಂಗರದ ಉಡಿಗೆ-ತೊಡಿಗೆಗಳನ್ನು ಮಾಡಿಕೊಂಡು, ಸಭಾಸ್ಥಾನಕ್ಕೆ ಹಿಂಡುಹಿಂಡಾಗಿ ಬರಲಾರಂಭಿಸಿದರು. ಸಭಾಮಂದಿರದ

ಸುತ್ತಲೂ ಬಿಚ್ಚುಗತ್ತಿಯನ್ನು ಹಿಡಕೊಂಡ ಕಾಲಾಳುಗಳೂ ರಾವುತರೂ ಒಳ್ಳೇ ದಕ್ಷತೆಯಿಂದ ನಿಂತಿದ್ದರು. ಆ ಮಂದಿರದ ಉಪ್ಪರಿಗೆಯ ಮೇಲೆ ರೋಶನಾರೆಯೂ ಔರಂಗಜೇಬನ ಸತಿಯರೂ ಆ ಸಿಂಹವೇಧದ ಮಹಾ ಸಮಾರಂಭವನ್ನು ನೋಡಲುತ್ಸುಕರಾಗಿ ಅನೇಕ ನಾರೀಗಡಣದೊಂದಿಗೆ ಸಡಗರದಿಂದ ಕುಳಿತಿದ್ದರು. ಮುಕುಟಧಾರಿಯಾದ ಔರಂಗಜೇಬನು ಅನರ್ಘವಾದ ವಸ್ತ್ರಾಲಂಕಾರಗಳಿಂದ ಭೂಷಿತನಾಗಿ ರತ್ನಖಚಿತವಾದ ಹಿಡಿಕೆಯುಳ್ಳ ಖಡ್ಗವನ್ನು ಕೈಯಲ್ಲಿ ಹಿಡುಕೊಂಡು, ಒಳ್ಳೇ ಉಬ್ಬಿನಿಂದ ಕುಲುಕುಲನೆ ನಗುತ್ತ ಬಂದು ಸಿಂಹಾಸನಾರೂಢನಾದ ಕೂಡಲೆ ಸಭಿಕರೆಲ್ಲರೂ ಒಳ್ಳೇ ಜಯಘೋಷದೊಂದಿಗೆ ಎದ್ದು ನಿಂತು ಭ್ರಾತೃಘಾತಕನಾದ ಆ ಚಕ್ರವರ್ತಿಗೆ ಪ್ರಣಾಮ ಮಾಡಿದರು. ಸಂಗಡಲೇ ವಾದ್ಯಗಳ ಸಂರಂಭವೆಸಗಿತು. ವಾದ್ಯಗಳ ತಾಲಕ್ಕೆ ಸರಿಯಾಗಿ ಕಾಲಿನಿಂದ ಭೂಮಿಯನ್ನು ಬಡಿಯುತ್ತ ಔರಂಗಜೇಬನು ನೆರೆದ ಸಭಿಕರನ್ನೂ ಮೇಲೆ ಚಂದ್ರಶಾಲೆಯಲ್ಲಿ ನೆರೆದಿರುವ ಲೀಲಾವತಿಯರ ಮೇಳೆಯನ್ನೂ ಒಳ್ಳೇ ಆಸ್ಥೆಯಿಂದ ನೋಡುತ್ತಿದ್ದನು.

ವಾದ್ಯಗಳ ಸಪ್ಪಳವು ನಿಂತ ಕೂಡಲೆ ಔರಂಗಜೇಬನು ಮಲಿಕಜೀವನನನ್ನು ಕುರಿತು, "ಬಖ್ತ್ಯಾರಖಾನ ಮಲಿಕಜೀವನ್, (ತನ್ನ ಪ್ರಾಣದಾತನಾದ ದರಾಯುಸನ ಗೋಣು ಮುರಿದ ನರಾಧಮನಿಗೆ ಧರ್ಮಮೂರ್ತಿಯಾದ ಔರಂಗಜೇಬ ಗಾಜಿಯು ಬಖ್ತ್ಯಾರಖಾನನೆಂಬ ಸಜ್ಜನೋಚಿತವಾದ ಬಿರುದು ಕೊಟ್ಟಿದ್ದನು!) ಬಖ್ತ್ಯಾರಖಾನ, ಇಂದಿನ ದರಬಾರದ ಮುಖ್ಯ ಕಾರ್ಯವು ಮೊದಲು ನಡೆಯಲಿ." ಎಂದು ಆಜ್ಞಾಪಿಸಿದನು. ಸಂಗಡಲೇ ಹತ್ತೆಂಟು ಜನ ಕಾವಲಗಾರರೂ ಕ್ರೂರಕರ್ಮದಲ್ಲಿ ನಿಷ್ಣಾತರೂ ದುರ್ವರ್ತತೆಯಿಂದ ಭೀಕರವಾಗಿ ತೋರುವವರೂ ಆದ ಕೊಲೆಗಡಕರು ಶೃಂಖಲಾಬದ್ಧನಾದ ಸುಲೇಮಾನಶಹನನ್ನು ಹಿಡುಕೊಂಡು ಬಂದು ಸಿಂಹಾಸನದ ಮುಂದೆ ತಂದು ನಿಲ್ಲಿಸಿದರು. ಉನ್ನತಾಂಗನೂ ಮಹಾಬಾಹುವೂ ಮದನಸುಂದರನೂ ದೀಪ್ತಿಮಯವಾದ ಅಂಗಕಾಂತಿಯುಳ್ಳವನೂ ಆದ ಆ ರಾಜಕುಮಾರನು ಗಂಭೀರ

ವಾದ ಮುಖಮುದ್ರೆಯನ್ನು ತಳೆದು ಒಳ್ಳೇ ಆಢ್ಯತೆಯಿಂದ ಹೆಜ್ಜೆಗಳನ್ನಿಕ್ಕುತ್ತ ಆ ವಧಸ್ಥಾನಕ್ಕೆ ಬರುತ್ತಿರುವದನ್ನು ಕಂಡು ನಾರೀ ಜನರ ಹೃದಯಗಳೆಲ್ಲ ಕರುಣೆಯಿಂದ ಕರಗಿ ಹೋಗಿ ಅವರೆಲ್ಲರೂ ಘೊಳ್ಳನೆ ಗೋಳಿಟ್ಟು ಅತ್ತರು. ಹೃದಯದ್ರಾವಕವಾಗಿರುವ ಆ ಕೋಲಾಹಲವನ್ನು ಕೇಳಿ ಕೆಳಗೆ ನೆರೆದಿರುವ ಸಭಾಜನರ ಹೃದಯಗಳಾದರೂ ತಲ್ಲಣಗೊಂಡವು. ಅನೇಕರ ಹೊಟ್ಟೆಯಲ್ಲಿ ದುಃಖವು ಒಟ್ಟರಿಸಿ ಬಂದಿತು. ಅನೇಕರು ವ್ಯಸನದಿಂದ ಅಧೋಮುಖರಾಗಿ ಕುಳಿತು ನಿಟ್ಟುಸಿರುಬಿಟ್ಟರು. ಅನಾಹೂತವಾಗಿರುವ ಆ ವ್ಯಸನೋದ್ಗಾರಗಳನ್ನು ಕೇಳಿ, ಆ ಘೋರತರವಾದ ಕೊಲೆಯನ್ನು ನೋಡಬಂದಿರುವ ಕ್ರೂರ ಜನರ ಮನದ ಕುತೂಹಲವು ಕೂಡ ವಿರಸವಾಗಿ ಹೋಯಿತು. ಇದನ್ನೆಲ್ಲ ನೋಡಿ, ಔರಂಗಜೇಬನು ತಪ್ತನಾಗಿ ಸಭೆಯ ವ್ಯವಸ್ಥಾಪಕನಾದ ಅಧಿಕಾರಿಯ ಮುಖವನ್ನು ಬಿರಿಗಣ್ಣಿನಿಂದ ನೋಡಿದನು.

"ಖಮೌಶ್ ಖಮೌಶ್" (ಸಾವಧಾನ! ಸಾವಧಾನ!) ಎಂದು ಆ ಅಧಿಕಾರಿಯು ಬಿಚ್ಚುಗತ್ತಿಯನ್ನೆತ್ತಿ ಭಯಪ್ರದವಾದ ಮುಖಮುದ್ರೆಯನ್ನಾಂತು ಸಿಡಿಲಿನಂತೆ ಗಡಗಡಿಸಿದನು. ಕೂಡಲೆ ಅನೇಕ ಜನ ಅಧಿಕಾರಿಗಳಾದರೂ "ಖಮೌಶ್ ಖಮೌಶ್!" ಎಂದು ಕೂಗಿ ರದ್ದು ಹಿಡಿಸಿದಾಕ್ಷಣವೇ ಎಲ್ಲ ಕಡೆಯಲ್ಲಿಯೂ ಅಶುಭಮಯವಾದ ಶಾಂತಿಯು ಮುಸುಗಿಕೊಂಡಿತು. ಅಂಥ ನಿಃಶಬ್ದತೆಯಲ್ಲಿ ಒಬ್ಬರೊಬ್ಬರ ಹೃದಯಗಳು ಡವಡವನೆ ಹಾರುತ್ತಿರುವ ಸಪ್ಪಳವು ಮಾತ್ರ ಒಬ್ಬರೊಬ್ಬರಿಗೆ ಸ್ಪಷ್ಟವಾಗಿ ಕೇಳಬರುತ್ತಿತ್ತು.

"ಸುಲ್ತಾನ್ ಸುಲೇಮಾನ್‌ಶಹಾ, ನೀನು ಈ ಸಾಮ್ರಾಜ್ಯದಲ್ಲಿ ಬಂಡು ಎಬ್ಬಿಸಿ ಸಹಸ್ರಾವಧಿ ಜನರ ಪ್ರಾಣಹಾನಿಗೆ ಕಾರಣನಾದ ಅಪರಾಧಕ್ಕಾಗಿ ನಿನಗೇನು ಶಾಸನವನ್ನು ವಿಧಿಸತಕ್ಕದ್ದೆಂಬ ಬಗ್ಗೆ ನಾವೂ ನಮ್ಮ ಮಂತ್ರಿಮಂಡಲವೂ ಕೂಡಿ ವಿಚಾರ ಮಾಡುವದಕ್ಕಾಗಿ ಈ ದರಬಾರ ಕೂಡಿಸಿದ್ದೇವೆ. ಆದಕ್ಕೆ ನಿನಗೇನಾದರೂ ಹೇಳುವದಿದೆ

ಏನು ? ” ಎಂದು ಔರಂಗಜೇಬನು ತನ್ನ ಗಡ್ಡವನ್ನು ತೀಡುತ್ತ ಕೇಳಿದನು.

ಸುಲೇಮಾನನು ಅಪಹಾಸದಿಂದ ನಕ್ಕು, ಹೊರಲಾರದಿದ್ದ ಬೇಡಿಗಳುಳ್ಳ ಕೈಗಳನ್ನೆತ್ತಿ ಪ್ರಣಾಮ ಮಾಡಿ, “ ಔರಂಗಜೇಬ ಕಾಕಾ, ಬಂಡುಗಾರನಿಗೆ ಶಾಸನವನ್ನು ವಿಧಿಸುವದಕ್ಕಾಗಿ, ಈ ದರಬಾರ ಕೂಡಿದ್ದರೆ ರಾಜದ್ರೋಹಿಗಳೂ ಪಿತೃದ್ರೋಹಿಗಳೂ ಬಂಡುಗಾರರೂ ಆದ ನಿಮಗೆ ನೂರಾರು ತಲೆಗಳಿದ್ದರೂ ಅವುಗಳನ್ನೆಲ್ಲ ಚಟಚಟನೆ ಛೇದಿಸಿ ಚಂಡಾಡಿದರೂ ನಿಮ್ಮ ಪಾಪವು ನೀಗದು.” ಎಂದು ಭೀತಿಯ ಲೇಶವಿಲ್ಲದೆ ಸ್ಪಷ್ಟವಾದ ವಾಣಿಯಿಂದ ನುಡಿದನು.

“ ಖಬರದಾರ್ ಸುಲೇಮಾನ್ ! ನಿನ್ನ ಅನಿಯಂತ್ರಿತವಾದ ನಾಲಿಗೆಯನ್ನು ನುಚ್ಚುನುಚ್ಚಾಗಿ ಕಡಿದು ಚಲ್ಲುವೆನು! ಎಚ್ಚರದಿಂದ ಮಾತಾಡು ! ” ಎಂದು ಕಾಲಿಲುಲ್ಲಾಖಾನನು ತನ್ನ ಖಡ್ಗವನ್ನೆತ್ತಿ ಬೆದರಿಸಿ ನುಡಿದನು.

“ ಖಾಲಿಲ್, ಪಂಜರದಲ್ಲಿ ಸಿಕ್ಕ ಸಿಂಹನ ಮುಂದೆ ನಿನ್ನಂಥ ನರಿಯು ಬಾಲವನ್ನೆತ್ತಿ ಕೂಗಿದರೆ ಅದರಲ್ಲಿ ವಿಶೇಷವೇನು ? ” ಎಂದು ಸುಲೇಮಾನನು ಖಾಲಿಲುಲ್ಲಾಖಾನನ್ನು ಉಪಮರ್ದಿಸಿ, ಔರಂಗಜೇಬನನ್ನು ಕುರಿತು, “ ಕಾಕಾಜೀ, ದಿಲ್ಲಿಯ ಸಿಂಹಾಸನಕ್ಕೆ ಅಧಿಕಾರಿಯಾದ ಸುಲೇಮಾನ್‌ಶಹನು ಅಪರಾಧಿಯೋ ಅಲ್ಲವೋ ಎಂಬ ನಿರ್ಣಯವನ್ನು ಮಾಡುವದು ಬಂಡುಗಾರರಾದ ನಿಮ್ಮ ಕೆಲಸವಲ್ಲ. ನಿಮ್ಮ ಮುಂದೆ ನಾನು ವಾದವನ್ನು ಮಾಡುವದೂ ಇಲ್ಲ.” ಎಂದು ಹೇಳಿದನು.

“ ಉನ್ಮತ್ತನಾದ ತರುಣನೆ, ನಾವು ದಯಾಪರರಾಗಿ ನಿನ್ನ ಹೇಳಿಕೆಯನ್ನು ಕೇಳಿಕೊಂಡು, ನಿನ್ನ ಅಪರಾಧದ ನಿರ್ಣಯವನ್ನು ಮಾಡಬೇಕೆಂದರೆ ನೀನು ಮರ್ಯಾದೆಯನ್ನು ದಾಟಿ ಈ ಸಿಂಹಾಸನದ ಅಪಮಾನವನ್ನು ಮಾಡುತ್ತಿರುವಿ. ನೀನು ಹಿಂದೆ ಮಾಡಿದ ದೋಷಗಳು ಹೇಗೇ

ಇರಲಿ, ಇದೊಂದೇ ಅಪರಾಧಕ್ಕಾಗಿ ನೀನು ದೇಹಾಂತ ಶಾಸನಕ್ಕೆ ಪಾತ್ರನಾಗಿರುವಿ."

"ಜರೂರ್! ಜರೂರ್! (ಅವಶ್ಯ! ಅವಶ್ಯ!) ದೇಹಾಂತ ಶಾಸನವಾಗಲೇ ಬೇಕು!" ಎಂದು ಕಾಲಿಲುಲ್ಲಾಖಾನ್, ಹಕೀಮು ದಾವುದ, ಬಖ್ತ್ಯಾರಖಾನ ಮುಂತಾದ ಪಾಪಾತ್ಮರೆಲ್ಲರೂ ಒಂದೇ ಉಸುರಿನಲ್ಲಿ ನುಡಿದರು.

"ಜರೂರ್,! ಜರೂರ್!" ಎಂದು ಸುಲೇಮಾನನು ನಗುತ್ತ ಆ ಅಧಮರೆಲ್ಲರಿಗೆ ತಲೆಬಾಗಿಸಿ, ಔರಂಗಜೇಬನನ್ನು ಕುರಿತು, "ಸುಲ್ತಾನ ಔರಂಗಜೇಬ, ನನ್ನ ರಕ್ತಪಾತವನ್ನು ನೋಡಿ, ಕೃತಾರ್ಥರಾಗಬಂದಿರುವ ಈ ನಿಮ್ಮ ಅನುಯಾಯಿಗಳ ಇಚ್ಛಾಭಂಗವನ್ನು ಮಾಡಬೇಡಿರಿ. ಕೊಲೆಗಡಕರನ್ನು ಕರದೇ ತಂದಿರುವಿರಿ; ಇನ್ನು ತಡವೇಕೇ?" ಎಂದು ಕೇಳಿದನು.

"ಸುಲೇಮಾನ್, ನೀನು ಜೀವದ ಹಂಗುದೊರೆದು ಬೇಕಾದ ಹಾಗೆ ಮಾತಾಡುವದು ಸಹಜವೇ! ಆದರೂ ನಿನ್ನದೇನಾದರೂ ಇಚ್ಛೆಯಿದ್ದರೆ ಕೇಳಿಕೊಂಡು, ಆಮೇಲೆ ನಮಗೆ ತೋಚಿದ ಶಾಸನವನ್ನು ವಿಧಿಸಲು ಅನುಕೂಲವಾಗುವದು!" ಎಂದು ಔರಂಗಜೇಬನು ಒಳ್ಳೇ ಸಮಾಧಾನಿಯ ಜಂಭದಿಂದ ನುಡಿದನು.

"ದುಶ್ಮನ್, ನನ್ನನ್ನು ಕೊಂದು ನೀನು ನಿನ್ನ ಪಾಪ ಪೂರ್ತಿಯನ್ನು ಮಾಡಿಕೊಳ್ಳಬೇಕೆಂಬದೇ ನನ್ನ ಇಚ್ಛೆಯು!"

ಈ ಮಾತು ಕೇಳಿ ಔರಂಗಜೇಬನಿಗೆ ಪರಮಾವಧಿಯ ಕೋಪ ಬಂದಿತು. ಆವೇಶದಲ್ಲಿ ಅವನ ಗಡ್ಡಮಿಾಸೆಗಳು ಸೆಟೆದು ನಿಂತವು. ಕರಕರನೆ ಹಲ್ಲುಕರೆದು ಅವನು ತನ್ನ ಖಡ್ಗವನ್ನೆತ್ತಿ ಸುಲೇಮಾನನ್ನು ಕಡಿದು ಹಾಕಬೇಕೆಂದು ಸಿಂಹಾಸನದಿಂದ ಹಾರಿ ಮುಂದಕ್ಕೆ ಬಂದನು. ಆಗ ನಾರೀವೃಂದದಲ್ಲಿ ಯಾರೋ ಚಿಟ್ಟನೆ ಚೀರಿದ ದೊಡ್ಡ

ಧ್ವನಿಯಾಯಿತು ! ಮರ್ಮಭೇದಕವಾದ ಆ ಆಕ್ರೋಶವನ್ನಾರು ಮಾಡಿದರೆಂದು ಔರಂಗಜೇಬನು ನೋಡುವಷ್ಟರಲ್ಲಿಯೇ ಧಡಲ್ಲನೆ ಒಬ್ಬ ತರುಣಿಯ ದೇಹವು ಉಪ್ಪರಿಗೆಯ ಮೇಲಿಂದ ಅವನ ಕಾಲಿನಲ್ಲಿಯೇ ಬಿದ್ದಿತು !

ಸಭೆಯಲ್ಲೆಲ್ಲ ಹಾಃಹಾಃಕಾರವೆದ್ದಿತು. ಮೇಲೆ ನಾರಿಯರೆಲ್ಲರೂ ಕರುಣಾಸ್ಪದವಾದ ಆಕ್ರೋಶವನ್ನು ಮಾಡಿದರು. 'ಇದೇನಾಯಿತು ? ಯಾರಿವಳು !' ಎಂದು ಉದ್ಗಾರ ತೆಗೆದು, ಔರಂಗಜೇಬನು ಮೃತಪ್ರಾಯಳಾದ ಆ ತರುಣಿಯ ಮುಖಾವರಣವನ್ನು ತೆಗೆದು ನೋಡಿ, "ಶಹರ್‌ಜಾದಾ ಬೇಗಮ್ !" ಎಂದು ಉದ್ಗಾರ ತೆಗೆದನು. ಉಗ್ರತೇಜಸ್ವಿಯಾದ ಆ ರುದ್ರರೂಪಿಯ ಮುಖವು ಭೀತಿಯಿಂದ ಮ್ಲಾನವಾಗಿ ತೋರಿತು. ಆತನ ಅಂಗಾಂಗಗಳಲ್ಲೆಲ್ಲ ರೋಮಾಂಚಗಳೆದ್ದು ಗದಗದನೆ ನಡುಗಿದನು. "ಶಹರ್ಜಾದಾ ಬೇಗಮ್" ಎಂಬ ಶಬ್ದೋಚ್ಚಾರವನ್ನು ಕೇಳಿದಾಕ್ಷಣವೇ ಸುಲೇಮಾನನು ಶೋಕಸಮ್ಮೂಢನಾಗಿ ತಾನು ಜನಸಮೂಹದ ಮಧ್ಯದಲ್ಲಿರುವೆನೆಂಬದನ್ನು ಮರೆತು ಶಹರ್ಜಾದೆಯ ದೇಹದ ಮೇಲೆ ಬಿದ್ದು ಬಹುಪರಿಯಾಗಿ ವಿಲಾಪ ಮಾಡಿದನು. "ಶಹರ್ಜಾದಾ ಬೇಗಮ್ ! ಪ್ರಿಯಂತಮೆ ಶಹರ್ಜಾದೆ ! ಇದೇನು ಸಾಹಸ ಮಾಡಿದಿ ? ಪ್ರಿಯೆ, ಹರ್ಷಜನಕವಾದ ನಿನ್ನ ಸುಹಾಸ್ಯಮುಖವು ಪ್ರೇತಕಳೆಯನ್ನಾಂತಿತೆ ? ವಧೂಕುಲಭೂಷಾಮಣಿಯೆ, ಹತಭಾಗ್ಯನಾದ ನನ್ನಲ್ಲಿ ಪ್ರೇಮವನ್ನು ಬಳಿಸಿ, ನೀನಿಂಥ ದುರ್ಮರಣವನ್ನು ಹೊಂದಿದಿಯಾ ? ಸುಲೇಮಾನ್, ಕಠಿಣತರವಾದ ನಿನ್ನ ಹೃದಯವು ಈ ಅನರ್ಥವನ್ನು ನೋಡಿ ಶಕಲಶಕಲವಾಗಿ ಒಡೆದು ಸಿಡಿದು ಹೋಗಲೊಲ್ಲದೇಕೆ ? ಶಹರ್ಜಾದೆ, ಮರಣಸಮಯದಲ್ಲಿ ನೀನು ನನಗೆಂಥ ವ್ಯಸನವನ್ನುಂಟುಮಾಡಿದಿ ! ನಿಶ್ಚಲವಾದ ಸಮಾಧಾನದಿಂದ ಸಾಯಬೇಕೆಂದು ನಿಶ್ಚಯಿಸಿಕೊಂಡು ನಾನೀ ವಧಸ್ಥಾನಕ್ಕೆ ಬಂದೆನು ! ಆ ಸಮಾಧಾನವೆಲ್ಲ ಈಗ ಚಲ್ಲಾಪಿಲ್ಲೆಯಾಗಿ ಹೋಯಿತು ! ನಾನಿನ್ನು ಹಲುಬಿ ಹಂಬಲಿಸಿ ಸಾಯಬೇಕಾಯಿತೆ ? ಅಯ್ಯೋ ! ಇವಳು ಬಿಕ್ಕಿದಳು ! ಪ್ರಾಣಬಿಟ್ಟಳು !!

ಸಾಯಿ ಸುಲೇಮಾನ್ .... ! ” ಎಂದು ಮೂರ್ಛಿತನಾಗಿ ಬಿದ್ದನು.

ಸುಲೇಮಾನನ ಪ್ರೇಮೋದ್ಗಾರಯುತವಾದ ಶೋಕಾಕ್ರೋಶವನ್ನು ಕೇಳಿ ಅಂತಃಪುರದ ನಾರಿಯರೆಲ್ಲರೂ ವಿಧವಿಧದ ಮನೋವಿಕಾರಗಳಿಂದ ಪೀಡಿತರಾಗಿ 'ಹಾಯ್! ಹಾಯ್!' ಎಂದೆನ್ನುತ್ತ ನಿಟ್ಟುಸಿರಿಟ್ಟು ಅಖಂಡ ವಾದ ಕಂಬನಿಗಳನ್ನು ಸುರಿಸಿದರು. ಅನೇಕರು ದುಃಖಿದುಃಖಿಸಿ ಕೊರಗಿ ದರು. ಅನೇಕರು ದೊಡ್ಡ ಧ್ವನಿತೆಗೆದು ಅತ್ತರು.

ಕಠಿಣಹೃದಯನಾದ ಔರಂಗಜೇಬನ ಎದೆಯು ಕೂಡಾ ಅಲ್ಲಿ ನಡೆ ದಿರುವ ಪ್ರಕಾರವನ್ನೆಲ್ಲ ಕಂಡು ತಲ್ಲಣಗೊಂಡಿತು. ಸುಲೇಮಾನನ ಶಿರಚ್ಛೇದವನ್ನು ಆ ದಿವಸ ಮಾಡಿಸಿಯೇ ತೀರಬೇಕೆಂದು ಸಂಕಲ್ಪವನ್ನು ಮಾಡಿಕೊಂಡವನು ಅದನ್ನು ಆ ದಿವಸ ನಿಲ್ಲಿಸಿ, ಇನ್ನೊಂದು ದಿವಸ ನೋಡೋಣ ಎಂದು ಚಿಂತಿಸಿ, ಅವನು ಸಭಾವಿಸರ್ಜನವಾಗಲೆಂದು ಹೇಳಿ ಹೊರಟು ನಡೆದನು. ಮೂರ್ಛೆಯಲ್ಲಿದ್ದ ಸುಲೇಮಾನನನ್ನು ಜವಾನರು ಹಾಗೆಯೇ ಎತ್ತಿಕೊಂಡು ಕಾರಾಗೃಹಕ್ಕೆ ಒಯ್ದರು.

— ಸಮಾಪ್ತವು —

8849—46